# ಗೃಹೋಪಕರಣಗಳಿಗೆ

# ಕೆನರಾ ಸೇಲ್ಸ್

ಕೆನರಾ ಸೇಲ್ಸ್ ಕಾರ್ಪೊರೇಷನ್ ಲಿಮಿಟೆಡ್
ಕೊಡಿಯಾಲಬೈಲು, ಮಂಗಳೂರು-3

## ನೀವು ನಮ್ಮಲ್ಲಿ ವಿಶ್ವಾಸವಿಡಬಹುದು

### ತಯಾರಕರ ಆಯ್ಕೆ

ಪ್ರಸಿದ್ಧರಾದ ತಯಾರಕರು ತಮ್ಮ ಗೃಹೋಪಕರಣ ವಸ್ತುಗಳನ್ನು ಕೆನರಾ ಸೇಲ್ಸ್ ಕಾರ್ಪೊರೇಷನ್ ಮೂಲಕ ವಿತರಣ ಮಾಡುವುದರಿಂದ ಲಾಭವಿದೆಯೆಂದು ತಿಳಿಯುತ್ತಾರೆ. ಅದಕ್ಕಿರುವ ಕಾರಣ ಊಹಿಸಲು ಕಷ್ಟವಿಲ್ಲ. 55 ವರ್ಷಗಳ ಮಾರಾಟಾನುಭವ ನಮಗಿರುವುದೇ ಅದಕ್ಕೆ ಕಾರಣ. ಎಲ್ಲ [illegible]ಂತ ಮಿಗಿಲಾಗಿ ನಿಮ್ಮ ಮನೆಗೆ ಉಪಯುಕ್ತ [illegible]ವೇನೆಂಬುದು ನಮಗೆ ಚೆನ್ನಾಗಿ ತಿಳಿದಿದೆ.

### ವ್ಯಾಪಾರಿಗಳಿಗೆ ಸೂಚನೆ

ನೀವು ವ್ಯಾಪಾರಿಗಳಾಗಿದ್ದಲ್ಲಿ, ಸ್ಟಾಕಿನ ಬಗ್ಗೆ ಚಿಂತೆ ಮಾಡಬೇಡಿ. ನಿಮಗೆ ಬೇಕಾದ ವೇಳೆಯಲ್ಲಿ, ಒಳ್ಳೆಯ ಗೃಹೋಪಕರಣಗಳನ್ನು ನಾವು ನಿಮಗೊದಗಿಸುತ್ತೇವೆ. ದೀರ್ಘಾವಧಿಯ ಕಾಲದವರೆಗೆ ನಿಮ್ಮ ಬಂಡವಾಳವನ್ನು ತೊಡಗಿಸಿಡುವ ಆಗತ್ಯವಿಲ್ಲ. ನಿಮ್ಮ ಗ್ರಾಹಕರನ್ನೂ ನೀವು ಸಂತೋಷಪಡಿಸಬಹುದು.

### ಗ್ರಾಹಕರ ಗಮನಕ್ಕೆ

ಗ್ರಾಹಕರಾದ ನೀವು, ಲಾಭದಾಯಕ ಬೆಲೆಗಳಲ್ಲಿ ಗೃಹೋಪಕರಣಗಳನ್ನು ನಿಮಗೊದಗಿಸುವ ಬಗ್ಗೆ ನಮ್ಮಲ್ಲಿ ನೀವು ವಿಶ್ವಾಸವಿಡಬಹುದು. ಅದರಿಂದಲೇ ಅಧಿಕಸಂಖ್ಯೆಯಲ್ಲಿ ಗ್ರಾಹಕರು ತಮ್ಮ ಬೇಡಿಕೆಗಳಿಗಾಗಿ ನಮ್ಮತ್ತ ತಿರುಗುತ್ತಿದ್ದಾರೆ.



CSC-6780 Rev.

# 'ಕಸ್ತೂರಿ' ಅರ್ಧವಾರ್ಷಿಕ ಪರಿವಿಡಿ

## ಸೆಪ್ಟಂಬರ್ ೧೯೭೨ ರಿಂದ ಫೆಬ್ರುವರಿ ೧೯೭೩ ರ ವರೆಗೆ

**ಕ್ರಮ: ಲೇಖನದ ಹೆಸರು, ತಿಂಗಳು, ಪುಟ ಸಂಖ್ಯೆ**

**ಸೆ. = ಸೆಪ್ಟಂಬರ್, ಅ. = ಅಕ್ಟೋಬರ್, ನ. = ನವಂಬರ್, ಡಿ = ಡಿಸೆಂಬರ್**

**ಜ. = ಜನೆವರಿ, ಫೆ. = ಫೆಬ್ರುವರಿ**

**ಕಲೆ**



**ಚರ್ಚೆ, ಚಿಂತನ**



**ಜೀವನ ಚರಿತ್ರೆ**

**ಸಾಮಾನ್ಯ**



**ಸಾಹಸ**



**ಹರಟೆ**

# ಕಸ್ತೂರಿ

ಪ್ರಕಟನೆ :
ಪ್ರತಿ ತಿಂಗಳ ೧ ನೇ ದಿನಾಂಕ

ಸಂಪಾದಕರು :
ರಂಗನಾಥ ದಿವಾಕರ

ಸಹಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕ ಶಿಕ್ಷಣ ಟ್ರಸ್ಟ್ ಹುಬ್ಬಳ್ಳಿ

ಕಚೇರಿ :
ಕಸ್ತೂರಿ ಕಾರ್ಯಾಲಯ ಹುಬ್ಬಳ್ಳಿ

ಕಲೆ :
ಕೆ. ಬಿ. ಕುಲಕರ್ಣಿ

ಮುದ್ರಣ :
ಸಂಯುಕ್ತ ಕರ್ನಾಟಕ ಪ್ರೆಸ್
ಹುಬ್ಬಳ್ಳಿ

ಮುಖಚಿತ್ರ :
ನೀರೆಯರು
ಪಿ. ಕಾರಂತ

ಚಂದಾ ದರ

| | | |
|---|---|---|
| ೩ ವರ್ಷ (ಅಂಚೆ ಸೇರಿ) | | ರೂ. ೨೮-೦೦ |
| ೨ ವರ್ಷ | ,, | ರೂ. ೨೦-೦೦ |
| ೧ ವರ್ಷ | ,, | ರೂ. ೧೧-೦೦ |
| ಅರ್ಧ ವರ್ಷ | ,, | ರೂ. ៦-೦೦ |

**KASTURI February 1973**


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ ರೂಪಾಂತರ ಇವೆಲ್ಲ ಆಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗೂ ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖನಗಳನ್ನು ಕಳಿಸಿದರೆ ಅವುಗಳ ಬಗ್ಗೆ ಬೇಗ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ ಲೇಖಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನು ಕಳಿಸಿರಬೇಕು. "ಇದುವೇ ಜೀವ" ಮೊದಲಾದ ಚುಟುಕುಗಳನ್ನು ತಿರುಗಿ ಕಳಿಸಲು ಅಥವಾ ಆ ಬಗ್ಗೆ ಪತ್ರವ್ಯವಹಾರ ಮಾಡಲು ಸಾಧ್ಯವಿಲ್ಲ. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳ ಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದುಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ, "ಕಸ್ತೂರಿ"ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ, ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿ ತಿಂಗಳ "ಕಸ್ತೂರಿ" ಆಯಾ ತಿಂಗಳ ೧ ನೇ ದಿನಾಂಕದೊಳಗೆ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲುಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ



ಪುಸ್ತಕ ವಿಭಾಗ

# ಸಹಚಿಂತನ

ಸಮತಾವಾದಿ ಸಮಾಜದ ನಿರ್ಮಾಣದತ್ತ ಕುರುಡು ಓಟ ನಡೆಸಿರುವ ನಮ್ಮ ಘನ ಸರಕಾರದ ಕಾಲ್ತುಳಿತಕ್ಕೆ ಸಿಕ್ಕಿ, ಬಹಳಮಾಡಿ ನಿರ್ವಿಣ್ಣರಾಗುತ್ತಿರುವ ಮಧ್ಯಮವರ್ಗದ ಜನತೆಯ ಇಂದಿನ ಪರಿಸ್ಥಿತಿಯನ್ನು 'ಭಾರತೀಯ ಮಧ್ಯಮ ವರ್ಗ' (ಜನವರಿ) ಚೆನ್ನಾಗಿ ಪ್ರತಿಬಿಂಬಿಸಿದೆ.

ಬುದ್ಧಿಪ್ರಧಾನವಾದ ಈ ವರ್ಗವನ್ನು ಉಚ್ಚಾಟಿಸಿ, ದೇಶದಲ್ಲಿ ಶ್ರೀಮಂತ ಮತ್ತು ಬಡವ ಎಂಬೆರಡೇ ವರ್ಗಗಳನ್ನು ಉಳಿಸಿಕೊಳ್ಳಲು ನಮ್ಮ ಮುಖಂಡರು ಪ್ರತಿಜ್ಞೆಗೈದಿದ್ದಾರೇನೋ ಎಂದು ಒಮ್ಮೊಮ್ಮೆ ಸಂದೇಹ ಬರುವಂತಾಗುತ್ತದೆ—ಎಂಬ ವಾಕ್ಯ ಮನೋಜ್ಞವಾಗಿದೆ; ಅಕ್ಷರಶಃ ಸತ್ಯವೆನಿಸುತ್ತದೆ.

ಕೂಡ್ಲಿಗಿ —ಯಮ್. ಅನಂತೇಶರಾವ್

ನಿರ್ನಾಮವಾಗುತ್ತಿರುವ ಮಧ್ಯಮವರ್ಗದ ಸ್ಥಾನಮಾನ ಹಾಗು ಮಹತ್ವಗಳನ್ನು ವಿಶ್ಲೇಷಿಸಿದ ಲೇಖನ, ಸಮಯೋಚಿತವಾಗಿದೆ. ಲೇಖನದ ಕೊನೆಯ ವಾಕ್ಯವು ಎಷ್ಟು ದಿಟ ಎಂಬುದಕ್ಕೆ ಒಂದು ಜೀವಂತ (ಸಾಂಕೇತಿಕ) ಉದಾಹರಣೆ ರೇಲ್ವೆಗಳಲ್ಲಿ ಇದುವರೆಗಿದ್ದ ಸೆಕೆಂಡ್ ಕ್ಲಾಸ್‌ನ ಹಠಾತ್ ಉಚ್ಚಾಟನೆ.

ಸಾಹಿತ್ಯ ಹಾಗೂ ವೈಚಾರಿಕ ಪ್ರಪಂಚಗಳಿಗೆ ಪ್ರಬುದ್ಧತೆ ಪ್ರಾಪ್ತವಾಗುವುದು ಕೇವಲ ವಿದ್ಯಾವಂತರ ಅಥವಾ ಪದವೀಧರರ ಹೆಣಗಾಟದಿಂದ ಮಾತ್ರ ಎಂಬ ಬಹುಜನರ ತಿಳುವಳಿಕೆಯನ್ನು ಪಲ್ಲಟಗೊಳಿಸಿದ ಶ್ರೇಯಸ್ಸು ಎರಿಕ್ ಹಾಫರ್‌ನದು. (ಜನವರಿ) ಶ್ರೀ ಸಂಜೀವರಾಯರ ಸಂಗ್ರಹ ಶಕ್ತಿಯಿಂದಾಗಿ ಹಾಫರ್‌ನ ವ್ಯಕ್ತಿಚಿತ್ರ ಹಾಗೂ ಸೂಕ್ತಿಗಳು ಅತ್ಯಂತ ಮನೋಜ್ಞವಾಗಿವೆ.

ಗದಗ —ಅನಂತ ಇಂಚಲ

'ಭಾರತೀಯ ಮಧ್ಯಮವರ್ಗ' ಲೇಖನ ಸಕಾಲಿಕ. ಈ ವರ್ಗದವರ ಇಂದಿನ ದುರವಸ್ಥೆಗೆ ಕಾರಣ ಈ ವರ್ಗದವರ ಮಡಿವಂತಿಕೆ ಮತ್ತು ಹುಸಿ ಸಾಮಾಜಿಕ ಪ್ರತಿಷ್ಠೆ. ಆದರೆ ಜಗತ್ತಿಗೆ ಬುದ್ಧಿಯ ಅವಶ್ಯಕತೆ ಇರುವ ತನಕವೂ ಈ ವರ್ಗ ತುಳಿಸಿಕೊಂಡಾದರೂ ಉಳಿಯುವುದು ಕೇವಲ ಅನಿವಾರ್ಯ. ಈ ದುರವಸ್ಥೆಯಿಂದ ಮುಕ್ತವಾಗುವ ಸಾಮರ್ಥ್ಯ ಕೂಡ ಈ ಜನಕ್ಕೇ ಇದೆ ಹೊರತು ಅನ್ಯರು ಇದನ್ನು ಉದ್ಧರಿಸಲಾರರು.

ಬೆಂಗಳೂರು —ಬಿ. ಎನ್. ಗುರುರಾಜ್

ಜನೆವರಿ 'ಕಸ್ತೂರಿ'ಯಲ್ಲಿ 'ಪೃಥ್ವಿರಾಜ ಕಪೂರ್' ಲೇಖನದಲ್ಲಿ ಲೇಖಕರು ಹೇಳಿದಂತೆ ಅವರ ಹಿರಿಯ ಮಗನ ಹೆಸರು ರಣಧೀರ್ ಅಲ್ಲ, ರಣವೀರ ಆಗಬೇಕು. ಏಕೆಂದರೆ, ರಾಜ ಕಪೂರನ ಹೆಸರು ಸೆನ್ಸಾರ್ ಬೋರ್ಡಿನ ಸರ್ಟಿಫಿಕೇಟಿನಲ್ಲಿ ಅಪ್ಲಿಕಂಟ್ ಎಂಬಲ್ಲಿ ರಣವೀರ ರಾಜಕಪೂರ್ ಎಂದಿದೆ.

ನರಗುಂದ —ವಿ. ಬಿ. ಹಂಪಣ್ಣನವರ

ಡಿಸೆಂಬರ್ ೭೨ರ ಸಂಚಿಕೆಯಲ್ಲಿ ಬಂದ ಊರ್ಮಿಳಾ ರಾಜೇಶ್ವರಿ ಅವರ 'ಎಲೆಯೊಳಗಿನ ಅದ್ಭುತ ಪ್ರಪಂಚ' ಲೇಖನ ಚೆನ್ನಾಗಿದೆ. ಆದರೆ ಕೆಲವು ಇಂಗ್ಲಿಷ್ ಶಬ್ದಗಳ ಉಚ್ಚಾರಣೆಯನ್ನು ತಪ್ಪಾಗಿ ಕೊಡಲಾಗಿದೆ. ಉದಾ: Parenchyma=ಪ್ಯಾರೆಂಖೀಮಾ; Collenchyma = ಕಾಲೆಂಖೀಮಾ ಎಂದಿದ್ದು, ಇವನ್ನು ಕ್ರಮವಾಗಿ ಪ್ಯಾರನ್‌ಕೈಮಾ, ಕೋಲನ್‌ಕೈಮಾ ಎಂದು ಉಚ್ಚರಿಸಲಾಗುತ್ತದೆ.

ಹುಬ್ಬಳ್ಳಿ —ಸಿ. ಸಿ. ಪಾಟೀಲ

**[ಚೇಂಬರ್ಸ್ ಶಬ್ದಕೋಶದ ಪ್ರಕಾರ ಈ ಎರಡು ಶಬ್ದಗಳ ಉಚ್ಚಾರ ಅನುಕ್ರಮವಾಗಿ ಪರೆಂಕಿಮಾ ಮತ್ತು ಕಾಲೆಂಕಿಮಾ ಎಂದಾಗುತ್ತದೆ. —ಸಂ.]**

ಶ್ರೀ ಶಶಿಧರ ವಿಶ್ವಾಮಿತ್ರರು 'ಕಸ್ತೂರಿ'ಯ ಮೂಲಕ ಕೊಟ್ಟ ಎರಡೂ ಕಥೆಗಳು ('ಶಶಸಂಸಾರ' ಮತ್ತು 'ತಿತ್ತಿರಿ ಸಂಸಾರ') ಒಂದಕ್ಕಿಂತ ಒಂದು ಚೆನ್ನಾಗಿವೆ. ವನ್ಯ ಜೀವನವನ್ನು ನೈಜವಾಗಿ ಮನ ಮುಟ್ಟುವಂತೆ ಚಿತ್ರಿಸುವ ಕಲೆ ಅವರಿಗೆ ಕರಗತವಾಗಿದೆ. ಅವರಿಂದ ಇದೇ ರೀತಿಯ ಲೇಖನಗಳನ್ನು ನಿರೀಕ್ಷಿಸೋಣವೇ?

ಕಟ್ಟಾಯ (ಹಾಸನ) —ಎನ್. ದೇವರಾಜೇಗೌಡ

ಜನೆವರಿ 'ಕಸ್ತೂರಿ'ಯಲ್ಲಿ ಶ್ರೀ ಎಸ್. ವೆಂಕಟೇಶಮೂರ್ತಿಯವರ 'ಜೀವಾಧಾರ ಧಾತು

ಇಂಗಾಲ' ಎಂಬ ಲೇಖದಲ್ಲಿ ಕೆಲವು ಉಪಯುಕ್ತ ಸಂಗತಿಗಳು ಬಿಟ್ಟುಹೋಗಿವೆ. ಯುದ್ಧ ಕಾಲದಲ್ಲಿ ನಮ್ಮ ಸೈನಿಕರು ಧರಿಸುವ ಮೊಗವಾಡ ದಲ್ಲಿ ಚುರುಕುಗೊಳಿಸಿದ ಇಂಗಾಲವನ್ನು ಬಳಸಿ ರುತ್ತಾರೆ. ಅದು ಸೈನಿಕರನ್ನು ವಿಷವಾಯು-ಗಳಿಂದ ಸಂರಕ್ಷಿಸುತ್ತದೆ. ಕಚ್ಚಾ ಸಕ್ಕರೆಯನ್ನು ನಿರ್ವರ್ಣಗೊಳಿಸಲು ಇಂಗಾಲದ ಬಳಕೆ ಅನಿವಾರ್ಯ. ನೀರಿನ ಸರಬರಾಜು ವ್ಯವಸ್ಥೆ-ಯಲ್ಲಿ, ಕಾರ್ಖಾನೆಗಳಿಗೆ ಬೇಕಾಗುವ ಶುದ್ಧ ನೀರಿನ ತಯಾರಿಕೆಯಲ್ಲಿ ಇಂಗಾಲದ ಮಹತ್ವ ಅಪರಿಮಿತ. ಜೀವಾತುಗಳು, ಆಂಟಿಬಯೋಟಿಕ್ಸ್, ಜೆಲಾಟಿಕ್, ಪೆಕ್ಟಿಕ್, ಎಸ್ಟರುಗಳು, ಗ್ಲಿಸರಾಲ್, ಗ್ಲೈಕಾಲ್ ಮುಂತಾದವುಗಳ ಉದ್ಭವ ಇಂಗಾಲದ ಸಹಾಯದಿಂದಲೇ ಎಂಬುದನ್ನು ಲೇಖಕರು ಏಕೆ ಕೈಬಿಟ್ಟಿದ್ದಾರೊ ತಿಳಿಯಲಿಲ್ಲ.

ವಂಡಗದ್ದೆ —ಆರ್. ಸುಬ್ಬರಾಯ

ಜನವರಿ 'ಕಸ್ತೂರಿ'ಯಲ್ಲಿ ಶ್ರೀ ಶ್ರೀನಿಧಿರಾವ್ ಬರೆದಿರುವ 'ಕೊಂದವರು ಯಾರು?' ರಹಸ್ಯ ಪ್ರಕರಣ ಓದಿದೆ. ೧೯೧೪ರಲ್ಲಿ ಅಮೇರಿಕದಲ್ಲಿ ನಡೆದ ಸತ್ಯಕಥೆಯಲ್ಲಿ ಶಿವಜಪ ಹೇಗೆ ಬಂತು? (ಪುಟ ೧೧೫ರಲ್ಲಿ ಕೆಳಗಡೆಯ ಪ್ಯಾರ ಮೊದಲಿನ ಸಾಲು) ಅಮೇರಿಕದಲ್ಲೂ ಶಿವಜಪ ಮಾಡುತ್ತಿದ್ದ ರೆಂದು ಲೇಖಕರ ಅಭಿಪ್ರಾಯವೊ?

ಸುಂಟೀಕೊಪ್ಪ (ಕೊಡಗು)

—ಕಾನಜ್ಜೈಲನ ಸೌ. ಶ್ಯಾಮಲಾದೇವಿ

**[ಇಲ್ಲಿ ಶಿವಜಪ ಎಂದಿರುವುದು ದೇವರ ಧ್ಯಾನವೆಂಬ ವ್ಯಾಪಕಾರ್ಥದಲ್ಲೇ ಹೊರತು ಅಮೇರಿಕದಲ್ಲೂ ಶಿವ ಎಂಬ ಹೆಸರಿನಿಂದ ದೇವರನ್ನು ಪೂಜಿಸುತ್ತಿದ್ದರೆಂಬ ಅಭಿಪ್ರಾಯ ಲೇಖಕರದಲ್ಲ. —ಸಂ]**

ಫ್ರೆಂಚ್ ವಿಜ್ಞಾನಿ ಮೊನೋದರ Chance and Necessityಯ ಸಂಗ್ರಹವಾಗಿ ಬಂದ 'ವಿಶ್ವದಲ್ಲಿ ಮನುಷ್ಯ ಏಕಾಕಿಯೇ?' ಎಂಬ ಲೇಖನದ (ಕಸ್ತೂರಿ, ಡಿಸೆಂಬರ್ ೭೨) ಬಗ್ಗೆ ಜನವರಿ ಸಂಚಿಕೆಯಲ್ಲಿ ಶ್ರೀ ಅನಂತೇಶರಾವ್ ಮತ್ತು ಚಿದಂಬರಾನಂದರು ಬರೆದ ಪ್ರತಿಕ್ರಿಯೆ ಗಳನ್ನು ನೋಡಿದೆ. ನನ್ನ ಅಭಿಪ್ರಾಯದಲ್ಲಿ ಈ ವಿಷಯದಲ್ಲಿ ಈಶ್ವರವಾದಿಗಳು ಚರ್ಚಿಸಲು ಬರು ವುದೇ ವ್ಯರ್ಥ. ದೇವರು ತರ್ಕಕ್ಕೆ ಒಳಪಟ್ಟವನಲ್ಲ, ಅಗ್ರಾಹ್ಯ, ಅನುಭವೈಕ ಗಮ್ಯ ಎಂಬುದು ಎಲ್ಲ ಅಧ್ಯಾತ್ಮವಾದಿಗಳ ಮತ್ತು ಈಶ್ವರವಾದಿ ಗಳ ನಿಲುಮೆಯಾಗಿದೆ. ವಿಜ್ಞಾನಿಗಳಾದರೋ ತರ್ಕ ಪ್ರಯೋಗಗಳಿಂದ ನಿಷ್ಕರ್ಷೆಯಾದದ್ದನ್ನೇ ಒಪ್ಪತಕ್ಕವರು. ಇಬ್ಬರು ಬೇರೆ ಬೇರೆ ಲೋಕ ಗಳಲ್ಲೇ ಇರುವಾಗ ಅವರೊಳಗೆ ಸಂಭಾಷಣೆ ಸಾಧ್ಯವೇ ಇಲ್ಲ. ಮೊನೋದರ ದೃಷ್ಟಿಯಲ್ಲಿ ಯಾವ ದೈವೀ ಹಸ್ತಕ್ಷೇಪವಿಲ್ಲದೇನೇ ಜೀವ ಸೃಷ್ಟಿ ಮತ್ತು ವಿಕಾಸವನ್ನು ವಿವರಿಸಲು ಬರುತ್ತದೆ— ಎಂಬುದು ಮುಖ್ಯವಾದ ಅಂಶ. ಕೃರ್ತವಾದಕ್ಕೆ ಅವರ ಮುಖ್ಯ ಆಕ್ಷೇಪ, ಸೃಷ್ಟಿ ಯಲ್ಲಿ ಕಾಣಿಸುವ ಯೋಜನಾಹೀನತೆ.

ಚಿದಂಬರಾನಂದರು ನಮ್ಮ ಪ್ರಾಚೀನ ಋಷಿಗಳ ಸಂಶೋಧನೆಯ ಫಲವಾಗಿ ಭಗವಂತನ ಲೀಲಾವಿನೋದವೇ ಸೃಷ್ಟಿಯ ಉದ್ದೇಶವೆಂಬ ನಿಗಮನವಾಗಿದೆಯೆನ್ನುತ್ತಾರೆ. ಲೀಲಾವಾದದ ತೀರ್ಮಾನಕ್ಕೆ ಯಾವುದೇ ಘನವಾದ ಸಂಶೋಧನೆ ಅಗತ್ಯವೆಂದು ಚಿದಂಬರಾನಂದರಿಗೆ ನಿಜವಾಗಿ ಅನಿಸುತ್ತದೆಯೇ? ಅದು ನಿಜಕ್ಕೂ ನಮಗೆ ಗೊತ್ತಿಲ್ಲ ಎನ್ನುವುದರ ಪರ್ಯಾಯವಲ್ಲವೆ? ಈ ತೀರ್ಮಾನವನ್ನು ಗಂಭೀರವಾಗಿ ತೆಗೆದು ಕೊಂಡರೆ ದೇವರು ಬಾಲಕರಂತೆ ಅಜ್ಞನೆಂದಾಗಲಿ ಅಥವಾ ಪೇಶನ್ಸ್ ಆಡುವ ಬೇಸರಗುಳಿಯೆಂದಾ ಗಲಿ ಹೇಳಬೇಕಾಗುವುದಿಲ್ಲವೇ? ಇದು ದೇವರನ್ನು ಮನುಷ್ಯ ಮಟ್ಟಕ್ಕಿಳಿಸುವುದಾಗುತ್ತದೆ.

ನಿಜವಾಗೆಂದರೆ, ನಾವು ದೇವರು ಇದ್ದಾನೆ ಎಂಬ ದೃಢವಾದ Subjective ತೀರ್ಮಾ-ನಕ್ಕೆ ಬಂದ ಮೇಲೆ ಸೃಷ್ಟಿಯಲ್ಲಿ ಕಾಣುವ ಅವ್ಯವಸ್ಥೆಗಳಿಗೆ ಅವನ ಲೀಲೆ, ಅವನ ಇಚ್ಛೆ ಇತ್ಯಾದಿ Objective ವಿವರಣೆಗಳನ್ನು ಹುಡುಕುತ್ತೇವೆ. ದೇವರು ಉಂಟೇ ಎಂಬ ಸಂಶಯದ ನಿಲುವಿನಿಂದ ಹೊರಟವನಿಗೆ ಸಂಶೋ-ಧನೆಗಳಿಂದ ಇಲ್ಲವೆಂದೇ ಉತ್ತರ ಬಂದೀತು.

ಹುಬ್ಬಳ್ಳಿ —ಶ್ರೀನಿಧಿರಾವ್



ಸಂಚಿಕೆ : ೬ ವರ್ಷ : ೧೭

# ಕಸ್ತೂರಿ

ಫೆಬ್ರುವರಿ ೧೯೭೩

## ಯಾರು ಶ್ರೇಷ್ಠ?

ಗ್ರೀಸ್ ದೇಶದಲ್ಲಿ ಸಾಕ್ರೆಟೀಸ್ ಎಂಬ ತತ್ತ್ವಜ್ಞಾನಿಯಿದ್ದನು. ಸತ್ಯಶೋಧಕನಾಗಿದ್ದ ಅವನಿಗೆ ಪ್ರಚಾರದ ಹಂಬಲವಾಗಲಿ ಪ್ರತಿಷ್ಠೆಯ ಹುಚ್ಚಾಗಲಿ ಎಳ್ಳಷ್ಟೂ ಇರಲಿಲ್ಲ. ಸಾಮಾನ್ಯ ಮನುಷ್ಯರಂತೆ ಬರಿ ಸಾದಾ ಜೀವನವನ್ನವನು ಬಾಳುತ್ತಿದ್ದನು.

ಸಾಕ್ರೆಟೀಸ್ ವಾಸವಾಗಿದ್ದ ನಗರದಲ್ಲಿ ಇನ್ನೂ ಅನೇಕ ಬುದ್ಧಿವಂತರಿದ್ದರು. ಅವರಲ್ಲಿ ಯಾರು ಹೆಚ್ಚಿನ ಬುದ್ಧಿವಂತರು ಎಂಬ ಬಗ್ಗೆ ಒಂದು ಬಗೆಯ ಸ್ಪರ್ಧೆ, ವೈಮನಸ್ಯ ಹೊಗೆಯಾಡುತ್ತಿತ್ತು. ಅವರಲ್ಲಿಯೇ ಇತರರಿಗಿಂತ ವಯಸ್ಸಿನಲ್ಲಿ ಹೆಚ್ಚಾದವನೊಬ್ಬ ಈ ಸಮಸ್ಯೆಯನ್ನು ಬಗೆಹರಿಸಲು ಒಂದು ಉಪಾಯವನ್ನು ಹೇಳಿದ. ನಗರದೇವತೆಯ ಮೊರೆ ಹೋದರೆ ಪರಿಹಾರ

ತಂತಾನೆ ದೊರೆತೀತೆಂದು ಅವನು ಹೇಳಿದಾಗ ಎಲ್ಲರೂ ಒಪ್ಪಿದರು. ಒಡನೆಯೆ, ಎಲ್ಲರೂ ದೇವಾಲಯಕ್ಕೆ ಹೋಗಿ ವಿನಮ್ರ ಭಾವದಿಂದ ಮೊಂಡೆಯೂರಿ ಕುಳಿತು ಪ್ರಾರ್ಥಿಸಿ, "ದೇವಾ, ಈ ನಗರದಲ್ಲೀ ಎಲ್ಲಕ್ಕೂ ಶ್ರೇಷ್ಠ ತತ್ತ್ವಜ್ಞಾನಿ ಯಾರು ?" ಎಂದು ಕೇಳಿದರು.

ಇವರೀ ಪ್ರಶ್ನೆ ದೇವರಿಗೆ ಕೇಳಿಸಿರಬೇಕು. ತಕ್ಷಣ ಆಕಾಶವಾಣಿಯಾಯಿತು, ಸಾಕ್ರೆಟೀಸ್ ಎಂದು.

ಇದನ್ನು ಕೇಳಿ ತಮಗೆ ತಾವೇ ಮಹಾ ಬುದ್ಧಿವಂತರೂ ಚಿಂತಕರೂ ಎಂದುಕೊಳ್ಳುತ್ತಿದ್ದವರಿಗೆಲ್ಲ ಆಶ್ಚರ್ಯವೋ ಆಶ್ಚರ್ಯ. ಆದರೆ ದುಃಖ ತಗ್ಗಿಸಬೇಕಾದಂತಹುದೇನೂ ಇರಲಿಲ್ಲ; ಯಾಕೆಂದರೆ, ದೇವರು ಈ ಗುಂಪಿನೊಳಗೇ ಒಬ್ಬನ ಹೆಸರೆತ್ತಿ ಹೇಳಲಿಲ್ಲವಲ್ಲ !

ಅವರೆಲ್ಲ ಅದುವರೆಗೆ ಸಾಕ್ರೆಟೀಸನೂ ಒಬ್ಬ ಬುದ್ಧಿವಂತನೆಂದು ಬಗೆದಿರಲೇಯಿಲ್ಲ. ದೇವವಾಣಿಯನ್ನು ಕೇಳಿದ ನಂತರ ಮಾತ್ರ ಅವನೊಬ್ಬ ಮಹಾತ್ಮನೇ ಆಗಿರಬೇಕೆಂದು ಭಾವಿಸಿಯೋ ಅವನನ್ನು ಹುಡುಕಿಕೊಂಡು ಬಂದು ದೇವಾಲಯದಲ್ಲಿ ನಡೆದುದೆಲ್ಲವನ್ನೂ ವಿವರಿಸಿದರು. ಇದರಿಂದಾಗಿ ಸಾಕ್ರೆಟೀಸನ ಮುಖಚರ್ಯೆಯಲ್ಲಾಗಲಿ, ವರ್ತನೆಯಲ್ಲಾಗಲಿ ಯಾವುದೇ ಬದಲಾವಣೆಯಾಗಲಿಲ್ಲ.

ಕೊನೆಗೆ ಒಬ್ಬ ಕೇಳಿಯೇಬಿಟ್ಟ, "ಮಹಾತ್ಮರೆ, ಈ ನಗರದಲ್ಲೀ ತಾವು ಅತ್ಯಂತ ಶ್ರೇಷ್ಠ ತತ್ತ್ವಜ್ಞಾನಿಯೆಂದು ಇದೀಗ ದೇವವಾಣಿಯಾಯಿತು. ನಾವಿಷ್ಟು ಜನ ವಿದ್ವದ್ಗೋಷ್ಠಿಗಳಲ್ಲಿ ಎಂದಿನಿಂದಲೂ ಭಾಗವಹಿಸುತ್ತ ಸದಾ ತತ್ತ್ವ ಚರ್ಚೆಯಲ್ಲಿ ನಿರತರಾಗಿರುತ್ತೇವೆ. ತಾವು ಮಾತ್ರ ಒಮ್ಮೆಯೂ ಯಾವ ಪಂಡಿತರೊಡನೆಯೂ ಚರ್ಚೆಗೆ ನಿಂತುದನ್ನು ನಾವಾರೂ ನೋಡಿಲ್ಲ. ಆದರೂ ದೇವರು ತಮ್ಮನ್ನೇ ಸರ್ವಶ್ರೇಷ್ಠ ತತ್ತ್ವಜ್ಞಾನಿಯೆಂದು ನಿರ್ಧರಿಸಿರುವುದರ ಗುಟ್ಟೇನು ?" ಎಂದು.

ಸಾಕ್ರೆಟೀಸ್ ಕ್ಷಣಕಾಲ ಯೋಚಿಸುವಂತೆ ತಡೆದು ಹೇಳಿದ: "ನಿಜಕ್ಕೂ ಪರಮಾತ್ಮನ ಈ ನಿರ್ಣಯ ನಿಮ್ಮಷ್ಟೇ ನನಗೂ ಆಶ್ಚರ್ಯವನ್ನುಂಟುಮಾಡಿದೆ. ನಾನು ಅಜ್ಞಾನಿಯೆಂಬುದನ್ನು ಪ್ರಾಂಜಲ ಮನಸ್ಸಿನಿಂದ ನಿಮ್ಮೆಲ್ಲರೆದುರೂ ಒಪ್ಪಿಕೊಂಡುಬಿಡುವೆ. ದೇವರು ಏನೇ ಹೇಳಿದ್ದರೂ ನನ್ನ ಅಜ್ಞಾನವನ್ನು ಮುಚ್ಚಿಡದಿರಲು ನನಗೆ ಮಾತ್ರ ಎಳ್ಳಷ್ಟೂ ನಾಚಿಕೆಯೆನಿಸುವುದಿಲ್ಲ."

ಸಾಕ್ರೆಟೀಸನ ಈ ಮಾತಿನಿಂದ ಅಲ್ಲಿ ನೆರೆದಿದ್ದ ಪಂಡಿತರೆಲ್ಲ ಅರೆನಿಮಿಷ ತೆಪ್ಪಗಾದರು. ಆಗ ಮೊದಲೆದ್ದು ಪ್ರಶ್ನೆ ಕೇಳಿದವನೆ ಪುನಃ ಎದ್ದು ಸಾಕ್ರೆಟೀಸನಿಗೆ ಸಾಷ್ಟಾಂಗವೆರಗಿ ನುಡಿದ: "ಸ್ವಾಮಿ, ನಮ್ಮೆಲ್ಲರಿಗೂ ಅಹಂಕಾರದ ಸೊಕ್ಕಿನಿಂದ ತಾವೇ ಮುಕ್ತಿ ನೀಡಬೇಕು. ಇಂದು ತಾವು ನಮ್ಮ ಕಣ್ಣು ತೆರೆಸಿದಿರಿ. ನಮಗೆ ನಮ್ಮ ಅಜ್ಞಾನದ ಅರಿವಾಗಿದೆ. ನಮಗೆ ತಿಳಿದಿದ್ದೇ ಸತ್ಯವೆಂದುಕೊಂಡು ಇದುವರೆಗೆ ನಾವೆಲ್ಲ ಮೂರ್ಖರಂತೆ ವರ್ತಿಸಿದೆವು." ✡

ಕೊಳಲಿಂಪು ವೀಣೆಯಿಂಪೆನ್ನುವರು ತಮ್ಮ ಮಕ್ಕಳ ತೊದಲ್ನುಡಿ ಕೇಳದವರು.

*

ತಂದೆಗೇಂ ಮಗ ಮಾಡಬಹುದೆನಲು, ಈತನ ತಂದೆ ಏನು ತಪಮಾಡಿದನೋ ಎನ್ನಿಸುವುದು.

— ತಿರುಕ್ಕುರಳ್

# ಗಾಜಿನಲ್ಲಿ ಕಲೆ-ಝೆಕ್ ಮಾದರಿ

ಗಾಜಿನ ಇತಿಹಾಸ ನಾಲ್ಕೂವರೆ ಸಾವಿರ ವರ್ಷಗಳಷ್ಟು ಹಳೆಯದು. ಇದು ವರೆಗೆ ಉತ್ಖನನಗಳಲ್ಲಿ ದೊರೆತ ಅತಿ ಪ್ರಾಚೀನ ವಸ್ತುಗಳೆಂದರೆ ಕ್ರಿ. ಪೂ. ೨೫೦೦ರ ಸುಮಾರಿಗೆ ತಯಾರಾಗಿರಬಹುದಾದ ಗಾಜಿನ ಗುಂಡುಗಳು. ಗಾಜಿನ ಶೋಧನೆ ಇಷ್ಟೇ ಆಕಸ್ಮಿಕವೆಂದೇ ಹೇಳಲಾಗುತ್ತಿದೆ. ಭೂಮಧ್ಯ ಸಮುದ್ರದಲ್ಲಿ ಕ್ರೀಟ್ ಮೊದಲಾದ ದ್ವೀಪಗಳ ನಿವಾಸಿಗಳಾಗಿದ್ದ ಫಿನಿಶಿಯನ್ ನಾವಿಕರು ಒಮ್ಮೆ ಒಂದು ಬಯಲಿನಲ್ಲಿ ಒಲೆ ಹೂಡಿ ಅಡುಗೆ ಮಾಡುತ್ತಿದ್ದಾಗ ಅಲ್ಲಿದ್ದ ಸುಣ್ಣದ ಹರಳು ಹಾಗು ಉಸುಕು ಕಾವಿನಿಂದ ಕರಗಿ ಗಾಜಿನ ದ್ರವ ಹರಿದಾಗಲೇ ಪ್ರಾಚೀನ ಮನುಷ್ಯ ಈ ಪಾರದರ್ಶಕ ವಸ್ತುವನ್ನು ಮೊದಲ ಬಾರಿ ಕಂಡನಂತೆ.

ಪ್ರಾಚೀನ ಭಾರತಕ್ಕೆ ಗಾಜು ಅಪರಿಚಿತವಲ್ಲ. ಎರಡು ಸಾವಿರ ವರ್ಷಗಳಿಗೂ ಹಿಂದೆಯೇ ಭಾರತೀಯರಿಗೆ ಗಾಜು ಗೊತ್ತಿತ್ತು. [illegible] ಝೆಕೊಸ್ಲೊವಾಕಿಯಾ [illegible] ಗಾಜಿನ ವಸ್ತುಗಳ ತಯಾರಿಕೆ [illegible]. ಮೊದಲನೆಯ ಮಹಾಯುದ್ಧದ ಮುಕ್ತಾಯದವರೆಗೂ ಬೊಹೀಮಿಯಾದ ಭಾಗವಾಗಿದ್ದ ಝೆಕೊಸ್ಲೊವಾಕಿಯಾ [illegible] ಪ್ರತ್ಯೇಕ ದೇಶವಾಯಿತು.

[illegible] ಒಂದಿನಿಂದಲೇ ಗಾಜಿನ ಉತ್ಪಾದನೆ [illegible] ಪಾತ್ರೆ ಉದ್ಯಮವು [illegible]. ಈ ಉದ್ಯಮ ಬೆಳೆದಂತೆ ಅದರೊಟ್ಟಿಗೆ ಗಾಜನ್ನು ಒಂದು ಕಲಾಮಾಧ್ಯಮವಾಗಿ ಉಪಯೋಗಿಸಿಕೊಳ್ಳುವ ಮತ್ತು ಸುಂದರತಮ ಪಾತ್ರೆ ಮುಂತಾದವುಗಳನ್ನು ತಯಾರಿಸುವ ಪರಂಪರೆಯೇ ಈ ದೇಶದಲ್ಲಿ ಅಭಿವೃದ್ಧಿಗೊಂಡಿತು. ೧೬ನೆಯ ಶತಮಾನದ ಹೊತ್ತಿಗೆ ಬೊಹೀಮಿಯನ್ ರಾಜ್ಯದಲ್ಲಿ ಗಾಜಿನ ತಯಾರಿಕೆಯ ಕ್ರಮದಲ್ಲಿ ಅನೇಕ ಸುಧಾರಣೆಗಳಾಗಿ ಬಣ್ಣ ರಹಿತವಾದ ಪಾರದರ್ಶಕ ಗಾಜನ್ನು ಉತ್ಪಾದಿಸಲಾಯಿತು. ಇಂದಿಗೂ ಇದಕ್ಕೆ 'ಬೊಹೀಮಿಯನ್ ಕ್ರಿಸ್ಟಲ್ ಗ್ಲಾಸ್' ಎಂದೇ ಹೆಸರಿದೆ. ಆ ಸುಮಾರಿಗೆ ಕಾರ್ಲೋವಿ ವೆರಿ ನಗರದ ಸಮೀಪದಲ್ಲಿ ಪ್ರಾರಂಭವಾದ ಗಾಜಿನ ಮತ್ತು ಗಾಜಿನ ವಸ್ತುಗಳ ಉದ್ಯಮವಿಂದು ಝೆಕೊಸ್ಲೊವಾಕಿಯದ ಜೀವಾಳವಾಗಿ ಪರಿಣಮಿಸಿದೆ. ಈ ಉದ್ಯಮವು ನಿರ್ಯಾತ ಮೂಲಕ ಗಳಿಸುವ [illegible] ಆ ದೇಶದ ರಾಷ್ಟ್ರೀಯ ಆದಾಯದ ದೊಡ್ಡ ಭಾಗವಾಗಿದೆ. ಇದರ ಉತ್ಪಾದನೆಯು ೧೯೪೮ರಿಂದ ೧೯೭೦ರ ವರೆಗೆ ಮೂರರಷ್ಟು ಹೆಚ್ಚಿದೆ.

[illegible] ಜೋಸೆಫ್ ಡ್ರಾಹೊನೋವಸ್ಕಿ ಎಂಬ ಪ್ರಖ್ಯಾತ [illegible] ಗಾಜಿನಲ್ಲಿ [illegible]. ೧೯೨೦ರಲ್ಲಿ [illegible] ಈ ಕಲೆಯಲ್ಲಿ [illegible] ಕಲಾಕಾರರೊಂದನ್ನು [illegible]. ಅದು ಇಂದು ಝೆಕ್ ಗಾಜಿನ ಕಲೆಯ [illegible] ಕೇಂದ್ರವಾಗಿ ಪರಿಣಮಿಸಿದೆ.

ಗಾಜಿನಲ್ಲಿ ಝೆಕ್ಕರು ತಯಾರಿಸುವ ಸುಂದರ ಪಾತ್ರೆಗಳ ಕೆಲ ಮಾದರಿಗಳಿಗಾಗಿ ಮುಂದಿನ ಪುಟಗಳನ್ನು ನೋಡಿರಿ. ✲

ಗಳನ್ನು ಎರಡು ಪಂಗಡಗಳಾಗಿ ವಿಂಗಡಿಸಬಹುದು. ಮೊದಲನೆಯದು—ಈ ರಚನಾತ್ಮಕ ಕನಸುಗಳಲ್ಲಿನ ಸ್ವಪ್ನಸಾರವು (dream content) ಕನಸಿಗನಿಂದ ಅಕ್ಷರಶಃ ಅಥವಾ ನೇರವಾಗಿ (ಕನಸಿನಲ್ಲಿ ಕಂಡಂತೆಯೇ) ಉಪಯೋಗವಾಗಬಹುದು. ಎರಡನೆಯದು ಸ್ವಪ್ನಸಾರವು ಸಾಂಕೇತಿಕವಾಗಿ ಅಥವಾ ಹೋಲಿಕೆಯಾಗಿ ಉಪಯೋಗಿಸಲ್ಪಡಬಹುದು. ಹೇಗಾದರೂ ಸ್ವಪ್ನಸಾರವು ಅಥವಾ ಅದರ ಒಂದು ಭಾಗವು ನೇರವಾಗಿ ಅಥವಾ ಸಾಂಕೇತಿಕವಾಗಿ ಯಾವುದಾದರೂ ರಚನಾತ್ಮಕ ಕ್ರಿಯೆಗಳಲ್ಲಿ ಉಪಯೋಗವಾಗುತ್ತದೆ.

ಪ್ರಖ್ಯಾತ ಗೀತನಾಟಕಕರ್ತೃಗಳಲ್ಲಿ ಒಬ್ಬನಾದ, ಜರ್ಮನಿಯ ರಿಚರ್ಡ್ ವ್ಯಾಗ್ನರನು 'ಟ್ರಿಸ್ಟನ್ ಮತ್ತು ಐಸೋಲ್ಡ್' (Trisotn and Isolde) ಎಂಬ ತನ್ನ ಗೀತನಾಟಕದ ಬಗ್ಗೆ ಗೆಳೆಯ ಮ್ಯಾಥೈಲ್ಡ್ ವೆಸೆನ್‌ಡಾಕ್‌ಗೆ ಬರೆಯುತ್ತ, "ಈಗ ನೀನೊಂದು ಕನಸನ್ನು ಕೇಳುತ್ತಿದ್ದೀಯೆ; ಆ ಕನಸಿಗೆ ನಾನು ಬರೇ ಶಬ್ದವನ್ನು ನೀಡಿದ್ದೇನೆ. ...ಇದನ್ನು ನಾನು ಕನಸು ಕಂಡೆ. ಇಲ್ಲದಿದ್ದರೆ ಈ ನನ್ನ ಮಂದಬುದ್ಧಿಯಿಂದ ಇದನ್ನು ಎಂದಿಗೂ ರಚಿಸಲಾಗುತ್ತಿರಲಿಲ್ಲ," ಎಂದಿದ್ದಾನೆ. ವ್ಯಾಗ್ನರನ ಸುಪ್ರಸಿದ್ಧ "ದಾಸ್ ರ್ಹೀನ್‌ಗೋಲ್ಡ್" (Das Rheingold) ನಾಟಕದ ಕಥಾವಸ್ತು ದೊರೆತದ್ದು ಕೂಡ ಕನಸಿನಲ್ಲಿಯೇ.

ಆಧುನಿಕ ಪಿಟೀಲಿನ ಕಮಾನನ್ನು ನಿರ್ಮಿಸಿದ ಇಟಲಿಯ ವಿಖ್ಯಾತ ಪಿಟೀಲು ವಾದಕ ಗೈಸೆಪ್ ಟಾರ್ಟಿನಿ ಒಂದು ಪಿಶಾಚಿ ತನ್ನ ಕೈದಿಯಾದಂತೆ ಕನಸು ಕಂಡನಂತೆ. ನಂತರ ಆ ಪಿಶಾಚಿಗೆ ಒಂದು ಕನಸಿನ ಪಿಟೀಲನ್ನು ಕೊಟ್ಟು ನುಡಿಸಲು ಹೇಳಿ ಫೂಲ್ ಮಾಡಲು ಪ್ರಯತ್ನಿಸಿದಾಗ, ಆ ಭೂತ ಇವನ ಊಹೆಗೂ ನಿಲುಕದಷ್ಟು ಮಧುರವಾಗಿ, ಭಾವಭರಿತವಾಗಿ ಒಂದು ಗೀತೆಯನ್ನು ನುಡಿಸಿ ಅವನನ್ನು ಅಚ್ಚರಿಗೊಳಿಸಿತು. ಟಾರ್ಟಿನಿಗೆ ಎಚ್ಚರವಾಗಿ ಆ ಸಂಗೀತವನ್ನು ನೆನಪಿಗೆ ತಂದುಕೊಳ್ಳಲು ಬಹಳ ಪ್ರಯತ್ನಿಸಿ ಕಡೆಗೆ 'ದಿ ಡೆವಿಲ್ಸ್ ಸೋನಾಟಾ' (The Devil's Sonata) ಎಂಬುದನ್ನು ರಚಿಸಿದನು. ತನ್ನ ಈ ಕನಸಿನ ಕಥೆಯನ್ನು ಆತ ತನ್ನ ಗೆಳೆಯ ಖಗೋಳಶಾಸ್ತ್ರಜ್ಞನಾದ ಜೋಸೆಫ್ ಲಾಲಂಡ್‌ಗೆ ೧೭೬೬ ರಲ್ಲಿ ಹೇಳಿದ್ದನು.

ರಾಬರ್ಟ್ ಲೂಯಿ ಸ್ಟೀವನ್‌ಸನ್ ಬರೆದಿರುವ ಪ್ರಕಾರ, ಆತ ಪೂರ್ಣಕಥೆಗಳನ್ನೇ ಕನಸು ಕಾಣುವುದನ್ನು ಚಿಕ್ಕಂದಿನಿಂದಲೂ ಕಲಿತಿದ್ದನು; ಹಾಗೂ ಅವನಿಗೆ ಒಂದೇ ಸ್ವಪ್ನ ಪ್ರತಿರಾತ್ರಿ ಪುನಃ ಪುನಃ ಬೀಳುತ್ತಿದ್ದುದಲ್ಲದೇ, ಅದಕ್ಕೆ ವಿವಿಧ ಅಂತ್ಯಗಳನ್ನೂ ಕಾಣಬಲ್ಲವನಾಗಿದ್ದನು. ಆತನ ಜಗತ್ಪ್ರಸಿದ್ಧ 'ಡಾ. ಜೆಕಿಲ್ ಮತ್ತು ಮಿ. ಹೈಡ್' ಸಂಪೂರ್ಣವಾಗಿ ಕನಸಿನಲ್ಲೇ ರೂಪಿಸಿದ್ದಾಗಿತ್ತು. ಟಾಲ್‌ಸ್ಟಾಯನಿಗೂ ಕನಸುಗಳಲ್ಲಿ ಕಥಾವಸ್ತು ಸಿಗುತ್ತಿತ್ತು.

ಇಂಗ್ಲಿಷ್ ಕವಿ ಸ್ಯಾಮುಯಲ್ ಟಾಂಡರ್ ಲರ್ ಕೋಲರಿಡ್ಜನು 'ಪರ್ಚಾಸ್ ಪಿಲ್‌ಗ್ರಿಮೇಜ್' ಪುಸ್ತಕದಲ್ಲಿನ, "ಇಲ್ಲಿ ಕುಬ್ಲಾಖಾನನು ಒಂದು ಅರಮನೆ ಹಾಗೂ ರಾಜೋದ್ಯಾನವನ್ನು ಕಟ್ಟಲು ಆಜ್ಞೆಯಿತ್ತನು...ಹೀಗೆ ಹತ್ತು ಚದರ ಮೈಲಿಗಳ ಫಲವತ್ತಾದ ಈ ಭೂಮಿ ಒಂದು ಗೋಡೆಯಿಂದ ಸುತ್ತುವರೆಯಲ್ಪಟ್ಟಿತು......"



ಟಾಲ್‌ಸ್ಟಾಯ್

ಎಂಬ ಕೆಲವು ಸಾಲುಗಳನ್ನು ಓದುತ್ತಿದ್ದ ಹಾಗೇ ಕುರ್ಚಿಯ ಮೇಲೆ ನಿದ್ರಿಸಿದನಂತೆ. ಸುಮಾರು ಮೂರು ಗಂಟೆಗಳ ನಿದ್ರೆಯ ಅವಧಿಯಲ್ಲಿ ತಾನು ಸುಮಾರು ಮುನ್ನೂರು ಸಾಲುಗಳಷ್ಟು ಕವನವನ್ನು ರಚಿಸಿದ್ದನೆಂದು ಅವನಿಗೆ ಅನಿಸಿತು. "ಕನಸಿನಲ್ಲಿ ತಮ್ಮ ತಮ್ಮ ಭಾವಗಳೊಂದಿಗೆ ಎಲ್ಲ ಪ್ರತಿಮೆಗಳೂ ಎದ್ದು ಬಂದು ವಸ್ತುಗಳಂತೆ ಮುಂದೆ ನಿಂತವು" ಎಂದು ಹೇಳಿಕೊಂಡಿದ್ದಾನೆ. ಪುನಃ ಎಚ್ಚರವಾದ ಮೇಲೆ ತನ್ನ ಕನಸಿನ ಕವನದ, ನೆನಪಿಗೆ ಬಂದಷ್ಟು ಮೊದಲ ಸಾಲುಗಳನ್ನು ಬರೆದನು. ಅದೇ ಇಂದು ಪ್ರಸಿದ್ಧವಾಗಿರುವ ಬಹು ಸುಂದರ ಕವನ 'ಕುಬ್ಲಾ ಖಾನ್'. ಸುಮಾರು ಒಂದು ಗಂಟೆಯ ಮೇಲೆ ಬಂದ ವ್ಯಕ್ತಿಯೊಬ್ಬನಿಂದ ಅಡ್ಡಿಯಾಗಿ ಅವನಿಗೆ ಉಳಿದ ಸಾಲುಗಳು ಶಾಶ್ವತವಾಗಿ ಮರೆತೇಹೋದವು.

ಚಿತ್ರಕಾರರಲ್ಲಿ ಪಾಲ್ ಕ್ಲೀ ತನ್ನ ಅನೇಕ ಚಿತ್ರಗಳಿಗೆ ಸ್ವಪ್ನದಲ್ಲಿ ಕಂಡ ದೃಶ್ಯಗಳನ್ನು ಉಪಯೋಗಿಸಿಕೊಳ್ಳುತ್ತಿದ್ದನು. "ಕಲ್ಪನೆಗಳು, ಜೀವನ ಚಿತ್ರಗಳು ಇತ್ಯಾದಿಗಳ ಜೊತೆಗೆ ಸ್ವಪ್ನ ಚಿತ್ರಗಳನ್ನು ಕೂಡ ಕಲಾವಿದ ತನ್ನ ಕಲಾವಸ್ತುವಾಗಿ ಉಪಯೋಗಿಸಿಕೊಳ್ಳಬೇಕು," ಎಂಬುದನ್ನು ಒತ್ತಿ ಹೇಳಿದ್ದಾನೆ ಆತ.

ಹರ್ಮನ್ ವಿ. ಹಿಲ್‌ಪ್ರಿಚ್ ತನ್ನ ಕೆಲವು ಸಮಸ್ಯೆಗಳಿಗೆ ಸ್ವಪ್ನದಲ್ಲಿ ಪರಿಹಾರ ಕಂಡುಕೊಂಡ ಒಬ್ಬ ಪ್ರಸಿದ್ಧ ಪ್ರಾಚೀನ ವಸ್ತುಶೋಧಕ. ಒಂದು ಬಾರಿ ಆತನಿಗೆ ಕ್ಯಾಸಿಟ್ ಕಾಲದ (Cassite period) ಒಂದು ರೀತಿಯ ಅಮೂಲ್ಯಶಿಲೆಯ ಎರಡು ಚೂರುಗಳು ದೊರೆತವು. ಉಂಗುರಗಳಂತಿದ್ದ ಅವುಗಳ ಮೇಲೆ ಬರೆದಿದ್ದ ಬೆಣೆಯಾಕಾರದ ಬರಹದ ಗೂಢ ಲಿಪಿಯ ಅರ್ಥ ಅವನಿಗೆ ತಿಳಿಯದೆ ಹೋಯಿತು. ಅದರ ಬಗ್ಗೆ ಶೋಧನೆ ನಡೆಸುತ್ತಿದ್ದ ಆತ, ಒಂದು ದಿನ ಮಧ್ಯರಾತ್ರಿಯ ವರೆಗೂ ಯೋಚಿಸಿ ಯೋಚಿಸಿ ಕಂಗೆಟ್ಟು ನಿದ್ರೆ ಹೋದನು. ಕ್ರಿಸ್ತಪೂರ್ವ ಕಾಲದವನಂತೆ ತೋರುವ ಪಾದ್ರಿಯೊಬ್ಬನು ಹಿಲ್‌ಪ್ರಿಚ್‌ನ ಕನಸಿನಲ್ಲಿ ಕಾಣಿಸಿಕೊಂಡ. ಅವನೇ ಹೇಳುವಂತೆ, "ತೆಳ್ಳಗೆ, ಎತ್ತರಕ್ಕೆ ಇದ್ದ ಆ ಪಾದ್ರಿಯ ವಯಸ್ಸು ಸುಮಾರು ನಲವತ್ತರ ಒಹುದು. ಬಹಳ ಸರಳವಾಗಿ ಬಟ್ಟೆ ಧರಿಸಿದ ಆತ ನನ್ನನ್ನು ದೇವಸ್ಥಾನದ ಬೊಕ್ಕಸದ ಬಳಿ ಕರೆದುಕೊಂಡು ಹೋಗಿ ಅಲ್ಲಿ ಈ ರೀತಿ ಹೇಳಿದ— 'ನೀನು ೨೨ ಮತ್ತು ೨೬ ನೇ ಪುಟಗಳಲ್ಲಿ ಪ್ರತ್ಯೇಕವಾಗಿ ಪ್ರಕಟಿಸಿರುವ ಆ ಎರಡು ಭಾಗಗಳು ಒಂದರ ತುಣುಕು: ಆ ಅಪೂರ್ಣ ಭಾಗಗಳು (ಚೂರುಗಳು) ಒಟ್ಟಿಗೆ ಸೇರುತ್ತವೆ. ಆದರೆ ಅವು ಉಂಗುರಗಳಲ್ಲ. ಅವುಗಳ ಇತಿಹಾಸ ಈ ರೀತಿ ಇದೆ. ಕ್ರಿ. ಪೂ. ೧೩೦೦ ರಲ್ಲಿ ಕುರಿಗಲ್ಜು (Kurigalzu) ಎಂಬ ದೊರೆ ಬೆಲ್ ದೇವ ಮಂದಿರಕ್ಕೆ ಶಾಸನ ವಿರುವ ಅಮೂಲ್ಯಶಿಲೆಯೊಂದರ ದುಂಡು ಕೊಳವೆಯೊಂದನ್ನು ಕಳುಹಿಸಿದ. ನಂತರ, ದೇವರ ವಿಗ್ರಹಕ್ಕೆ ಅಮೂಲ್ಯ ಶಿಲೆಯ ಒಂದು ಜೊತೆ ಕರ್ಣಕುಂಡಲಗಳನ್ನು ಮಾಡಿಕೊಡಲು, ಆ ದೊರೆಯಿಂದ ಪಾದ್ರಿಗಳಾದ ನಮಗೆ ಆಣತಿ ಬಂದಿತು. ಆದರೆ, ಕೂಡಲೇ ಅಲ್ಲಿ ಯಾವ ಕಚ್ಚಾ ಶಿಲೆಗಳೂ ಇರಲಿಲ್ಲವಾದ್ದರಿಂದ ಇದನ್ನು ಕೇಳಿ ನಮಗೆ ಅಚ್ಚರಿಯಾಯಿತು. ಆದರೆ



ರಿಚರ್ಡ್ ವ್ಯಾಗ್ನರ್

ರಾಜಾಜ್ಞೆಯನ್ನು ಪಾಲಿಸಲೋಸುಗ, ನಿರ್ವಾಹವಿಲ್ಲದೆ ನಾವು ಆ ಕೊಳವೆಯನ್ನು ಮೂರು ಭಾಗಗಳಾಗಿ ಕತ್ತರಿಸಿದೆವು. ಪ್ರತಿಯೊಂದು ಉಂಗುರದ ಮೇಲೂ ಶಿಲಾಲೇಖನದ ಸ್ವಲ್ಪ ಭಾಗ ಇತ್ತು. ಮೊದಲ ಎರಡು ಭಾಗಗಳು ದೇವರ ವಿಗ್ರಹದ ಕರ್ಣಕುಂಡಲಗಳಾದವು. ನಿನಗೆ ಈಗ ಸಾಕಷ್ಟು ತೊಂದರೆ ಕೊಡುತ್ತಿರುವ, ಉಂಗುರಗಳಂತಿರುವ ಆ ಚೂರುಗಳೇ ಅವು. ನೀನು ಎರಡನ್ನೂ ಕೂಡಿಸಿ ನೋಡಿದರೆ, ಓದಿದರೆ ನಾನು ಹೇಳುತ್ತಿರುವ ಸತ್ಯದ ಅರಿವಾಗುತ್ತದೆ. ಆ ಮೂರನೆಯ ಭಾಗ ನಿಮ್ಮ ಶೋಧನೆಗಳಲ್ಲಿ ದೊರೆತಿಲ್ಲ ಹಾಗೂ ದೊರೆಯುವುದೂ ಇಲ್ಲ' ಎಂದು ಹೇಳಿ ಅದೃಶ್ಯನಾದ. ನನಗೆ ಎಚ್ಚರವಾಯಿತು." ಅನಂತರ ಹಿಲ್‌ಪ್ರಿಚ್ ಅವನ್ನು ಪರಿಶೀಲಿಸಿದಾಗ ಆ ಪಾದ್ರಿ ಹೇಳಿದುದು ಸತ್ಯವಾಗಿತ್ತು. ಇಂಪೀರಿಯಲ್ ಮ್ಯೂಸಿಯಮ್ ಆಫ್ ಕಾನ್‌ಸ್ಟಾನ್‌ಟಿನೋಪಲ್‌ನಲ್ಲಿರುವ ಅವೆರಡೂ ಒಂದೇ ಕೊಳವೆಯ ಎರಡು ಭಾಗಗಳು ಎಂಬುದನ್ನು ಈಗಲೂ ನೋಡಬಹುದು.

ನರಗಳ ಕ್ರಿಯೆಯು ಪಟುರಾಸಾಯನಿಕ ವಸ್ತುಗಳನ್ನು (active chemicals) ಒಳಗೊಂಡಿದೆ ಎಂಬುದನ್ನು ಸಾಧಿಸಿ ನೋಬೆಲ್



ಸಾಮುಯೆಲ್ ಟಾಯ್‌ಲರ್ ಕೋಲರಿಡ್ಜ್

ಬಹುಮಾನ ಜಯಿಸಿದ ಜರ್ಮನಿಯ ಒಟ್ಟೋ ಲೋವಿ (Otto Lovei) ೧೯೦೩ ರಲ್ಲಿ, ಉದ್ರೇಕ ಅಥವಾ ಪ್ರೇರೇಪಣೆ (stimulation) ಯಿಂದ ಪರಾನುಭವಭೂತ (sympathetic) ಅಥವಾ ಅನುಪರಾನುಭವಭೂತ (para-sympathetic) ನರಗಳ ತುದಿಯಲ್ಲಿ ರಾಸಾಯನಿಕ ವಸ್ತುಗಳು ಉತ್ಪತ್ತಿಯಾಗುತ್ತವೆ ಮತ್ತು ಈ ರಾಸಾಯನಿಕ ವಸ್ತುಗಳು ನರಸ್ಪಂದನಗಳನ್ನು ಅವುಗಳ ಭಾವನೇಂದ್ರಿಯಗಳಿಗೆ ಕ್ರಮವಾಗಿ ಕಳುಹಿಸುತ್ತವೆ ಎಂಬ ಪೂರ್ವಪಕ್ಷ (Hypothesis) ವನ್ನು ಪ್ರಕಟಿಸಿದ್ದನು. ಆದರೆ ಆಗ ಅದನ್ನು ಸಿದ್ಧಾಂತಪಡಿಸಿ ತೋರಿಸಲು ಆತನಿಗೆ ಸಾಧ್ಯವಾಗಿರಲಿಲ್ಲ. ಹದಿನೇಳು ವರ್ಷಗಳ ನಂತರ ೧೯೨೦ ರಲ್ಲಿ ಈಸ್ಟರ್ ಹಬ್ಬದ ಭಾನುವಾರದಂದು ತನ್ನ ಕನಸೊಂದನ್ನು ಕಂಡನು. ಕೂಡಲೇ ಎಚ್ಚರಗೊಂಡು ಸ್ವಪ್ನವನ್ನು ಬರೆದಿಟ್ಟು ನಂತರ ನಿದ್ರಿಸಿದನು. ಮಾರನೆಯ ದಿನ ತಾನು ಹಿಂದಿನ ರಾತ್ರಿ ಬರೆದುದನ್ನು ಓದಲು ಹೋದರೆ ಆತನಿಗೆ ಅದು ಸಾಧ್ಯವಾಗಲಿಲ್ಲ! ಆದರೆ ಆ ರಾತ್ರಿಯೂ ಆತನಿಗೆ ಪುನಃ ಅದೇ ಕನಸು ಬಿದ್ದಿತು. ಈ ಬಾರಿ ಆತ ಪ್ರಯೋಗಶಾಲೆಗೆ ಕೂಡಲೇ ಹೋಗಿ ತಾನು ಸ್ವಪ್ನದಲ್ಲಿ ಕಂಡ ಪ್ರಯೋಗವನ್ನು ಮಾಡಿದನು.

ಕಪ್ಪೆಗಳ ಎರಡು ಹೃದಯಗಳ ಸಹಾಯದಿಂದ ಮಾಡಿದ ಈ ಪ್ರಯೋಗದ ಫಲಿತಾಂಶಗಳಿಂದ ವ್ಯಕ್ತವಾಗುವ ಅಂಶಗಳೆಂದರೆ, ನರಗಳು ಹೃದಯವನ್ನು ನೇರವಾಗಿ ಪ್ರೇರಿಸುವುದಿಲ್ಲ; ಆದರೆ ಅವು ತಮ್ಮ ತುದಿಗಳಲ್ಲಿ ಕೆಲವು ವಿಶಿಷ್ಟ ರಾಸಾಯನಿಕ ವಸ್ತುಗಳನ್ನು ಉತ್ಪತ್ತಿ ಮಾಡುತ್ತವೆ; ಈ ರಾಸಾಯನಿಕ ವಸ್ತುಗಳೇ ನರಗಳ ಉದ್ರೇಕದಿಂದ ಆಗುವ ಹೃದಯಕ್ರಿಯೆಯ ಬದಲಾವಣೆಗೆ ಕಾರಣ ಎಂದು ಖಚಿತಪಟ್ಟಿತು.

ಇವುಗಳೆಲ್ಲವೂ ಕನಸನ್ನೇ ಅಕ್ಷರಶಃ ಅಥವಾ ನೇರವಾಗಿ ಬಳಸಿಕೊಂಡು ರಚಿಸಿದ ಕೃತಿಗಳು, ಪರಿಹಾರಗಳು ಆದವು. ಇದಲ್ಲದೆ ವ್ಯಕ್ತಿಯು ಕೆಲಸ ಮಾಡುತ್ತಿರುವ ಸಮಸ್ಯೆಗಳಿಗೆ ಸಾದೃಶ

ವಾಗಿ ಅಥವಾ ಸಾಂಕೇತಿಕವಾಗಿ ಪರಿಹಾರವನ್ನು ನೀಡಿರುವ ಅನೇಕ ಸ್ವಪ್ನಗಳಿವೆ. ವಿಜ್ಞಾನ, ತತ್ತ್ವಶಾಸ್ತ್ರ, ನಿರ್ಮಾಣ ರಂಗಗಳ ರಚನಾತ್ಮಕ ಕಾರ್ಯಗಳಲ್ಲಿ ಸ್ವಪ್ನ ಸಾರವು ಸಾಂಕೇತಿಕವಾಗಿ ಬಳಸಲ್ಪಟ್ಟಿರುತ್ತದೆ.

ಈ ಲೇಖನದ ಮೊದಲಲ್ಲಿ ಹೇಳಿದ ನೀಲ್ಸ್ ಬೋರನ ಸ್ವಪ್ನ ಅಂತಹವುಗಳಲ್ಲಿ ಒಂದು.

ಜರ್ಮನ್ ರಾಸಾಯನಶಾಸ್ತ್ರಜ್ಞನಾದ ಎಫ್. ಎ. ಕೆಕುಲೆ ಕೂಡ ಅಂತಹ ಒಂದು ಕನಸು ಕಂಡಿದ್ದನು. ಅವನು ಅದರ ಬಗ್ಗೆ ಈ ರೀತಿ ಬರೆದಿದ್ದಾನೆ: "ನಾನು ನಿದ್ರಿಸಿದಾಗ ಪರಮಾಣುಗಳು ಪುನಃ ಪುನಃ ನನ್ನ ಕಣ್ಣಿನ ಮುಂದೆ ಸುಳಿಯುತ್ತಿದ್ದವು. ತಮ್ಮತಮ್ಮಲ್ಲೇ ಚಿಕ್ಕ ದೊಡ್ಡ ಗುಂಪುಗಳಾಗಿ ಹಿಂಗಡಿಸಿಕೊಂಡ ಅವುಗಳು ಕೆಲವು ಹತ್ತಿರದಲ್ಲಿ ಕೆಲವು ದೂರದಲ್ಲಿ ಹಾವಿನಂತೆ ಸುತ್ತುತ್ತ ಹರಿಯುತ್ತಿದ್ದವು. ಆದರೆ ಆಶ್ಚರ್ಯ! ಒಂದು ಹಾವು ತನ್ನ ಬಾಲವನ್ನೇ ಬಾಯಲ್ಲಿ ಕಚ್ಚಿಕೊಂಡು ಸುತ್ತುತ್ತಿದೆ; ನನ್ನ ಒಳಗಣ್ಣಿನ ಮುಂದೆ ಗಿರ ಗಿರನೆ ಸುತ್ತುತ್ತಿದೆ. ಮಿದುಳಿಗೆ ಮಿಂಚು ಹೊಳೆದಂತಾಗಿ ನನಗೆ ಎಚ್ಚರವಾಯಿತು." ಹಾವು ತನ್ನ ಬಾಲವನ್ನು ಬಾಯಿಯಲ್ಲಿ ಕಚ್ಚಿಕೊಂಡು ಸುತ್ತುತ್ತಿದ್ದ ಈ ಕನಸಿನ ಪ್ರತಿಮೆಯೇ, ಬೆಂಜೀನ್‌ನ (benzene) ಉಂಗುರರಚನೆ (Ring structure)ಯನ್ನು (ಸಾಮಾನ್ಯವಾಗಿ ಷಟ್ಕೋನಾಕೃತಿಯಲ್ಲಿ ನಿರೂಪಿಸುವ) ಕೊಡಲು ಕೆಕುಲೆಗೆ ಸ್ಫೂರ್ತಿಯಿತ್ತಿತು. ಮುಂದೆ ಸೇಂದ್ರಿಯ ರಾಸಾಯನಶಾಸ್ತ್ರ (organic chemistry)ದಲ್ಲಿ ಅಣುರಚನೆಯ ಪ್ರಾಮುಖ್ಯವನ್ನು ತೋರಿಸಿಕೊಡಲು ಹಾಗೂ ಇತರ ಸೇಂದ್ರಿಯ ಸಂಯುಕ್ತಗಳನ್ನು ರಚಿಸಲು ಈ ಉಂಗುರ ರಚನೆಯ ಕಲ್ಪನೆಯು ಕನಸೇ ಸಾಧನವಾಯಿತು.

ಕೆಲವು ಭಯಂಕರ ಸ್ವಪ್ನಗಳೂ ರಚನಾತ್ಮಕ [illegible] ಒಂದು ಸ್ವಪ್ನ ಬಹಳ [illegible]. ಇದೊಂದು ಘೋರ [illegible]; ಆದರೆ ತಲೆ [illegible] ಒಂದು ಸಮಸ್ಯೆಗೆ ಪರಿಹಾರವನ್ನು ಸಾಂಕೇತಿಕವಾಗಿ ಸೂಚಿಸಿತು ಈ ಸ್ವಪ್ನ.

ಎಲಿಯಾಸ್ ಹೋವನು ಹೊಲಿಗೆ ಯಂತ್ರವನ್ನು ಸೃಜಿಸಲು ಅನೇಕ ವರ್ಷಕಾಲ ಸತತವಾಗಿ ಶ್ರಮಿಸಿದ. 'ಎ ಪಾಪ್ಯುಲರ್ ಹಿಸ್ಟರಿ ಆಫ್ ಅಮೇರಿಕನ್ ಇನ್‌ವೆನ್‌ಷನ್' ಎಂಬ ಪುಸ್ತಕದಲ್ಲಿ ಡಬ್ಲ್ಯು. ಎ. ಕೆಂಫರ್ಟ್ ಎಂಬುವನು ಹೋವನ ಈ ಕಥೆಯನ್ನು ಹೀಗೆ ಹೇಳುತ್ತಾನೆ:

"ಎಲಿಯಾಸ್ ಹೋವನು ಹೊಲಿಗೆ ಯಂತ್ರವನ್ನು ಪೂರ್ಣಗೊಳಿಸಿ, ಅದರ ಸೂಜಿ ಯಾವ ರೀತಿ ಇರಬೇಕೆಂಬ ಬಗ್ಗೆ ಆಲೋಚನಾಮಗ್ನನಾಗಿದ್ದನು. ಸೂಜಿಯ ರಂಧ್ರವನ್ನು ಮಧ್ಯದಲ್ಲಿ ಮಾಡಿ ಪ್ರಯೋಗಗಳನ್ನು ನಡೆಸುತ್ತಿದ್ದನು. ಎಷ್ಟು ಪ್ರಯತ್ನಿಸಿದರೂ ಅವನ ಈ ಕಾರ್ಯ ವಿಫಲವಾಗುತ್ತಿತ್ತು. ಆದರೂ ಅವನ ಬುದ್ಧಿಶಕ್ತಿ ಇದರ ಬಗ್ಗೆ ಹಗಲಿರುಳೂ ಕೆಲಸ ಮಾಡುತ್ತಲೇ ಇತ್ತು. ಒಂದು ರಾತ್ರಿ ಹೋವನು ನಿದ್ರಿಸಿದ್ದಾಗ ಭಯಂಕರ ಸ್ವಪ್ನವೊಂದನ್ನು ಕಂಡನು. ಅದರಲ್ಲಿ ಕಪ್ಪುಬಣ್ಣದ ಕಾಡು ಮನುಷ್ಯರ ತಂಡವೊಂದು ಅವನನ್ನು ಬಂಧಿಸಿತು. ಅವರಲ್ಲಿ ಮುಖ್ಯಸ್ಥನೊಬ್ಬನು ಹೋವನನ್ನು ಕುರಿತು 'ಎಲಿಯಾಸ್ ಹೋವ್, ಈಗಲೇ ನೀನು ಈ ಯಂತ್ರದ ಕೆಲಸ ಮುಗಿಸಬೇಕು' ಎಂದು ಆಜ್ಞೆ ಮಾಡುತ್ತಿದ್ದಾನೆ. ಭಯದಿಂದ ಹೋವನ ಕೈಗಳು ನಡುಗತೊಡಗಿ, ಕಾಲು ಕುಸಿದು, ಮುಖದಲ್ಲಿ ಬೆವರಿಳಿಯು ತೊಡಗಿತು. ಆ ಕಿರಾತರು ಅವನನ್ನು ಒಂದು ವಧಸ್ಥಳಕ್ಕೆ ತೆಗೆದುಕೊಂಡು ಹೋದುದನ್ನು ನೋಡಿ ಅವನಿಗೆ ಇನ್ನೂ ಭಯವಾಗಿ, ಅದು ನಿಜವೆನ್ನುವಂತೆ ಜೋರಾಗಿ ಅಳತೊಡಗಿದನು. ಅಷ್ಟರಲ್ಲಿ ಇದ್ದಕ್ಕಿದ್ದಂತೆ ಅವನ ಗಮನ ಆ ಕಿರಾತರು ತನ್ನನ್ನು ಕೊಲ್ಲಲು ಇಟ್ಟುಕೊಂಡಿದ್ದ ಭರ್ಜಿಗಳ ಮೇಲೆ ನೆಟ್ಟಿತು! ಆ ಭರ್ಜಿಗಳ ಚೂಪಾದ ತುದಿಯಲ್ಲಿ ಸಣ್ಣ ರಂಧ್ರಗಳಿವೆ! ಕ್ಷಣ ಮಾತ್ರದಲ್ಲಿ ಅವನ ಸಮಸ್ಯೆಗೆ ಪರಿಹಾರ ದೊರೆಯಿತು. [illegible] ಬೇಕಾಗಿದ್ದುದು, ಚೂಪಾದ [illegible] ರಂಧ್ರವಿರುವ ಸೂಜಿ; ಕೂಡಲೇ ಕ[illegible]. ಈ ಮಾದರಿಯ ಸೂಜಿಯನ್ನು [illegible]

...ಗೊಳಿಸಿ ಪ್ರಪಂಚಕ್ಕೆ ಭವ್ಯ ಕೊಡುಗೆಯನ್ನು ನೀಡಿದ, ಎಲಿಯಾಸ್ ಹೋವ್.

ಈ ರಚನಾತ್ಮಕ ಕನಸುಗಳಿಂದ ನಾವು ಯಾವ ನಿರ್ಣಯಕ್ಕೆ ಬರಬಹುದು? ಲೋವಿ ಮುಂತಾದವರ ಸ್ವಪ್ನಗಳಿಂದ, ರಚನಾತ್ಮಕ ಸ್ವಪ್ನಗಳು ಪುನರಾವರ್ತಿಸುತ್ತವೆ ಎಂದು ಹೇಳಬಹುದು. ಏಕೆಂದರೆ, ಆ ವ್ಯಕ್ತಿ ಒಂದು ವೇಳೆ ಅವುಗಳನ್ನು ಮರೆತರೆ ಅಥವಾ ಅಲಕ್ಷಿಸಿದರೆ ಅವುಗಳ ಪುನರಾವೃತ್ತಿಯಾಗುತ್ತದೆ. ಆದರೂ ಕೆಲವು ಬಾರಿ ಟಾರ್ಟಿನಿ ಹಾಗೂ ಕೋಲರಿಡ್ಜ್ ಅವರುಗಳಿಗೆ ಸಮಸ್ಯೆಯ ಬಗ್ಗೆ ಆದಂತೆ ಈ ರಚನಾತ್ಮಕ ಕನಸುಗಳ ಕೆಲವು ಭಾಗಗಳು ಎಂದೆಂದಿಗೂ ನಷ್ಟವಾಗಬಹುದು. ಜೊತೆಗೆ, ಹೋವನ ಕನಸಿನಿಂದ, ಕೆಲವು ಭಯಂಕರ ಸ್ವಪ್ನಗಳೂ ರಚನಾತ್ಮಕವಾಗಿರುತ್ತವೆ ಎಂಬುದು ಸ್ಪಷ್ಟವಾಗುತ್ತದೆ. ಬಾಡಿಲೈರ್‌ನ ಕೆಲವು ಸ್ವಪ್ನಗಳೂ ದುಃಸ್ವಪ್ನವಾಗಿಯೇ ಇರುತ್ತಿದ್ದುವಂತೆ.

ಗ್ರಹಾಮ್ ವಾಲಾಸ್ ತನ್ನ 'ದಿ ಆರ್ಟ್ ಆಫ್ ಥಾಟ್' ಎಂಬ ಪುಸ್ತಕದಲ್ಲಿ ಈ ರಚನಾತ್ಮಕ ಯೋಚನೆಯನ್ನು ನಾಲ್ಕು ಮಟ್ಟಗಳಲ್ಲಿ ವಿವರಿಸುತ್ತಾನೆ. ಮೊದಲನೆಯ ಹಂತ-'ಸಿದ್ಧತೆ.' ಇದರಲ್ಲಿ ವ್ಯಕ್ತಿ ಒಂದು ಸಮಸ್ಯೆಯನ್ನು ಕುರಿತು ಗಾಢವಾಗಿ ಯೋಚಿಸುತ್ತಿರುತ್ತಾನೆ; ಅದರ ಬಗ್ಗೆಯೇ ಪ್ರಬಲವಾಗಿ ಚಿಂತಿಸುತ್ತಾ ಕೆಲಸ ಮಾಡುತ್ತಿರುತ್ತಾನೆ. ಎರಡನೆಯ ಹಂತ— 'ಆ ಸಮಸ್ಯೆ ಪಕ್ವಾವಸ್ಥೆಗೆ ಬರುವ ಸಮಯ' ಇಲ್ಲಿ ಆ ಸಮಸ್ಯೆಯನ್ನು ತಾತ್ಕಾಲಿಕವಾಗಿ ಬದಿಯಲ್ಲಿಟ್ಟು ಬೇರೆ ಯಾವುದಾದರೂ ಕಾರ್ಯದಲ್ಲಿ ತೊಡಗಿರುತ್ತಾನೆ. ಮೂರನೆಯ ಹಂತ— 'ಅಂತಃಸ್ಫೂರ್ತಿ ಅಥವಾ ಜ್ಞಾನೋದಯ'. ಇಲ್ಲಿ ಆ ವ್ಯಕ್ತಿಗೆ ಇದ್ದಕ್ಕಿದ್ದಂತೆ ಸಮಸ್ಯೆ ಹೇಗೆ ಪರಿಹಾರವಾಗಬಲ್ಲದು ಎಂಬುದು ಗೋಚರವಾಗುತ್ತದೆ. ನಾಲ್ಕನೆಯ ಹಾಗೂ ಕಡೆಯ ಹಂತ—ಅದನ್ನು 'ಪ್ರಮಾಣಿಸಿ ನೋಡುವುದು ಅಥವಾ ಪುನರವಲೋಕನ'. ಇಲ್ಲಿ ಸವಿಸ್ತಾರವಾಗಿ ಆ ಪರಿಹಾರದ ಬಗ್ಗೆ ದೀರ್ಘವಾಗಿ ಕಾರ್ಯೋನ್ಮುಖನಾಗುತ್ತಾನೆ.

ನಿದ್ರೆಯಲ್ಲಿ ಅಥವಾ ನಿದ್ರೆಯ ನಂತರ ಪರಿಹಾರ ದೊರೆಯುವ ಸಮಸ್ಯೆಗಳಿಗೆ, ನಿದ್ರಿಸಿದ ಸಮಯದಲ್ಲಿ ವಿಚಾರಗಳು ಪಕ್ವಾವಸ್ಥೆಗೆ ಬರುತ್ತವೆ ಎಂಬ ರಚನಾತ್ಮಕವಾದ ವಿವರಣೆಯನ್ನು ನೀಡಬಹುದು. ಏಕೆಂದರೆ ಸಿದ್ಧತೆಯ ಸ್ಥಿತಿಯ ನಂತರ ವ್ಯಕ್ತಿ ನಿದ್ರೆ ಹೋದರೆ ನಿದ್ರೆಯೇ ಆತನಿಗೆ 'ವಿಚಾರಗಳು ಪಕ್ವಾವಸ್ಥೆಗೆ ಬರುವ ಸ್ಥಿತಿ'ಯಾಗುತ್ತದೆ. ಇದಕ್ಕೆ ಕಾರಣವೇನೆಂದರೆ 'ಸಿದ್ಧತೆ'ಯ ಸ್ಥಿತಿಯ ನಂತರ ಆತ ಸಮಸ್ಯೆಯನ್ನು ತಾತ್ಕಾಲಿಕವಾಗಿ ಬದಿಗಿಟ್ಟು ನಿದ್ರೆಯಲ್ಲಿ ತೊಡಗಿರುತ್ತಾನೆ; ಅಥವಾ ಅವನು ಬಹಳ ಮುಂಚೆಯೇ ಸಮಸ್ಯೆಯನ್ನು ಬದಿಗಿಟ್ಟು, ಅದು 'ಪಕ್ವಾವಸ್ಥೆಗೆ ಬರುವ ಸ್ಥಿತಿ'ಯಲ್ಲಿದ್ದರೆ, ನಿದ್ರೆ ಈ 'ಸ್ಥಿತಿ'ಯನ್ನು ಮುಂದುವರಿಸುತ್ತದೆ. ಈ 'ಸ್ಥಿತಿ'ಯ ಕಾರ್ಯ ಚಟುವಟಿಕೆಗಳು, ಆ ಸಮಸ್ಯೆಯನ್ನು ಪರಿಹರಿಸುವ ಒಂದು ಅಂಶವನ್ನು ಅಥವಾ ಆ ಸಮಸ್ಯೆಯ ಪರಿಹಾರವನ್ನು ಸಾಂಕೇತಿಕವಾಗಿ ಸೂಚಿಸುವ ಒಂದು ಅಂಶವನ್ನು ಹೊಂದಿರುತ್ತವೆ. ಆದ್ದರಿಂದ ನಿದ್ರೆಯೇ 'ವಿಚಾರಗಳು ಪಕ್ವಾವಸ್ಥೆಗೆ ಬರುವ ಸ್ಥಿತಿ' ಆದಾಗ, ಕನಸು ಚಟುವಟಿಕೆಗಳು, ಸಮಸ್ಯೆಯ ಪರಿಹಾರದ ಅಂಗವನ್ನು ನೇರವಾಗಿ ಅಥವಾ ಸಾಂಕೇತಿಕವಾಗಿ ಹೊಂದಿರುತ್ತವೆ. ಈ 'ಸ್ಥಿತಿ'ಯಲ್ಲಿ ವ್ಯಕ್ತಿ ಎಚ್ಚರವಾಗಿದ್ದರೆ ಆತ ತಾತ್ಕಾಲಿಕವಾಗಿ ಮಧ್ಯೆ ಮಧ್ಯೆ ಅದನ್ನು ಬದಿಗೊತ್ತಿದರೂ, ಅದರ ಬಗ್ಗೆ ಕೆಲಸ ಮಾಡುತ್ತಲೇ ಇರುತ್ತಾನೆ. ಅದೇ ರೀತಿ, ನಿದ್ರೆ 'ವಿಚಾರಗಳು ಪಕ್ವಾವಸ್ಥೆಗೆ ಬರುವ ಸ್ಥಿತಿ'ಯಾಗಿದ್ದಾಗ [illegible], ಇಲ್ಲದೆಯೋ ಆತನು ತನ್ನ ಕನಸಿನಲ್ಲಿಯೇ ಅದರ ಬಗ್ಗೆ ಯೋಚಿಸುತ್ತಿರುತ್ತಾನೆ. ಅದನ್ನು ಬದಿಗಿಟ್ಟು [illegible]. ಅದರ [illegible] ಕನಸಿನಲ್ಲಿಯೇ [illegible]ತ್ತಿರುತ್ತದೆ. ಜೊತೆಗೆ ಆ ವ್ಯಕ್ತಿಗೆ ತನ ಸಮಸ್ಯೆಯನ್ನು ಪರಿಹರಿಸಬೇಕೆಂಬ ಮಹಾತ್ವಾಕಾಂಕ್ಷೆ ಮನಸ್ಸಿನಲ್ಲಿ ಇದ್ದೇ ಇರುವುದರಿಂದ, ಬಯಕೆಯನ್ನು ಪೂರ್ಣಗೊಳಿಸುವ ಕೆಲವು ಸ್ವಪ್ನಗಳು ಅದನ್ನು ಪರಿಹರಿಸುತ್ತವೆ. ✡

ಫೆಬ್ರುವರಿ - 1973

# ರಾಜಾಜಿ: ಅವರಿವರು ಕಂಡಂತೆ

**ರಾಜಾಜಿ ಇನ್ನಿಲ್ಲ. ಗಾಂಧೀಜಿಯ ತಲೆಮಾರಿನ ಮಹಾಮುಖಂಡರಲ್ಲಿ ಕೊನೆಯವರಾಗುಳಿದಿದ್ದ ಈ ಮುತ್ಸದ್ದಿ ಕಳೆದ ಡಿಸೆಂಬರ್ ೮ ರಂದು ೯೫ ರಲ್ಲಿ ಪದಾರ್ಪಣ ಮಾಡಿದ್ದರು. ಡಿಸೆಂಬರ್ ೨೫ ರ ಸಂಜೆ, ಅವರ ಮಾತಿನಲ್ಲೇ ಹೇಳುವುದಾದರೆ, ಅವರು ಯಮನಿಗೆ ಸಂದರ್ಶನ ನೀಡಿದರು. ತಮ್ಮ ಸುದೀರ್ಘ ಜೀವನದಲ್ಲಿ, ಅನೇಕ ಏರಿಳಿತಗಳನ್ನು ಕಂಡ ಅವರ ಹೃದಯವಂತಿಕೆಯ, ಬುದ್ಧಿಮತ್ತೆಯ, ಚಾರಿತ್ರ್ಯಶುದ್ಧಿಯ ಅನುಭವ ಅನೇಕರಿಗೆ ಬಂದಿರಲು ಸಾಕು. ದೇಶದ ಬೇರೆ ಬೇರೆ ಪತ್ರಿಕೆಗಳಿಂದ ಆಯ್ದ ಇಂಥ ಕೆಲ ಅನುಭವಗಳನ್ನು 'ಕಸ್ತೂರಿ'ಯ ಓದುಗರಿಗಾಗಿ ಇಲ್ಲಿ ಸಂಗ್ರಹಿಸಲಾಗಿದೆ.**

೧೯೩೦ ರ ಕೊನೆ ಕೊನೆಯ ದಿನಗಳು. ಕೃಶಕಾಯದ ಕರಿ ಕನ್ನಡಕಧಾರಿ ವ್ಯಕ್ತಿಯೊಬ್ಬ ಧೋತರದ ಚುಂಗನ್ನು ಎತ್ತಿ ಸೊಂಟಕ್ಕೆ ಸಿಕ್ಕಿಸಿಕೊಂಡು ವೆಲ್ಲೂರು ಕೇಂದ್ರ ಸೆರೆಮನೆಯ ಅಂಗಣದಲ್ಲಿ ಸಾಗುತ್ತಿದ್ದ. ಆಗ ನಾನೂ ಅಲ್ಲಿದ್ದೆ.



ಅವನನ್ನು ನೋಡಿ ಮರಗಳಡಿ ಕುಳಿತಿದ್ದವರು ಎದ್ದು ನಿಂತರು.

"ಇವನು ಯಾರು ?" ಎಂದು ನಾನು ಕೇಳಿದೆ.

ಅಲ್ಲೇ ಇದ್ದ ಪ್ರೊಫೆಸರ್ ಎನ್. ಜಿ. ರಂಗಾ ಅವರು, "ಗೊತ್ತಿಲ್ಲವೇ ? ಇವರೇ ರಾಜಾಜಿ. ಭಾರತದ ಗವರ್ನರ್ ಜನರಲ್ ಸ್ಥಾನವನ್ನು ಏರಬಹುದಾದ ಮನುಷ್ಯ ಅವರು," ಎಂದರು.

ದಶಕಗಳ ನಂತರ ರಾಜಾಜಿ ನಿಜವಾಗಿಯೂ ಭಾರತದ ಗವರ್ನರ್ ಜನರಲ್ಲರಾದರು.

೧೯೩೭ ರಲ್ಲಿ ಅವರು ಮದ್ರಾಸಿನ ಪ್ರಧಾನ ಮಂತ್ರಿಯಾದಾಗ ಸಾಮಾನ್ಯ ಮನುಷ್ಯರಿಗೆ ಅನುಸರಿಸಲು ಅಸಾಧ್ಯವೆನಿಸುವಷ್ಟು ಉನ್ನತ ಆಚಾರ ಮಟ್ಟವನ್ನು ಹಾಕಿಕೊಂಡಿದ್ದರು. ಅವರನ್ನು ಕಾಣಲು ಬರುವ ಪ್ರತಿಯೊಬ್ಬನೂ ಯಾವುದಾದರೂ ನೌಕರಿ ಕೇಳಲು ಅಥವಾ ಇನ್ನೇನಾದರೂ ವಶೀಲಿ ಹಚ್ಚಲು ಬಂದಿರಬಹುದೆಂಬಂತೆ ಶಂಕಾದೃಷ್ಟಿಯಿಂದ ನೋಡುತ್ತಿದ್ದರು.

ಯುರೋಪಿಯನ್ನರೊಡನೆ ಅವರು ಸೌಮ್ಯವಾಗಿರುತ್ತಿದ್ದರು: ಭಾರತೀಯ ಅಧಿಕಾರಿಗಳನ್ನು ಬಿಗಿಯಿಂದ ನಡೆಸಿಕೊಳ್ಳುತ್ತಿದ್ದರು. ಬೇಗೇಕೆಂದು ಕೇಳಿದರೆ ಅವರು ಕೊಡುತ್ತಿದ್ದ

ಉತ್ತರ: ಕ್ರೋಟನ್ ಗಿಡಗಳ ಹಾಗೆ ಯುರೋಪಿಯನ್ನರನ್ನು ಬಲು ಜಾಗ್ರತೆಯಿಂದ ಆರೈಕೆ ಮಾಡಬೇಕಾಗುತ್ತದೆ. ಭಾರತೀಯ ಅಧಿಕಾರಿಗಳು ಎಲ್ಲೆಂದರಲ್ಲಿ ಬದುಕಿ ಬೆಳೆಯಬಲ್ಲ ಗಿಡಗಳು—ಎಂದು.

ಮಹಾತ್ಮಾ ಗಾಂಧಿಯವರು ರಾಜಾಜಿಯನ್ನು ಬಹಳ ಗೌರವದಿಂದ ಕಾಣುತ್ತಿದ್ದರೂ ಅಖಿಲ ಭಾರತ ರಾಜಕಾರಣದಲ್ಲಿ ಅವರ ಪಾತ್ರ ಗಾಂಧೀಜಿಯ ಕೈಪಾಡಿ ಎಂಬುದಕ್ಕಿಂತ ಹೆಚ್ಚಾಗಿರಲಿಲ್ಲವೆನ್ನಬಹುದು. ಆಗ "ರಾಷ್ಟ್ರಪತಿ" ಎಂದು ಕರೆಯಲ್ಪಡುತ್ತಿದ್ದ ಕಾಂಗ್ರೆಸ್ ಅಧ್ಯಕ್ಷಪದಕ್ಕೆ ರಾಜಾಜಿಯನ್ನೆಂದೂ ಆರಿಸಲಿಲ್ಲವೆಂಬುದಕ್ಕಾಗಿ ದಕ್ಷಿಣದಲ್ಲನೇಕರು ನೊಂದುಕೊಂಡಿದ್ದರು.

ಮುಂಬಯಿಯ ರೇಡಿಯೋ ಕ್ಲಬ್ಬಿನಲ್ಲಿ ಜರುಗಿದ ಒಂದು ಸ್ವಾಗತ ಸಮಾರಂಭದಲ್ಲಿ ಸರ್ ಹೋಮಿ ಮೋದಿಯವರು ರಾಜಾಜಿಯನ್ನು ಹೀಗೆ ವರ್ಣಿಸಿದರು: "ರಾಜಾಜಿ ಇಲ್ಲಿ ಕೂತಿದ್ದಾರೆ. ಈ ಮೇಜಿನ ಮೇಲೆ ಒಂದು ಕಪ್ಪು ಚೆಕ್ಕು ನೆಗೆಯಿತೆಂದಿಟ್ಟುಕೊಳ್ಳಿ. ಅವರು ಅದನ್ನು ಬಿಳಿ ಚೆಕ್ಕೆಂದು ಸಾಧಿಸುವರು ಮತ್ತು ನಾವೆಲ್ಲರೂ ಮನೆಗೆ ಹೋಗುವಾಗ ಅದು ಬಿಳಿ ಚೆಕ್ಕೆಂದೇ ಖಂಡಿತವಾಗಿ ನಂಬುವೆವು."

ತ್ರಿಪುರಾ ಕಾಂಗ್ರೆಸ್ಸಿನಲ್ಲಿ ಅಧ್ಯಕ್ಷ ಸುಭಾಷಚಂದ್ರ ಬೋಸರಿಗೂ ಮಹಾತ್ಮಾ ಗಾಂಧಿ ಮತ್ತು ಕಾಂಗ್ರೆಸ್ ಕಾರ್ಯಸಮಿತಿಗೂ ಭಿನ್ನಾಭಿಪ್ರಾಯ ಬಂದಾಗ ರಾಜಾಜಿ ಸುಭಾಷರನ್ನು ಖಂಡಿಸಿ ವಿಷಯನಿಯಾಮಕ ಸಮಿತಿಯಲ್ಲಿ ಅತ್ಯಂತ ಪ್ರಭಾವಶಾಲಿಯಾಗಿ ಮಾತಾಡಿದರು. ಅವರ ಸಾಮತಿಗಳು ಪ್ರಾಣಾಂತಿಕವಾಗಿದ್ದವು. ತ್ರಿಪುರಾದಲ್ಲಿ ಆ ಬೆಳಗ್ಗೆ ಅವರು ದೊಡ್ಡ ಜನಸಮೂಹದಲ್ಲಿ ಮಾತಾಡುತ್ತ ಗಾಂಧೀಜಿಯ ನಾಯಕತ್ವವನ್ನು ಬಲವಾದ ನಾವೆಯ ಅಂಬಿಗನಿಗೆ ಹೋಲಿಸಿ

## ಸ್ವರಾಜ್ಯ ಬಂದರೆ....

ಅನೇಕ ಮಹಾವ್ಯಕ್ತಿಗಳ ಹಾಗೆ ರಾಜಾಜಿಯವರೂ ಭವಿಷ್ಯ ದ್ರಷ್ಟಾರರಾಗಿದ್ದರು. ೧೯೨೧ ರಲ್ಲಿ ಅವರು ಜೇಲಿನಲ್ಲಿದ್ದಾಗ ತಮ್ಮ ದಿನಚರಿಯಲ್ಲಿ ಹೀಗೆ ಬರೆದಿದ್ದರು: "ಸ್ವರಾಜ್ಯ ಬಂದ ಕೂಡಲೇ ಅಥವಾ ಬಂದ ನಂತರ ಸುದೀರ್ಘ ಅವಧಿಯವರೆಗೆ, ಅದು ಜನರಿಗೆ ಸುಖವನ್ನಾಗಲಿ ಒಳ್ಳೆಯ ಸರಕಾರವನ್ನಾಗಲಿ ತಂದುಕೊಡಲಾರದು.

"ಸ್ವಾತಂತ್ರ್ಯ ದೊರೆಯುವುದೇ ತಡ, ಚುನಾವಣೆ ಹಾಗೂ ಅದರೊಂದಿಗೆ ಬರುವ ಭ್ರಷ್ಟಾಚಾರ, ಅನ್ಯಾಯ, ಹಣದಿಂದೊದಗುವ ದೌರ್ಜನ್ಯ, ಅಸಮರ್ಥ ಆಡಳಿತದಿಂದಾಗಿ ಜನರ ಜೀವನ ನರಕಮಯವಾಗುವುದು.

"ತುಲನಾತ್ಮಕವಾಗಿ ಹೆಚ್ಚು ನ್ಯಾಯಭೀರುವೂ ಸಮರ್ಥವೂ ಪ್ರಾಮಾಣಿಕವೂ ಆದ ಹಳೆ ಆಳಿಕೆಯೇ ಚೆನ್ನಾಗಿತ್ತು ಎಂದು ಅನೇಕ ಜನ ಅಂದುಕೊಳ್ಳುವರು. ಸ್ವಾತಂತ್ರ್ಯದಿಂದ ನಮಗೆ ದೊರೆಯುವುದೇನೆಂದರೆ, ಅವಮರ್ಯಾದೆ ಪರಾಧೀನತೆಗಳಿಂದ ನಮ್ಮ ಜನಾಂಗಕ್ಕೆ ಮುಕ್ತಿ.

"ಸಚ್ಚಾರಿತ್ರ್ಯ, ಪಾಪಭೀರುತ್ವ ಹಾಗೂ ಪರಸ್ಪರರಲ್ಲಿ ಪ್ರೇಮಭಾವನೆ ಉದಿಸಲು ಪ್ರೇರಕವಾಗುವಂತಹ ಸಾರ್ವತ್ರಿಕ ಶಿಕ್ಷಣವನ್ನು ಚಿಕ್ಕಂದಿನಲ್ಲೇ ಮಕ್ಕಳಿಗೆ ಕೊಟ್ಟು ಅವರನ್ನು ಒಳ್ಳೇ ನಾಗರಿಕರನ್ನಾಗಿ ಮಾಡುವುದರಲ್ಲೇ ಒಳ್ಳೇ ಭವಿಷ್ಯ ಅಡಗಿದೆ. ಇದಾಗದಿದ್ದರೆ ಅವರು ಅನ್ಯಾಯ, ಹಾಗೂ ಸಂಪತ್ತಿನ ದೌರ್ಜನ್ಯಗಳ ಅಡಿಯಲ್ಲಿ ಸಿಕ್ಕುಹೋಗುತ್ತಾರೆಂಬುದು ನಿಶ್ಚಯ."

ದರು. ಅವರಲ್ಲಿ ಕುಳಿತುಕೊಂಡರೆ ಬಿರುಗಾಳಿಯಿಂದ ತಳಮಳಿಸುವ ಸಮುದ್ರವನ್ನು ಸುರಕ್ಷಿತವಾಗಿ ದಾಟಬಹುದು. ಸುಭಾಷರು ತೂತು ಬಿದ್ದ ನಾವೆಯ ಕ್ಯಾಪ್ಟನ್ನಂತಿದ್ದಾರೆ. ಅವರ ಸಂಗಡ ಹೋದವರು ಸಮುದ್ರ ತಳ ಕಾಣುವುದೇ ಸೈ—ಎಂದರು. ಈ ಚಿತ್ರವತ್ತಾದ ಮಾತಿನ ಪರಿಣಾಮವನ್ನು ಸುಭಾಷರಿಗೆ ಏನು ಮಾಡಿದರೂ ಅಳಿಸುವುದು ಸಾಧ್ಯವಾಗಲಿಲ್ಲ.

ಆದರೆ ಬೇಗನೆ ಗಾಂಧೀಜಿ ಮತ್ತು ರಾಜಾಜಿಯವರ ಮಾರ್ಗಗಳು ಕವಲೊಡೆದುವು. ರಾಜಾಜಿ ಎರಡನೇ ಮಹಾಯುದ್ಧದ ಕಾಲದ ಮುಟ್ಟಿಗೆ ಬ್ರಿಟಿಶ್ ಸರಕಾರದೊಡನೆ ಸಹಕರಿಸಬೇಕೆಂಬ ಅಭಿಪ್ರಾಯ ತಾಳಿದರು. ಇದೇ ಸುಮಾರಿಗೆ ೧೯೪೧ ರಲ್ಲಿ ರಾಜಾಜಿ ಮುಂಬಯಿಗೆ ಬಂದಾಗ ಮಾಟುಂಗದಲ್ಲಿ ನಪ್ಪು ಹಾಲಿನಲ್ಲಿ ಅವರ ಭಾಷಣ ಏರ್ಪಟ್ಟಿತ್ತು. ಈ ಸಂದರ್ಭದಲ್ಲಿ ಯಾರೋ ಡಾಂಬರು ತುಂಬಿದ ಕಾಗದದ ಚೀಲವನ್ನು ರಾಜಾಜಿಯ ಮೇಲೆ ಬೀಸಿದರು. ಅದು ಗುರಿ ತಪ್ಪಿದರೂ ಅವರ ಬೋಳು ನೆತ್ತಿಯ ಮೇಲೆ ಸ್ವಲ್ಪ ಡಾಂಬರು ಸುರಿದು ಅವರ ಬಿಳಿ ಜುಬ್ಬದ ಮೇಲೂ ಇಳಿಯಿತು. ಆದರೆ ಏನೇನೂ ವಿಚಲಿತರಾಗದೆ ರಾಜಾಜಿ ಮೇಜಿನ ಮೇಲೇರಿದರು. ಸ್ವಾತಂತ್ರ್ಯ ಸಂಪಾದನೆಗಾಗಿ ಮುಸ್ಲಿಮರೊಡನೆ ರಾಜಿ ಮಾಡಿಕೊಳ್ಳಬೇಕೆಂದೂ ಬ್ರಿಟಿಶರೊಡನೆ ಸಹಕರಿಸಬೇಕೆಂದೂ ವಾದಿಸಿದರು. ಯಾರೂ ಹೊರಗೆ ಹೋಗಲಿಲ್ಲ. ಎಲ್ಲರೂ ಆಲಿಸಿದರು.

ಆದರೆ ಮತ್ತೆ ೧೯೪೨ ರಲ್ಲಿ ಸೇವಾಗ್ರಾಮದಲ್ಲಿ ಕಾಂಗ್ರೆಸ್ ಕಾರ್ಯಸಮಿತಿ ಚಲೇಜಾವ್ ತೀರ್ಮಾನವನ್ನು ರೂಪಿಸತೊಡಗಿತ್ತು.

—ಕೆ. ಎಸ್. ರಾಮಚಂದ್ರನ್

•

ರಾಜಾಜಿಯವರು ಮದರಾಸು ಪ್ರಾಂತದ ಮುಖ್ಯಮಂತ್ರಿಗಳಾಗಿದ್ದಾಗ ಫೋರ್ಟ್ ಸೇಂಟ್ ಜಾರ್ಜ್‌ನಿಂದ ಸ್ಟ್ಯಾಂಟ್ ಹೋಮ್ ವರೆಗೆ ಕೆಲ ವೇಳೆ ಸಂಜೆಯ ಮುಂದೆ ನಡೆಯುತ್ತಾ ಹೋಗುತ್ತಿದ್ದರು. ಬಸ್ ಹೌಸ್ ಬೀಚಿನಲ್ಲಿ ನಾವು ಹುಡುಗರು ಚಿಮ್ಮ ಆಟವಾಡುತ್ತಿದ್ದಾಗ ಬುಲಸು ಸಾಂಬಮೂರ್ತಿಯವರೊಡನೆ ಯಾವುದೋ ವಿಷಯದ ಬಗ್ಗೆ ಚರ್ಚೆಯಲ್ಲಿ ಮಗ್ನರಾಗಿ ಮಾರ್ಗಮಧ್ಯೆ ಬರುತ್ತಿದ್ದ ಅವರು ನಮ್ಮನ್ನು ಕಂಡ ಕೂಡಲೇ ಆಟಕ್ಕೆ ಭಂಗ ಬಾರದಂತೆ ಸಾಂಬಮೂರ್ತಿಯವರನ್ನು ತಮ್ಮ ಬಳಿ ಎಳೆದುಕೊಂಡರು. ಅನಂತರ ಆಟವನ್ನು ಆಸಕ್ತಿಯಿಂದ ನಿರೀಕ್ಷಿಸಿದರು. ಇದಾದ ಬಳಿಕ ರಾಜಾಜಿ ನನ್ನನ್ನು ಕೈಮಾಡಿ ಕರೆದು ತಮ್ಮ ತೊಡೆಯ ಮೇಲೆ ಕೂಡಿಸಿಕೊಂಡು ಪ್ರೀತಿಯಿಂದ ಮೈಯನ್ನು ನೇವರಿಸಿದರು. ಇನ್ನೂ ಚೆನ್ನಾಗಿ ಆಡುವಂತೆ ಆಟಗಾರರನ್ನು ಹುರಿದುಂಬಿಸಿದರು. ಅತ್ತ ಹಳೆ ಪೀಳಿಗೆಯವರಾದ ಸಾಂಬಮೂರ್ತಿ, ಇತ್ತ ಯುವಜನಾಂಗಕ್ಕೆ ಸೇರಿದ ನಾನು, ಹೀಗೆ ಈ ಎರಡೂ ಪೀಳಿಗೆಗಳನ್ನು ಜೋಡಿಸುವ ಸೇತುವೆಯಂತೆ ರಾಜಾಜಿ ನನಗಾಗ ಕಂಡರು.

ಈ ಸಂಪತ್

*

ಹಿಂದೆ ಸ್ಯಾಮುಯೆಲ್ ಜಾನ್‌ಸನ್ನನು ಗೋಲ್ಡ್‌ಸ್ಮಿತ್‌ನ ಬಗೆಗೆ ಮಾತಾಡುತ್ತಾ, ಆತ ತಾನು ಗೌರವಿಸುವ ಸಂಗತಿಗಳನ್ನು ಹೊರತು ಪಡಿಸಿ ಉಳಿದಾವುದರ ಗೊಡವೆಗೂ ಹೋಗುವುದಿಲ್ಲ, ಎಂದು ಹೇಳಿದ್ದ. ಈ ಮಾತು ರಾಜಾಜಿಗೆ ಸರಿಯಾಗಿ ಅನ್ವಯಿಸುತ್ತದೆ. ಗಾಂಧೀಜಿ ತಪ್ಪು ಮಾಡಿದಾಗ ಅವರಿಗೆ ಆ ಬಗ್ಗೆ ನಿರ್ಭಿಡೆಯಿಂದ ಹೇಳುವಷ್ಟು ಉನ್ನತತರವಾದ ನೈತಿಕಮಟ್ಟವನ್ನು ಅವರು ಕಾಯ್ದುಕೊಂಡು ಬಂದಿದ್ದರು. ೧೯೩೩ ರಲ್ಲಿ ಮೇ ೮ ರಿಂದ ಮೂರು ವಾರಗಳ ಕಾಲ ಗಾಂಧೀಜಿ ಉಪವಾಸ ಪ್ರಾರಂಭಿಸಬೇಕೆಂದಾಗ ರಾಜಾಜಿಯವರು, ಅದಕ್ಕೂ ಮೊದಲು ವೈದ್ಯರಿಂದ ಪರೀಕ್ಷಿಸಿಕೊಳ್ಳುವುದು ಒಳ್ಳೆಯದು ಎಂದು ಗಾಂಧೀಜಿಗೆ ಸೂಚಿಸಿದರು. ಆದರೆ ಗಾಂಧೀಜಿ ಅವರ ಸಲಹೆಯನ್ನು ಒಪ್ಪಲಿಲ್ಲ.

"ಹಾಗಾದರೆ ನೀವು ಬೇರಾರ ಮಾತನ್ನೂ ಕೇಳುಕೊಳ್ಳುವುದಿಲ್ಲ; ನೀವು ಹೇಳಿದ್ದೇ ಸರಿ ಎನ್ನುತ್ತೀರಿ, ಅಂದ ಹಾಗಾಯಿತು," ಎಂದು ಗಾಂಧೀಜಿಗೆ ರಾಜಾಜಿ ಬರೆದರು. ಕೂಡಲೇ ಗಾಂಧೀಜಿ ವೈದ್ಯಕೀಯ ಪರೀಕ್ಷೆಗೆ ಒಪ್ಪಿದರು.

**ಟಿ. ಎಸ್. ಕೃಷ್ಣಮಾಚಾರ್**

*

**ಕೆ**ಲ ವರ್ಷಗಳ ಹಿಂದೆ ರಾಜಾಜಿಯವರು ಮದರಾಸಿನ ಅಡ್ವರ್ಟೈಜರ್ಸ್ ಕ್ಲಬ್ಬಿನಲ್ಲಿ ಭಾಷಣ ಮಾಡುತ್ತಾ ಜಾಹಿರಾತು ಉದ್ದಿಮೆಯಲ್ಲಿರುವ ನಮ್ಮನ್ನು ಕಿಸೆಗಳ್ಳರೆಂದು ಕರೆದ ದಿನ ಇನ್ನೂ ನೆನಪಿನಲ್ಲಿದೆ. ಏಕೆಂದರೆ, ಅವರ ಪ್ರಕಾರ, ಈ ಉದ್ದಿಮೆಯಲ್ಲಿನ ಜನ ತಮ್ಮ ಆಕರ್ಷಕ ಜಾಹೀರಾತುಗಳಿಂದಾಗಿ, ತಮ್ಮ ಯೋಗ್ಯತೆಗೆ ಮೀರಿದ ಸರಕನ್ನು ಕೊಳ್ಳುವಂತೆ ಜನರನ್ನು ಪ್ರೋತ್ಸಾಹಿಸುತ್ತಾರೆ; ವಸ್ತುಗಳನ್ನು ಜಾಹೀರಾತುಗಳಲ್ಲಿ ಅವರು ಅಂದವಾಗಿ ಪ್ರದರ್ಶಿಸುತ್ತಾರಲ್ಲದೆ ಅವುಗಳನ್ನು ಕೊಳ್ಳುವುದರಿಂದ ಜೀವನ ಹೆಚ್ಚು ಸುಖಮಯವಾಗುತ್ತದೆ ಎಂದು ಜನರನ್ನು ನಂಬಿಸುತ್ತಾರೆ. ನಮ್ಮದು ಬಡ ದೇಶ; ಅಷ್ಟು ಅಗತ್ಯವಿಲ್ಲದ ವಸ್ತುಗಳನ್ನು ಕೊಳ್ಳುವಂತೆ ಜನರನ್ನು ಪ್ರೋತ್ಸಾಹಿಸುವುದು ಸರಿಯಲ್ಲವೆಂಬುದು ಅವರ ಭಾಷಣದ ತಾತ್ಪರ್ಯ.

ಅವರ ಮಾತನ್ನಲ್ಲಗಳೆಯುವ ಧೈರ್ಯ ಅಲ್ಲಿದ್ದ ಯಾರಿಗೂ ಬರಲಿಲ್ಲ.

**ಅಲೆಕ್ ವಾಕರ್**

*

**ಪಾ**ರ್ಲಿಮೆಂಟಿಗೆ ತಮಿಳಿನಲ್ಲಿ ಪಾರಲ ಮನ್ರಮ್ ಎಂಬ ಶಬ್ದವಿದೆ ಎಂದು ಇತ್ತೀಚೆ ನನ್ನ ಮಿತ್ರನೊಬ್ಬ ಹೇಳಿದ. ಈ ಎರಡು ಶಬ್ದಗಳಲ್ಲಿನ ಅಗಾಧ ಸಾಮ್ಯದಿಂದಾಗಿ ತಮಿಳಿನಿಂದಲೇ ಇಂಗ್ಲೀಷು ಶಬ್ದ ಹುಟ್ಟಿಕೊಂಡಿರಬಹುದೆ? ಎಂದು ನಾನು ಯೋಚಿಸುವಂತಾಯಿತು. "ತಮಿಳಿನಲ್ಲಿ ಪಾರ್ ಅಂದರೆ ಜಗತ್ತು, ಅಲು ಎಂದರೆ ಜನರು ಮತ್ತು ಮನ್ರಮ್ ಎಂದರೆ ಸಭೆ. ಈ ಮೂರು ಮೂಲ ಶಬ್ದಗಳಿಂದ ಈ ಹೊಸ ಶಬ್ದವನ್ನು ಸೃಷ್ಟಿಸಿದವರು ಯಾರು ಗೊತ್ತೇ?– ಸಿ. ರಾಜಗೋಪಾಲಾಚಾರ್ಯರು," ಎಂದಾತ ಹೇಳಿದ.

**-ಓರ್ವ ಅಭಿಮಾನಿ**

*

**ರಾ**ಜಾಜಿಯನ್ನು ನಾನು ಮೊದಲ ಬಾರಿ ಕಂಡುದು ೧೯೪೩ ರಲ್ಲಿ. ಎರಡು ಬ್ರಿಟಿಶ್ ಪತ್ರಿಕೆಗಳ ವಿಶೇಷ ಪ್ರತಿನಿಧಿಯಾಗಿ ನಾನು ಭಾರತವನ್ನು ಸುತ್ತುತ್ತಿದ್ದೆ. ದಿಲ್ಲಿಯಲ್ಲಿ ರಾಜಾಜಿಯವರ ಅಳಿಯ ದಿ. ದೇವದಾಸ ಗಾಂಧಿಯವರ ಅತಿಥಿಯಾಗಿದ್ದೆ. ಆಗ ರಾಜಾಜಿಯೂ ಅಲ್ಲಿದ್ದರು.

ಆಗೊಂದು ದಿನ ಭಾರತ ಮಂತ್ರಿಯಾಗಿದ್ದ ಅಮೇರಿಯವರು ಭಾರತದ ಬಗ್ಗೆ ಕಾಮನ್ಸ್ ಸಭೆಯಲ್ಲಿ ಒಂದು ಸುದೀರ್ಘ ಹೇಳಿಕೆ ನೀಡಿದ್ದರು. 'ಹಿಂದುಸ್ತಾನ ಟೈಮ್ಸ್' ಅದಕ್ಕೆ ಆರು ಕಾಲಂಗಳಿಗಿಂತಲೂ ಹೆಚ್ಚು ಸ್ಥಳ ನೀಡಿತ್ತಲ್ಲದೆ ಎರಡು ಕಾಲಂಗಳಷ್ಟು ಸಂಪಾದಕೀಯವನ್ನೂ ಬರೆದಿತ್ತು. ಆದರೆ ಅಮೇರಿ ಮಾಡಿದ ಈ ಭಾಷಣಕ್ಕೂ ಆರು ತಿಂಗಳ ಹಿಂದೆ ಅವರೇ ಮಾಡಿದ್ದ ಭಾಷಣಕ್ಕೂ ಒಂದಕ್ಷರ ಸಹ ವ್ಯತ್ಯಾಸವಿರಲಿಲ್ಲ. ಹೀಗಿರುವಾಗಲೂ ದೇವದಾಸರ ಪತ್ರಿಕೆ ಅದಕ್ಕೆ ಇಷ್ಟು ಸ್ಥಳವಿತ್ತುದನ್ನು ಕಂಡು ನನಗೆ ಬೇಸರವೆನಿಸಿತು. ಆ ಬಗ್ಗೆ ನನಗೂ ದೇವದಾಸರಿಗೂ ವಾಗ್ವಾದವೇ ನಡೆಯಿತು.

ರಾಜಾಜಿ ನಮ್ಮ ಮಾತುಗಳನ್ನು ಲಕ್ಷ್ಯಗೊಟ್ಟು ಕೇಳುತ್ತಿದ್ದರು. ಆಗ ದೇವದಾಸ ನನ್ನನ್ನು ಕೇಳಿದರು, "ಒಂದು ವೇಳೆ ನೀವೇ ನನ್ನ ಸ್ಥಾನದಲ್ಲಿದ್ದರೆ ಏನು ಮಾಡುತ್ತಿದ್ದಿರಿ ?" ಎಂದು. "ಮುಖಪುಟದಲ್ಲಿ 'ಭಾರತದ ಬಗ್ಗೆ ಭಾರತ ಮಂತ್ರಿ ಅಮೇರಿಯವರ ಹೇಳಿಕೆ' ಎಂದು ದೊಡ್ಡಕ್ಷರಗಳಲ್ಲಿ ಮುದ್ರಿಸಿ ಅದರ ಕೆಳಗೆ ಅವರ ಭಾಷಣದ ಪೂರ್ತಿಪಾಠಕ್ಕೆ ಮತ್ತು ಆ ಬಗ್ಗೆ ಸಂಪಾದಕೀಯ ಟಿಪ್ಪಣಿಗಳಿಗಾಗಿ ಆರು ತಿಂಗಳ ಹಿಂದಿನ ಆ ದಿನದ "ಹಿಂದುಸ್ತಾನ

ಪ್ರಿನ್ಸ್" ನೋಡಿ' ಎಂದು ಬರೆದಿರುತ್ತಿದ್ದೆ," ಎಂದು ನಾನುತ್ತರಿಸಿದೆ.

"ದೇವದಾಸ, ಅಮೇರಿಯದವರ ಈ ಭಾಷಣವನ್ನು ನೀನು ಕಡೆಗಣಿಸಿಬಿಡುವುದೇ ಯೋಗ್ಯವೆನಿಸುತ್ತಿತ್ತು. ಅದರ ಬದಲು ಬೇರೆ ಮಹತ್ವದ ಸುದ್ದಿಗಳಿಗೆ ಈ ಸ್ಥಳವನ್ನುಪಯೋಗಿಸಬಹುದಿತ್ತು. ತಾಮ್ಹಣಕರ ಸರಿಯಾಗಿಯೇ ಹೇಳಿದ್ದಾರೆ," ಎಂದು ನುಡಿದು ರಾಜಾಜಿ ನನ್ನೆಡೆ ಹೊರಳಿ, "ನೀವು ಈ ರೀತಿ ಯೋಚಿಸುವುದಕ್ಕೆ ಕಾರಣವೆಂದರೆ ನೀವು ಸ್ವತಂತ್ರ ದೇಶದಿಂದ ಬಂದಿದ್ದೀರಿ.* ಇಲ್ಲಿ ನಮ್ಮ ಮನಸ್ಸು ಬ್ರಿಟಿಶ್ ಆಳಿಕೆಯಿಂದ ಪ್ರಭಾವಿತವಾಗಿರುತ್ತದೆ. ಅಲ್ಲದೆ ನಮ್ಮ ಸಂಪಾದಕರಿಗೆ ಇಲ್ಲಿಯ ಬ್ರಿಟಿಶ್ ಒಡೆತನದಲ್ಲಿಯ ಪತ್ರಿಕೆಗಳೇ ಮಾದರಿ," ಎಂದು ಹೇಳಿದರು.

ಎರಡನೆಯ ಸಲ ನಾನು ರಾಜಾಜಿಯವರನ್ನು ಕಂಡುದು ೧೯೪೮ ರಲ್ಲಿ ರಾಷ್ಟ್ರಪತಿಭವನದ ಒಂದು ಸಂತೋಷಕೂಟದಲ್ಲಿ. "ನಮಸ್ಕಾರ ಪೂಜ್ಯರೇ," ಎಂದು ನಾನು ಪ್ರಾರಂಭಿಸುವಷ್ಟರಲ್ಲೇ ಅವರು ನನ್ನನ್ನು ತಡೆದು, "ಹಾಂ, ನಿಮ್ಮ ಹೆಸರೇನೆಂದು ಹೇಳಬೇಡಿ," ಎನ್ನುತ್ತ ಅರೆನಿಮಿಷ ತಡೆದು, "ನೀವು ತಾಮ್ಹಣಕರ," ಎಂದು ನಗುತ್ತ ೧೯೪೩ ರ ಆ ಘಟನೆಯನ್ನು ನೆನೆದುಕೊಂಡರು.

ಇತ್ತೀಚೆ ಕೆಲವೇ ತಿಂಗಳುಗಳ ಹಿಂದೆ ಮದ್ರಾಸಿನಲ್ಲಿ ರಾಜಾಜಿಯವರನ್ನು ಕಂಡಿದ್ದೆ. ದೇಶದ ರಾಜಕೀಯ ಪರಿಸ್ಥಿತಿಯ ಕುರಿತು ಮಾತಾಡುವಾಗ ಅವರು ಪ್ರಧಾನಿ ಇಂದಿರಾ ಗಾಂಧಿಯವರನ್ನು ಕಟುವಾಗಿ ಟೀಕಿಸಿದರು. ಆದರೆ, ಇಂದಿರಾ ಮಹಾ ಎದೆಗಾರ್ತಿ ಎಂದೂ ಮೆಚ್ಚಿ ನುಡಿದರು.

ಗಾಂಧೀಜಿಯ ಅಸಹಕಾರದ ಬಿಗುವಿನ ಧೋರಣೆಯಿಂದ ಸ್ವರಾಜ್ಯ ಸಿಗಲು ೧೦–೨೨ ವರ್ಷ ವಿಲಂಬವಾಯಿತೆಂಬ ಸರ್ ತೇಜಬಹದ್ದೂರ ಸಪ್ರೂರವರ ಅಭಿಪ್ರಾಯದ ಬಗ್ಗೆ ರಾಜಾಜಿಯವರನ್ನು ನಾನು ಕೇಳಿದೆ. "ಹೌದು, ಸಪ್ರೂರವರ ಅಭಿಪ್ರಾಯ ಸರಿಯೆಂದು ನನಗೂ ಅನಿಸುತ್ತದೆ; ಆದರೆ ಅವರೀಗ ಹೀಗೆ ಹೇಳುವುದು ಇತಿಹಾಸದ ಹಿಂಗಣ್ಣುಗಳಿಂದ, ಅಲ್ಲವೆ ?" ಎಂದುದ್ಗರಿಸಿದರು.

—ಡಿ. ವಿ. ತಾಮ್ಹಣಕರ

*

೧೯೭೧ ರ ಡಿಸೆಂಬರ್ ೮ ರಂದು ರಾಜಾಜಿಗೆ ೯೩ ತುಂಬಿತು. ಆಗ ರಾಜಾಜಿಗೆ ಅರ್ಪಿಸಲೆಂದು ಶ್ರೀ ಟಿ. ಸದಾಶಿವಂರವರ ಅಧ್ಯಕ್ಷತೆಯಲ್ಲಿ 'ರಾಜಾಜಿ—೯೩ ಸಂಭಾವನಾ ಗ್ರಂಥ ಸಮಿತಿ' ಎಂಬೊಂದು ಸಮಿತಿ ರೂಪಗೊಂಡಿತ್ತು. ಈ ಬಗ್ಗೆ 'ಸ್ವರಾಜ್ಯ'ದಲ್ಲಿ ರಾಜಾಜಿ ಹೀಗೆ ಬರೆದರು: "'ರಾಜಾಜಿ ೯೩' ರ ಬಗ್ಗೆ ಶ್ರೀ ಸದಾಶಿವಂ ಮತ್ತು ಅವರ ಸಮಿತಿ ನಡೆಸಿರುವ ಭಾರಿ ಚಟುವಟಿಕೆಗಳನ್ನು ನೋಡಿದರೆ ಸಾರ್ವಜನಿಕ ಜೀವನವನ್ನು ನಾನು ಈ ಡಿಸೆಂಬರಿನಷ್ಟರೊಳಗೇ ಮುಗಿಸಿಬಿಡುವಂತೆ ಅವರು ನನಗೆ ಆಜ್ಞಾಪಿಸುತ್ತಿದ್ದಾರೇನೊ ಅನಿಸುತ್ತಿದೆ! ಆದರೆ ನನ್ನ ಈ ಬಾಳು ತುಂಬ ದೀರ್ಘವಾಗಿರುವುದು ನಿಜವಾದರೂ ನಾನೇನೂ ಇದನ್ನು ಇಲ್ಲಿಗೆಯೆ ಮುಕ್ತಾಯಗೊಳಿಸಲಿಚ್ಛಿಸುವುದಿಲ್ಲ. ನಮ್ಮ ಬಾಳಿನ ಮೇಲೆ ನಮಗೆ ಒಡೆತನವಿಲ್ಲ; ನಾವೆಷ್ಟು ದಿನ ಬದುಕಬೇಕು ಅಥವಾ ಈ ಜೀವನದಲ್ಲಿ ನಾವೇನು ಮಾಡಬೇಕು ಎಂಬುದನ್ನು ನಿರ್ಧರಿಸುವವರು ನಾವಲ್ಲ. ಆದರೆ ನಮ್ಮ ಸುತ್ತಲೂ ದುರಾಚಾರ, ಭ್ರಷ್ಟಾಚಾರ, ವಂಚನೆ, ಠಕ್ಕುಗಳು ಹರಡಿಕೊಂಡಿರುವುದು ಮಾತ್ರವಲ್ಲ, ಅತ್ಯುಚ್ಚ ಮಟ್ಟಗಳಿಂದ ತೀರ ದುರ್ದೈವಿಯಾದ ಬಡವನವರೆಗೆ ಎಲ್ಲೆಲ್ಲೂ ನೈತಿಕ ಅಧಃಪತನ ತೋರಿಬರುತ್ತಿದೆ. ಇಂತಿರುವಾಗ ನಾನು ಅದೆಷ್ಟೇ ಮುದುಕನೂ ಅಶಕ್ತನೂ ನಿತ್ರಾಣನೂ ಆಗಿದ್ದರೂ ಕೂಡ ಪರಿಸ್ಥಿತಿಯನ್ನು ಸುಧಾರಿಸುವ ಹೊಣೆಯಿಂದ ಓಡಿಹೋಗಲು ಬಯಸುತ್ತಿಲ್ಲ."

—ಪಿ. ಎಸ್. ವೆಂಕಟರಾಮಯ್ಯ

* ಲೇಖಕರು ಲಂಡನ್ನಿನಲ್ಲಿ ವಾಸವಾಗಿದ್ದಾರೆ.

ಅವರು ಪರಿಪಕ್ವ
ಕಲಾವಿದ




# ತಲಗೇರಿ ವೆಂಕಟರಾಯರು

★ ಸುಲೋಚನಾ ಕೋಟೂರ

ಕನ್ನಡ ಚಲಚ್ಚಿತ್ರರಂಗ ಮಾಮೂಲಿ ಚಿತ್ರಗಳಿಗೆಯೇ ಮೀಸಲು ಎಂಬಂಥ ಭಾವನೆ ಬಲವಾಗಿ ಬೇರೂರಿದ್ದಾಗ 'ಸಂಸ್ಕಾರ', 'ವಂಶ ವೃಕ್ಷ'ಗಳು ಬಂದು ಹೊಸ ಆಸೆಯನ್ನು ಚಿಗುರಿಸಿದವು; ಕರ್ನಾಟಕದ ಮೇರೆಯನ್ನೂ ಮೀರಿ ಭಾರತದಲ್ಲೆಲ್ಲ ಕೀರ್ತಿ ಸಂಪಾದಿಸಿದುದಲ್ಲದೆ ದೇಶದ ಹೊರಗಡೆಯೂ ಮೆಚ್ಚುಗೆ ಪಡೆದುವು. ಈ ಚಿತ್ರಗಳು ಮಾಡಿದ ಇನ್ನೊಂದು ಮಹತ್ಕಾರ್ಯವೆಂದರೆ ಕನ್ನಡಿಗರಿಗೆ ಸಾಮಾನ್ಯವಾಗಿ ಅಪರಿಚಿತರೇ ಆಗಿದ್ದ ಕೆಲವು ಕಲಾವಿದರನ್ನು ತೆರೆಗೆ ತಂದುದು. 'ವಂಶವೃಕ್ಷ'ದ ಮೂಲಕ ತೆರೆಗೆ ಬಂದುದು ಮಾತ್ರವಲ್ಲ, ಆ ಚಿತ್ರದ ಯಶಸ್ಸಿಗೆ ಬಹುಮಟ್ಟಿಗೆ ಕಾರಣರಾದವರು 'ಶ್ರೋತ್ರಿಯ' ಶ್ರೀ ವೆಂಕಟರಾವ ತಲಗೇರಿಯವರು.

ವೆಂಕಟರಾಯರ ಹೆಸರು ಮುಂಬಯಿಯ ಕನ್ನಡ ಮತ್ತು ಕೊಂಕಣಿ ಕಲಾಪ್ರೇಮಿಗಳಿಗೆ ಚಿರಪರಿಚಿತ. ಕಳೆದ ಸುಮಾರು ೩೫ ವರ್ಷಗಳಿಂದ ರಂಗಭೂಮಿಯ ಸೇವೆ ಮಾಡುತ್ತಿರುವ ಅವರು ೧೯೧೫ರ ಜನವರಿ ೧೧ರಂದು ಮೈಸೂರಲ್ಲಿ ಸಾರಸ್ವತ ಬ್ರಾಹ್ಮಣ ಕುಟುಂಬವೊಂದರಲ್ಲಿ ಜನಿಸಿದರು. ಮುಂದೆ ಅವರು ಬೆಳೆದುದು ಶಿವಮೊಗ್ಗ ಜಿಲ್ಲೆಯ ಸಾಗರದಲ್ಲಿ. ಅಲ್ಲಿಯೆ ಮೆಟ್ರಿಕ್ ಮುಗಿಸಿ ೧೯೩೩ರಲ್ಲಿ ಉದರನಿರ್ವಹಣಕ್ಕೆಂದು ಮುಂಬಯಿಗೆ ಬಂದವರು ಅಲ್ಲೇ ನೆಲಸಿದ್ದಾರೆ. ಅಲ್ಲಿ ಕಿಲ್ಲಿಕ್–ನಿಕ್ಸನ್ ಶಿಪ್ಪಿಂಗ್ ಕಾರ್ಪೊರೇಶನ್ ಎಂಬ ದೊಡ್ಡ ಬ್ರಿಟಿಶ್ ಕಂಪನಿಯಲ್ಲಿ ಕೆಲಸವೂ ಬಹು ಬೇಗನೆ ದೊರೆಯಿತು. ಮಾತ್ರವಲ್ಲ, ಅಲ್ಲಿಯೂ ತಮ್ಮ ದಕ್ಷತೆ ಮತ್ತು ಕಾರ್ಯಕ್ಷಮತೆಗಳಿಂದಾಗಿ ತುಂಬ [illegible] ಹೆಸರು ಸಂಪಾದಿಸಿದ್ದಾರವರು.

ಒಂದು ನೌಕರಿಯಲ್ಲಿ ನಿಷ್ಠೆಯಿಂದ ದುಡಿಯುವುದು ಶ್ರೀ ತಲಗೇರಿಯವರ ವ್ಯಕ್ತಿತ್ವದ ಒಂದು ಮುಖವಾದರೆ ಅದರ ಇನ್ನೊಂದು, ಹೆಚ್ಚು ಮಹತ್ವದ, ಮುಖವೇ ಅವರಲ್ಲಿ ಹುದುಗಿರುವ ಕಲಾವಿದ. ವೆಂಕಟರಾಯರಿಗೆ ನಾಟಕದಲ್ಲಿ ಆಸಕ್ತಿ. ಅಭಿನಯದಲ್ಲಿ ಒಲವು ಇನ್ನೊಂದು [illegible]

ಇದಕ್ಕೆ ಒಂದು ಕಾರಣವೆಂದರೆ ಅವರು ಹುಟ್ಟಿದ್ದು ನಾಟಕಪ್ರಿಯರ ಮನೆಯಲ್ಲೇ ಎಂಬುದಾಗಿರಬೇಕು. ಅವರ ಅಜ್ಜನದೇ ಒಂದು ನಾಟಕ ಕಂಪನಿಯಿತ್ತಂತೆ. ಈ ಕಂಪನಿಯನ್ನು ಬಹಳ ದಿನ ನಡೆಸಿಕೊಂಡು ಹೋಗಲಿಲ್ಲವಾದರೂ ತಲಗೇರಿ ಮನೆತನ ಬೇರೆ ರೂಪದಲ್ಲಿ ನಾಟಕಕ್ಕೆ ಸೇವೆಯನ್ನು ಸಲ್ಲಿಸಿತು. ಸಾಗರದಲ್ಲಿ ಅವರ ಮೂರು ಮನೆಗಳಲ್ಲಿ ಒಂದು ಯಾವಾಗಲೂ ಊರಿಗೆ ಬಂದ ನಾಟಕ ಕಂಪನಿಗಳವರ ವಾಸಕ್ಕಾಗಿ ಮೀಸಲಿರುತ್ತಿತ್ತಂತೆ.

ವೆಂಕಟರಾಯರ ತಂದೆ, ಚಿಕ್ಕಪ್ಪ, ಅಣ್ಣ ಎಲ್ಲರಿಗೂ ರಂಗಭೂಮಿಯಲ್ಲಿದ್ದ ಆಸಕ್ತಿ ಭಕ್ತಿಯ ಮಟ್ಟವನ್ನು ತಲುಪಿತ್ತಂತೆ. ಅವರ ಒಬ್ಬ ಚಿಕ್ಕಪ್ಪ ತಲಗೇರಿ ಕೃಷ್ಣರಾಯರು ಆಧುನಿಕ ಹನುಮಂತನೆಂದು ಖ್ಯಾತರಾಗಿದ್ದ ನಂಜುಂಡಯ್ಯನವರನ್ನು ತರಬೇತುಗೊಳಿಸಿದವರು. ಅವರ ಇನ್ನೊಬ್ಬ ಚಿಕ್ಕಪ್ಪ ಸೀತಾರಾಮ ತಲಗೇರಿಯವರು ನಿಷ್ಣಾತ ಕಲಾವಿದ. ಮುಂಬಯಿಯಲ್ಲಿ ಆ ಕಾಲದಲ್ಲಿ ಅಸಿಸ್ಟೆಂಟ್ ಇಂಜಿನಿಯರ್ ಹುದ್ದೆಯಲ್ಲಿದ್ದು ಕೂಡ ದಿನಕ್ಕೊಂದು ನಾಟಕ ನೋಡಲೇಬೇಕೆಂಬ ಹುಚ್ಚು ಅವರದು; ಹಾಗೆ ಮಾಡುತ್ತಿದ್ದರು ಕೂಡ. ಅವರು ಮರಾಠಿಯಲ್ಲಿ 'ವಚನಮುಕ್ತಿ' ಎಂಬ ನಾಟಕವನ್ನು ಬರೆದು ಆಡಿಸಿದರು. ಅವರ ಮಗ ಪಾಂಡುರಂಗ ಎಂಬುವರು ಹಿಂದೆ ಮುಂಬಯಿಯ ಸಿನಿಮಾರಂಗದಲ್ಲಿ ಪ್ರಸಿದ್ಧ ಕ್ಯಾಮರಾಮನ್ ಆಗಿದ್ದರು. ಅವರು ಸ್ವತಃ ಉತ್ತಮ ಅಭಿನಯಪಟುವಾಗಿದ್ದು ಅವರಿಂದಲೇ ತಮಗೆ ಅಭಿನಯದೀಕ್ಷೆ ದೊರೆಯಿತೆಂದೂ ರಂಗಭೂಮಿಯ ನಿಕಟ ಅನುಭವ ಬಂತೆಂದೂ ವೆಂಕಟರಾಯರು ಹೇಳುತ್ತಾರೆ.

ಇಂತು ನಾಟಕ ಒಂದು ಪರಂಪರೆಯಾಗಿಯೇ ವೆಂಕಟರಾಯರ ರಕ್ತದಲ್ಲಿ ಸೇರಿಕೊಂಡುಬಿಟ್ಟಿದೆ. ಚಿಕ್ಕಂದಿನಲ್ಲಿ ಯಾವುದಾದರೊಂದು ನಾಟಕ ನೋಡಿ ಬಂದರೆಂದರೆ ಮಹಡಿಯನ್ನೇರಿ ಮುಂ[illegible]. ಅದೇ ನೋಡಿ ಬಂದ ನಾಟಕದಲ್ಲಿಯ ಒಂದೊಂದು ದೃಶ್ಯವನ್ನು ಅವರು ಅಭಿನಯಿಸುತ್ತಿದ್ದರು. ಒಮ್ಮೊಮ್ಮೆ ತಮ್ಮ ಈ 'ನಾಟಕ'ದಲ್ಲಿ ವೆಂಕಟರಾಯರು ಬಾಹ್ಯ ಜಗತ್ತನ್ನೇ ಮರೆತು ತನ್ಮಯರಾಗಿ ಬಿಡುತ್ತಿದ್ದರಂತೆ. ಆಗೆಲ್ಲ ಅವರ ಅಕ್ಕ ಬಂದು ಅವರನ್ನು ಕೆಳಕ್ಕೆಳೆದುಕೊಂಡು ಹೋಗುತ್ತಿದ್ದರು. ಇಂತು ನಾಟಕ ಬಾಲಕ ವೆಂಕಟರಾಯರೊಂದಿಗೆಯೇ ಬೆಳೆದುಬಂತು. ಆದರೂ ರಂಗದ ಮೇಲೆ ನಾಲ್ಕು ಜನರೆದುರು ಅಭಿನಯಿಸಬೇಕೆಂಬ ಆಸೆ ಫಲಿಸಿದ್ದು ಮಾತ್ರ ೧೯೩೦ರಲ್ಲಿ, 'ಕಬೀರದಾಸ' ನಾಟಕದಲ್ಲಿ. ಅಲ್ಲಿ ಬೀಬಿಯ ಪಾತ್ರವನ್ನು ಅವರು ಅಭಿನಯಿಸಿದ್ದನ್ನು ಮೆಚ್ಚದವರೇ ಇರಲಿಲ್ಲ. ಅಂದಿನಿಂದ ಇಂದಿನ ವರೆಗೂ ಅದೇ ನಿಷ್ಠೆಯಿಂದ ರಂಗಭೂಮಿಯ ಸೇವೆ ಮಾಡುತ್ತ ಬಂದಿದ್ದಾರೆ.

ವೆಂಕಟರಾಯರ ಮಾತೃಭಾಷೆ ಕೊಂಕಣಿ. ಕನ್ನಡ ರಂಗಭೂಮಿಗಾಗಿ ದುಡಿಯುತ್ತಿರುವುದ-

ಯಕ್ಷಗಾನ 'ದುಶ್ಶಾಸನವಧೆ'ಯಲ್ಲಿ ರುದ್ರಭೀಮನಾಗಿ



ಸೀಮಿತವಾದುದಲ್ಲ. ಶಾಸ್ತ್ರೀಯ ಸಂಗೀತವೆಂದರೆ ಅವರಿಗೆ ತುಂಬ ಪ್ರೀತಿ. ಒಂದು ಕಾಲದಲ್ಲಿ ಖಾನ ಅಬ್ದುಲ್‌ಕರೀಮಖಾನ, ಫೈಯಾಜಖಾನ, ವಝೆಬುವಾ, ಮಾಸ್ಟರ್ ಕೃಷ್ಣರಾವ ಮುಂತಾದವರ ಸಂಗೀತ ಕಚೇರಿಗಳಿಗೆ ಅವರು ತಪ್ಪದೇ ಹೋಗುತ್ತಿದ್ದರು.

ಕರ್ನಾಟಕದ ಜಾನಪದ ನಾಟಕ ಕಲೆಯಾದ ಬಯಲಾಟಗಳೆಂದರೆ ವೆಂಕಟರಾಯರಿಗೆ ಎಲ್ಲಿಲ್ಲದ ಆಸ್ಥೆ, ಗೌರವ, ಪ್ರೇಮ. ಇಂದಿಗೂ ಸಮೀಪದಲ್ಲಿ ಎಲ್ಲಾದರೂ ಬಯಲಾಟ ಪ್ರದರ್ಶನವಿತ್ತೆಂದರೆ ಅವರು ಹೋಗಿ ಮೊದಲಿನಿಂದ ಕೊನೆಯ ವರೆಗೂ ನೋಡಿಬರುತ್ತಾರೆ. ಬಯಲಾಟದ ಮಾತು ಬಂತೆಂದರೆ ಅವರ ಕಂಗಳಲ್ಲಿ ಮಿಂಚಿನ ಸೆಳಕು ಕಾಣುತ್ತದೆ. ಎರಡು ಬಾರಿ ಅವರು ಬಯಲಾಟಗಳಲ್ಲಿ ಪಾತ್ರವಹಿಸಿದ್ದರಂತೆ.

ಒಮ್ಮೆ ವೆಂಕಟರಾಯರು 'ದುಶ್ಶಾಸನವಧೆ' ಎಂಬ ಬಯಲಾಟದಲ್ಲಿ ರುದ್ರಭೀಮನ ಪಾತ್ರ ವಹಿಸಿದ್ದರಂತೆ. ಆಗ ಚಂಡೆಯ ನಾದದ ಅಮಲೇರಿದಂತಾಗಿ ರೋಷದಿಂದ ಕುಣಿಯುತ್ತ ಒಂದೇ ನೆಗೆತಕ್ಕೆ ರಂಗವನ್ನು ಪ್ರವೇಶಿಸಿದಾಗ ಭಯದಿಂದ ತತ್ತರಿಸಿದ ದುಶ್ಶಾಸನ ಹೇಳಹೆಸರಿಲ್ಲದಂತೆ ಅಲ್ಲಿಂದ ಓಡಿಹೋಗಿಬಿಟ್ಟನು. ಒಳಗೋಡಿ ಬಂದ ಅವನನ್ನು ಪರದೆಯ ಹಿಂದಿದ್ದವರು ಹಿಡಿದು ತಂದು ರುದ್ರಭೀಮನೆದುರು ನಿಲ್ಲಿಸಿದರಂತೆ. ದುಶ್ಶಾಸನನನ್ನು ಭೀಮ ಕೊಂದು ಅವನ ಕರುಳು ಬಗೆಯಲು ನೋಡಿದರೆ, ದಿಕ್ಕೆಟ್ಟು ಒಳಗೋಡಿದ್ದ ದುಶ್ಶಾಸನ ಕೆಳಗೆ ಬಿದ್ದು ಹೋಗಿದ್ದ 'ಕರುಳು'ಗಳನ್ನು ಮರೆತು ಬಂದಿದ್ದನಂತೆ. ಅದನ್ನು ನೆನೆದು ವೆಂಕಟರಾಯರು ಇನ್ನೂ ಹೊಟ್ಟೆತುಂಬ ನಗುತ್ತಾರೆ.

ಇಂದಿನ ನಟ ನಟಿಯರ ಬಗ್ಗೆ ಏನಾದರೂ ಕೇಳಿದರೆ ವೆಂಕಟರಾಯರ ಮುಖ ಮುದುಡಿಕೊಳ್ಳುತ್ತದೆ. "ಕಲಾವಿದ ಕಷ್ಟಪಡಬೇಕಪ್ಪಾ, ಅಂದರೇನೇ ಫಲ ದೊರೆಯುತ್ತದೆ. ಅವರಿಗೆ ಕಲ್ಪನೆಯಿಲ್ಲ; ಅವರು ವಿಚಾರ ಮಾಡುವುದಿಲ್ಲ. ಅವರು ಮಾತುಗಳ ಹಿಂದಡಗಿದ ಮರ್ಮವನ್ನು ತಿಳಿಯಲೆಳಸುವುದಿಲ್ಲ; ಸೂತ್ರದ ಗೊಂಬೆಗಳಂತೆ ಬರುತ್ತಾರೆ, ಹೋಗುತ್ತಾರೆ: ಗಿಳಿಗಳಂತೆ ಮಾತಾಡುತ್ತಾರೆ. ಆಯ್ತು, ನಾಟಕ ಮುಗಿಯಿತು," ಎಂದು ನಿಟ್ಟುಸಿರು ಬಿಡುತ್ತಾರೆ.

ರಂಗಸಜ್ಜಿಕೆ ಇಂದು ಬೆಳೆದು ಹೆಚ್ಚು ತೃಪ್ತಿಕರವಾಗಿರುವುದರ ಬಗ್ಗೆ ಅವರು ಸಮಾಧಾನ ವ್ಯಕ್ತಪಡಿಸುತ್ತಾರೆ. ಆದರೆ ಅನೇಕ ನಟರು, ನಿರ್ದೇಶಕರು ಕಲೆಯ ಕೊಲೆ ಮಾಡುವುದನ್ನು ಕಂಡು ಅವರ ಮನಸ್ಸು ಮರುಗುತ್ತದೆ. ಆ ದೃಷ್ಟಿಯಿಂದ 'ವಂಶವೃಕ್ಷ'ದ ನಿರ್ದೇಶಕದ್ವಯರಾದ ಶ್ರೀ ಗಿರೀಶ ಕಾರ್ನಾಡ ಮತ್ತು ಶ್ರೀ ಬಿ. ವಿ. ಕಾರಂತರ ಯೋಗ್ಯತೆಯ ಬಗ್ಗೆ ಅವರಿಗೆ ಅತ್ಯಾದರವಿದೆ, ಹೆಮ್ಮೆಯಿದೆ: ಅವರ ಭವಿಷ್ಯದ ಬಗ್ಗೆ ಭರವಸೆಯಿದೆ.

ವೆಂಕಟರಾಯರ ಸರಳತೆ, ಸಾದಾತನಗಳನ್ನು ಅವರ ಉಡುಗೆತೊಡಿಗೆಗಳಲ್ಲೂ ಕಾಣಬಹುದು. ಹೆಸರಷ್ಟೇ ತಲಗೇರಿ, ಆದರೆ ತಮಗೆ ಯಾವುದೂ ತಲೆಗೇರುವುದಿಲ್ಲ ಎಂದು ನಗುತ್ತಲೇ ಹೇಳುತ್ತಾರವರು. ಇದಕ್ಕಿಂತ ದಿಟವಾದು- ದಿನ್ನೊಂದಿಲ್ಲ. ✡

ಕಂಗೆಡಬೇಡ ಎಲೆ ಬೆಕ್ಕೆ,
ಭಾಂಡಿಯೊಳಗೆ ಬಿದ್ದದ್ದಕ್ಕೆ
ಈಸಬೇಕು, ಇದ್ದು ಜೈಸಬೇಕು
ಅಂದದ್ದು ಇಂಥದೇ ಸಂದರ್ಭಕ್ಕೆ —ಪಾ. ವೆಂ.

# ನಕ್ಕು ಆಯುಷ್ಯ ಹೆಚ್ಚಿಸಿಕೊಳ್ಳಿ

ಮುರಲೀಧರ

ನಕ್ಕು ಆಯುಷ್ಯ ಹೆಚ್ಚಿಸಿಕೊಳ್ಳಿ-ಎಂದೊಂದು ನಾಣ್ಣುಡಿ ಇದೆ. ತುಂಬಾ ನಗುವವರ ಆಯುಷ್ಯ ನಿಜವಾಗಿ ಹೆಚ್ಚಾಗುತ್ತದೆಯೇ ಎಂಬ ಬಗ್ಗೆ ಅಂಕೆ ಸಂಖ್ಯೆಗಳು ಸಿಕ್ಕಿಲ್ಲ. ಆದರೆ ನಗುವುದು ಆರೋಗ್ಯಕ್ಕೆ ಪೋಷಕ ಎಂಬುದು ಮಾತ್ರ ನಿಜ—ಶರೀರದ ಆರೋಗ್ಯಕ್ಕೆ ಮಾತ್ರವಲ್ಲ, ಮನಸ್ಸಿನ ಆರೋಗ್ಯಕ್ಕೆ ಕೂಡ.

ನಗುವುದು ಅತ್ಯುತ್ತಮ ವ್ಯಾಯಾಮ ಎಂಬುದು ನಿಮ್ಮ ಗಮನಕ್ಕೆ ಬಂದಿರಲಿಕ್ಕಿಲ್ಲ. ಆದರೆ ಶರೀರಶಾಸ್ತ್ರಜ್ಞರು ಕಂಡುಹಿಡಿದ ಪ್ರಕಾರ ಒಳ್ಳೇ ಅಟ್ಟಹಾಸಪೂರ್ವಕವಾಗಿ ನಗುವಾಗ ದೇಹದ ಹೆಚ್ಚು ಕಡಿಮೆ ಎಲ್ಲಾ ಸ್ನಾಯುಗಳೂ ವ್ಯಾಯಾಮಕ್ಕೊಳಪಡುತ್ತವೆ. ಮತ್ತೆ ಯಾವ ಕ್ರಮೆಯೂ ಇಷ್ಟೆಲ್ಲಾ ಸ್ನಾಯುಗಳನ್ನು ಕೆಲಸಕ್ಕೆ ತರುವುದಿಲ್ಲ. ಒಂದು ಒಳ್ಳೇ ನಗುವಿನಲ್ಲಿ ದೊರೆಯುವ ವ್ಯಾಯಾಮವೊಡನೆ ಹೋಲಿಸಿದರೆ ಬಹು ಮೈಲಿನ ವೇಗವಾದ ವಾಕಿಂಗು ತೀರ ಸಾಧಾರಣ ಎನಿಸುತ್ತದೆ. ಉದಾಹರಣೆಗೆ ವಾಕಿಂಗಿನಲ್ಲಿ ನಿಮ್ಮ ಕಣ್ಣುಗಳಿಗೆ, ಬಾಯಿಗೆ, ಮುಖಕ್ಕೆ ಎಲ್ಲಿ ವ್ಯಾಯಾಮ ಸಿಗುತ್ತದೆ? ನಗುವಿನಲ್ಲಿ ಇವೆಲ್ಲ ಚಲನೆ ಸಿಗುತ್ತದೆ. ಹಾಗೆಯೇ ಹೊಟ್ಟೆಯ ಮತ್ತು ಬೆನ್ನಿನ ಸ್ನಾಯುಗಳಿಗೂ ನಗು ಅತ್ಯುತ್ತಮವಾದ ವ್ಯಾಯಾಮವೇ ಸೈ.

ಡಾಕ್ಟರರ ಪ್ರಕಾರ ನಿಜವಾದ ನಗು ಎಂದರೆ ಕಿಸಿಕಿಸಿ ನಗುವಲ್ಲ—ನಗು ಮುಕ್ತವಾಗಿ ಅಂತರಂಗ ಪೂರ್ವಕವಾಗಿ ಬರಬೇಕು. ಇಂಥಾ ನಿಜವಾದ ಒಂದು ನಗು ಯಾವುದೊಂದು ಜೀವಾತುವಿನ ಗುಳಿಗೆಗಿಂತಲೂ ನಿಮ್ಮ ಮನಸ್ಸು-ಶರೀರಗಳಿಗೆ ಹೊಸ ಹುರುಪು ಕೊಡಬಲ್ಲದು.

ನಗು ನಮಗೆ ಏನು ಮಾಡುತ್ತದೆಂದು ನೋಡುವಾ. ಇಂದಿನ ಯಂತ್ರಚಾಲಿತ ಯುಗದಲ್ಲಿ ಹೆಚ್ಚಿನ ಜನರಿಗೆ ಆಳವಾಗಿ ಉಸಿರಾಡುವ ಅಗತ್ಯವೇ ಬರುವುದಿಲ್ಲ. ಮನಃಪೂರ್ವಕವಾದ ನಗು ನಮ್ಮ ಪುಪ್ಪುಸಗಳನ್ನು ಒಮ್ಮೆಲೇ ಹಿಂಡಿದಂತೆ ಒತ್ತಿ ಒಳಗೆ ಸೇರಿದ್ದ ಕಲುಷಿತ ಗಾಳಿಯನ್ನು ಹೊರದಬ್ಬಿ ಹೊಸ ಸ್ವಚ್ಛ ಪ್ರಾಣವಾಯುವಿನ ಪ್ರವೇಶಕ್ಕೆ ಸ್ಥಳ ಮಾಡಿಕೊಡುತ್ತದೆ. ಇದರಿಂದಾಗಿ ರಕ್ತ ಸಂಚಾರ ತೀವ್ರಗೊಳ್ಳುತ್ತದೆ. ಶಾರೀರಿಕ ಗ್ರಂಥಿಗಳಲ್ಲಿ ಉತ್ಪಾದ

ಆಧಾರ: Everybody

ಹೆಚ್ಚುತ್ತದೆ. ಜಠರದಲ್ಲಿ ಪಾಚಕ ರಸಗಳ ಸ್ರಾವಕ್ಕೆ ಪ್ರಚೋದನೆ ಸಿಗುತ್ತದೆ. ಹೊಟ್ಟೆಗೂ ಎದೆಗೂ ನಡುವಣ ಸ್ನಾಯುಭಿತ್ತಿಯ ಚಲನೆಯಿಂದಾಗಿ ಶರೀರದ ಹೆಚ್ಚಿನ ಸ್ನಾಯುಗಳಿಗೆ ಮಾಲೀಸು ಮಾಡಿದಂತಾಗುತ್ತದೆ. ಅಟ್ಟಹಾಸದ ನಗುವಿನೊಡನೆ ಕಣ್ಣೀರೂ ಬರುವುದರಿಂದ ಕಣ್ಣುಗುಡ್ಡೆಗಳಿಗೆ ಸ್ನಾನ ಮಾಡಿಸಿದಂತೆಯೂ ಆಗುತ್ತದೆ.

ಅತಿಯಾಗಿ ನಕ್ಕರೆ ಕೆಲ ನಿಮಿಷ ನಿತ್ರಾಣವಾಗಿ ಬಿಡುವ ಸಂಭವ ಇಲ್ಲದಿಲ್ಲ. ಆದರೆ ತೀರ ಮುದುಕರನ್ನು ಮತ್ತು ಹೃದಯದೌರ್ಬಲ್ಯವುಳ್ಳವರನ್ನು ಬಿಟ್ಟರೆ ನಕ್ಕು ನಕ್ಕು ಸಾಯುವ ಸಂಭವ ಇಲ್ಲ. ಹೃದಯ ದುರ್ಬಲವಾಗಿದ್ದರೆ ತಮಾಷೆ ಪ್ರಸಂಗಗಳಲ್ಲಿ ನಗು ತಡೆದುಕೊಳ್ಳುವ ಯತ್ನದಲ್ಲಿ ಕೂಡ ಮನುಷ್ಯ ಸಾಯಬಹುದು.

ನಗಲಾರದ ಮನುಷ್ಯ ಹುಚ್ಚರ ಆಸ್ಪತ್ರೆಗಲ್ಲದಿದ್ದರೂ ಮನೋರೋಗದ ಡಾಕ್ಟರರ ಸಲಹೆಗಾಗಿ ಹೋಗಬೇಕಾದ ಸಂಭವ ಹೆಚ್ಚಾಗಿದೆಯೆಂದು ಮನೋವೈದ್ಯರು ಹೇಳುತ್ತಾರೆ. ಜಠರವ್ರಣದ ಹಾಗೆಯೇ ಮನೋರೋಗದಿಂದಾಗುವ ಆರೋಗ್ಯಭಂಗ ಕೂಡ ಗಂಟುಮುಖದವರನ್ನೇ ಅಧಿಕತರವಾಗಿ ಕಾಡುತ್ತದೆ. ನಗೆಯಿಂದ, ಶಾರೀರಿಕ ಕ್ರಿಯೆಗಳನ್ನು ತಡೆದು ಹಾಕುವ ನರಗಳ ಬಿಗುಮಾನ ಸಡಿಲಾಗುವುದರಿಂದ ವಿಧಿ ನಿಷೇಧಗಳ ಜಂಜಡದಿಂದ ಉಸಿರು ಕಟ್ಟಿದಂತಾದ ಜನರಿಗೆ ನಗು ಸಿದ್ಧೌಷಧವಾಗಬಹುದು.

ಮಕ್ಕಳಿಗೆ ಚಿಕ್ಕಂದಿನಿಂದಲೇ ಮುಕ್ತವಾಗಿ ನಗಲು ಕಲಿಸುವುದೊಳಿತು. ಹಾಗೆ ಕಲಿಯದವರು ಪ್ರಾಯ ಬಂದ ಮೇಲಾದರೂ ಕಲಿಯಬೇಕು. ಅಮೇರಿಕದಲ್ಲಿ ಒಂದು ಕಾಲದಲ್ಲಿ "ರಾಷ್ಟ್ರೀಯ ನಗುವಿನ ಸಪ್ತಾಹ"ವನ್ನು ಆಚರಿಸುವ ಪ್ರಯತ್ನಗಳಾದವು. ಪ್ಯಾರೀಸಿನಲ್ಲೊಬ್ಬ ಡಾಕ್ಟರು ನಗುವಿನ ದವಾಖಾನೆಯನ್ನೇ ಕೆಲ ವರ್ಷಗಳ ಹಿಂದೆ ಪ್ರಾರಂಭಿಸಿದ.

ನಗುವನ್ನು ಅಧ್ಯಯನ ಮಾಡಿದ ತಜ್ಞರು ಕೆಲ ಸೋಜಿಗದ ಸಂಗತಿಗಳನ್ನು ಕಂಡುಹಿಡಿದಿದ್ದಾರೆ. ನಗುವಂಥ ಸನ್ನಿವೇಶಗಳಿಲ್ಲದಾಗ ಕೂಡ ನಗುವ ಯತ್ನ ಮಾಡಿದರೆ ಅಷ್ಟಿಷ್ಟು ಪ್ರಯೋಜನವುಂಟೆಂದು ಅವರ ಅಭಿಪ್ರಾಯ. ಯೋಗದಲ್ಲಿ ಕೆಲವೊಂದು ವ್ಯಾಯಾಮಗಳು ನಗುವನ್ನು ಹೋಲುವ ಸ್ನಾಯು ಚಲನೆಯನ್ನೊಳ

**ನಗುವಿನ ಪ್ರಗತಿ ಚಿತ್ರ**



ಗೊಂಡಿವೆ.

ನಗುವಾಗ ಪ್ರಾರಂಭದಲ್ಲಿ ಮುಖದ ಸ್ನಾಯುಗಳು ಮಿಡಿಯತೊಡಗುತ್ತವೆ. ಬಾಯ ಕೊನೆಗಳು ಮೇಲ್ಮುಖವಾಗಿ ಚಲಿಸುತ್ತವೆ. ನಗತಕ್ಕದ್ದೇನೂ ಇಲ್ಲವಾಗಲೂ ಕಡೆವಾಯಿಗಳನ್ನು ಮೆಲ್ಲನೆ ಮೇಲ್ಮುಖವಾಗಿ ಚಲಿಸಿ ನೋಡಿರಿ. ನಿಮಗೆ ಏನೋ ಒಂದು ಸುಖ ಸಮಾಧಾನದ ಅನುಭವವಾಗುವುದು. ತದ್ವಿರುದ್ಧವಾಗಿ ನಿರಾಶಾಭಾವನೆ ಬಂದಾಗ ಕಡೆವಾಯಿಗಳು ಕೆಳಗೆ ಜೋಲುತ್ತವೆ. ಯಾರೂ ಇಲ್ಲದಾಗ ಸುಮ್ಮನೆ ಕಡೆವಾಯಿಗಳನ್ನು ಕೆಳಗೆ ಜೋಲುವಂತೆ ಮಾಡಿರಿ. ಕೆಲವೇ ನಿಮಿಷಗಳಲ್ಲಿ ಕಾರಣವಿಲ್ಲದೆ ನಿಮ್ಮ ಮನಸ್ಸು ವಿಷಾದಯೋಗದಲ್ಲಿ ಅದ್ದುವುದನ್ನು ಅನುಭವಿಸುವಿರಿ.

ಕಚಕುಳಿಯಿಟ್ಟಂತೆ ನಗು ಬಂತು ಎನ್ನುತ್ತೇವೆ. ಸಂಶೋಧಕರು ಪರೀಕ್ಷಿಸಿ ನೋಡಿದಾಗ ಕಚಕುಳಿಯಿಂದ ಬರುವ ನಗುವಿನ ಪರಿಮಾಣಕ್ಕೂ ಕಚುಕಳಿಯಿಕ್ಕುವ ವ್ಯಕ್ತಿಗೂ ನಿಮಗೂ ಇರುವ ಸಂಬಂಧಕ್ಕೂ ಸಂಬಂಧವುಂಟೆಂದು ಗೊತ್ತಾಯಿತು. ಉದಾಹರಣೆಗೆ ನಮಗೆ ನಾವೇ ಕಚಕುಳಿಯಿಟ್ಟುಕೊಂಡು ನಗುವುದು ಸಾಧ್ಯವಿಲ್ಲ. ಅಮೇರಿಕದ ಯೇಲ್ ವಿಶ್ವವಿದ್ಯಾನಿಲಯದ ಒಂದು ತಂಡದ ಪರಿಶೀಲನೆಯಲ್ಲಿ ಮಕ್ಕಳಿಗೆ ತಾಯಂದಿರು ಕಚಕುಳಿಯಿಕ್ಕಿದರೆ ಅವು ನಗುವಷ್ಟು ಅಪರಿಚಿತರು ಕಚಕುಳಿಯಿಕ್ಕಿದರೆ ನಗುವುದಿಲ್ಲ. ಮತ್ತು ಕಚಕುಳಿಯಿಂದ ಅತಿ ಹೆಚ್ಚಾದ ಪರಿಣಾಮವಾಗುವ ಸ್ಥಾನವೆಂದರೆ ಕೊರಳ ಮುಂಭಾಗವೆಂದು ಡಾ. ಲೂಯಿ ರಾಬಿನ್‌ಸನ್ ಎಂಬ ತಜ್ಞರು ೨–೪ ವಯಸ್ಸಿನ ಮಕ್ಕಳ ಮೇಲೆ ನಡೆಸಿದ ಪ್ರಯೋಗಗಳಿಂದ ವೇದ್ಯವಾಯಿತು.

ಕಚಕುಳಿಯ ಮಾತನ್ನು ಬದಿಗಿರಿಸಿ ಉಳಿದ ಸ್ವಾಭಾವಿಕ ನಗುವಿನ ಸನ್ನಿವೇಶಗಳನ್ನು ಮನಃಶಾಸ್ತ್ರಿಗಳು ಹೀಗೆ ವಿಭಜಿಸುತ್ತಾರೆ :

ಸಂತೋಷಾತಿಶಯದಿಂದ ನಾವು ನಗುತ್ತೇವೆ. ಉದಾಹರಣೆಗೆ ಬಲು ಕಷ್ಟದಿಂದ ಪರ್ವತಾರೋಹಣ ಮಾಡಿ ಯಶಸ್ವಿಗಳಾದಾಗ.

ಏಕಾಏಕಿ ಬಿಗುಮಾನದಿಂದ ಬಿಡುಗಡೆ ಹೊಂದಿದಾಗಲೂ ನಾವು ನಗುತ್ತೇವೆ. ಉದಾ-ಹರಣೆಗೆ ಕಾಡುತ್ತಿದ್ದ ಚಿಂತೆ ದೂರವಾದಾಗ.

ಹೊಸದನ್ನು ಕಂಡು ನಗುತ್ತೇವೆ. ಇದು ಮಕ್ಕಳಿಗೆ ಹೆಚ್ಚು ಅನ್ವಯಿಸುತ್ತದೆ.

ಇವುಗಳಿಗಿಂತ ಹೆಚ್ಚು ನಗೆಗೆ ಕಾರಣವಾಗುವುದು ಅಧಿಕಾರದ ಗಾಂಭೀರ್ಯಕ್ಕೆ ಭಂಗ ಬಂದಾಗ.



ಸ್ವಾಮಿಗಳೊಬ್ಬರು ಭಾರತೀಯ ಸಂಸ್ಕೃತಿಯ ಹಿರಿಮೆಯ ಬಗ್ಗೆ ಭಾಷಣ ಮಾಡುತ್ತಿದ್ದರು. ನಡುವೆ ಅಭ್ಯಾಸಬಲದಿಂದಲೋ ಏನೋ ಒಂದು ಅಶ್ಲೀಲ ಶಬ್ದ ಅವರ ಬಾಯಿಂದ ಉದುರಿ ಬಿಟ್ಟಿತು. ಸಭೆಯೆಲ್ಲ ಗಹಗಹಿಸಿತು. ಕೆಳ ದರ್ಜೆಯ ಜನರಿಂದ ಈ ಮಾತುಗಳು ದಿನವೂ ಕಿವಿಗೆ ಬೀಳುತ್ತಿದ್ದರೂ ಯಾರೂ ನಗುವುದಿಲ್ಲ. ಸ್ವಾಮೀಜಿಯ ಶ್ರೀಮದ್ಗಾಂಭೀರ್ಯಕ್ಕೆ ಚ್ಯುತಿ ಬಂದದ್ದರಿಂದಲೇ ಅದು ಅಷ್ಟು ನಗುವನ್ನೆಬ್ಬಿಸಿತು. ಅಧಿಕಾರಸ್ಥರು ಅವಮಾನಿತರಾದದ್ದನ್ನು ಕಂಡು ಕೂಡ ನಾವು ನಗುತ್ತೇವೆ.

ಅಸಂಬದ್ಧತೆಗಳಿಂದಲೂ ಶಾರೀರಿಕ ಅಥವಾ ವಾಚಿಕ ವಿಕಾರಗಳಿಂದಲೂ ವಿಚಿತ್ರ ಹಾವಭಾವಗಳಿಂದಲೂ ನೈತಿಕ ಕೊರತೆಗಳಿಂದಲೂ ನಗೆ ಉದ್ಭವಿಸುತ್ತದೆ. ಕುಚೇಷ್ಟೆಗಳು, ಅಣಕಗಳು, ಚಿಲ್ಲರೆ ದುರದೃಷ್ಟಗಳು, ಇತರರಲ್ಲಿ ಕಾಣಿಸುವ ಅಜ್ಞಾನ, ಬುದ್ಧಿಗೇಡಿತನ, ಫಜೀತಿ, ತೀವ್ರವಾದ ನಿರೀಕ್ಷೆ ಹುಸಿಹೋಗುವುದು, ವಾಕ್ಚಮತ್ಕಾರ, ಮಾತಿನ ಮೇಲೆ ಇನ್ನೊಬ್ಬನು ಅಭ್ಯಾಸವಶನಾಗಿ ಬಳಸುವ ಅರ್ಥರಹಿತವಾದ ಶಬ್ದಗಳು (ಉದಾಹರಣೆಗೆ "ಹೌದು ಮತ್ತೆ!")—ಇವೆಲ್ಲವೂ ನಗೆಯನ್ನು ಉಕ್ಕಿಸುವಂಥವುಗಳೇ.

ಹೋಟೆಲಿನಲ್ಲಿ ಹಳ್ಳಿಗನೊಬ್ಬ ಫೋರ್ಕ್—ಚಮಚೆಗಳನ್ನುಪಯೋಗಿಸಿ ಹಲ್ವಾ ತಿನ್ನಲು ಯತ್ನಿಸುತ್ತಿದ್ದಾನೆ. ಇವನ್ನು ನೋಡಿಯೇ ನಿಮಗೆ ನಗು ಬರುತ್ತದೆ. ಏಕೆಂದರೆ ಈ ಗಾಂವಾರನು ಈ ಆಧುನಿಕ ಸಲಕರಣೆಯನ್ನು ಬಳಸಲು ಯತ್ನಿಸುವುದೇ ನಿಮಗೆ ಅಸಂಬದ್ಧವಾಗಿ ತೋರುತ್ತದೆ. ಚಮಚೆಯಿಂದ ಹಲ್ವ ಕತ್ತರಿಸುವಾಗ ಅದರ ತುಣುಕು ಎದ್ದು ಹಾರುತ್ತದೆ. ಈಗ ನೀವು ನಗುವುದು ಅವನ ಅಪ್ರಾವೀಣ್ಯಕ್ಕಾಗಿ. ಅದು ಹಾರಿಹೋಗಿ ಪಕ್ಕದ ಆಸನದಲ್ಲಿ ಅತ್ಯಾಧುನಿಕ ವೇಷದಲ್ಲಿ ಕುಳಿತ ಸಾಹೇಬರ ಮುಖಕ್ಕೆ ಅಪ್ಪಳಿಸುತ್ತದೆ. ಈಗ ನೀವು ಭಯಂಕರವಾಗಿ ನಗುತ್ತೀರಿ—ಏಕೆಂದರೆ ಅವನ ಅಹಂಕಾರಕ್ಕೆ ಇನ್ನೊಂದು ಹೊಡೆತವಾಗಿದೆ.

ಅಂಗವಿಕೃತಿಯನ್ನು ನೋಡಿ ನಗುವುದು ಸದಭಿರುಚಿಯಾಗಿರಲಿಕ್ಕಿಲ್ಲ. ಆದರೆ ವಕ್ರಾಂಗರನ್ನು ಮೊದಲನೇ ಸಲ ಕಂಡಾಗಲಾದರೂ ನಗದವರು ಅಪರೂಪ.

ಹಾಸ್ಯ ಸನ್ನಿವೇಶವನ್ನು ಗ್ರಹಿಸುವ ನಿಜವಾದ ಯೋಗ್ಯತೆಯುಳ್ಳವನು, ಬೇರೊಬ್ಬನು ಬಾಳೇಹಣ್ಣಿನ ಸಿಪ್ಪೆಯ ಮೇಲೆ ಕಾಲಿಟ್ಟು ಜಾರಿ ಬೀಳುವುದನ್ನು ನೋಡಿ ಮಾತ್ರ ನಗುವುದಿಲ್ಲ: ತಾನೇ ಬಿದ್ದರೂ ನಗು ತಡೆದುಕೊಳ್ಳಲಾರನೆಂದು ಒಬ್ಬಾತ ಹೇಳಿದ್ದಾನೆ. ಸೈನ್ಯದಲ್ಲಿ ಯಾವುದೋ ತಪ್ಪಿಗಾಗಿ ಒಬ್ಬನಿಗೆ ಹನ್ನೆರಡು ಬಾರುಕೋಲಿನ ಏಟುಗಳ ಶಿಕ್ಷೆಯಾಯಿತು. ಶಿಕ್ಷೆಯನ್ನು ಜಾರಿಗೆ ತರುವ ಅಧಿಕಾರಿ ಆರೋಪಿಯನ್ನು ಹಿಡಿದು ಹೊಡೆಯತೊಡಗಿದನು. ಆದರೆ ಆತ ತಡೆಯಲಾರದೆ ಗಹಗಹಿಸಿ ನಗುವುದನ್ನು ನೋಡಿ ಆರು ಏಟುಗಳ ನಂತರ ನಿಲ್ಲಿಸಿ, "ಯಾಕೆ ನಗುತ್ತೀ?" ಎಂದು ಅಧಿಕಾರಿ ಕೇಳಿದ. "ಶಿಕ್ಷೆಯಾದದ್ದು ನನಗಲ್ಲ, ಆತನಿಗೆ," ಅಂತ ಆತ ಮತ್ತಷ್ಟು ನಗತೊಡಗಿದನು. ಶಿಕ್ಷೆಯಾದದ್ದು ಮತ್ತೊಬ್ಬನಿಗಾದರೂ ತಪ್ಪಿ ತನಗೆ ಪೆಟ್ಟು ಬೀಳುತ್ತಿರುವುದು ಅವನಿಗೆ ತಮಾಷೆಯಾಗಿ ಕಂಡಿತು. ನಿಜವಾದ ವಿನೋದ ಪ್ರಜ್ಞೆ ಇರುವವರು ಇಂಥವರು. ವಿನೋದದ ಸನ್ನಿವೇಶದಿಂದ ತಮಗೇ ಕಷ್ಟವಾಗುತ್ತಿದ್ದರೂ ಅವರು ನಗದೇ ಬಿಡರು.

ಬೇರೆ ಬೇರೆ ಪ್ರಸಂಗಗಳಲ್ಲಿ ನಾವು ಏಕೆ ನಗುತ್ತೇವೆ ಎಂಬುದಕ್ಕೆ ಮನೋವಿಜ್ಞಾನಿಗಳು ಬೇಕಾದಷ್ಟು ಕಾರಣ ಕೊಡುತ್ತಾರೆ. ಸಾವನ್ನು ಕುರಿತ ವಿನೋದ ಕೇಳಿ ನೀವು ನಕ್ಕರೆ ನಿಮಗೆ ಮರಣಭೀತಿ ಬಹಳವಾಗಿದೆ, ಅದನ್ನು ತಾತ್ಕಾಲಿಕವಾಗಿಯಾದರೂ ಮರೆಯಲು ನೀವು ನಗುತ್ತೀರಿ ಎಂದು ಅವರು ಹೇಳುತ್ತಾರೆ. ಮಂತ್ರಿಗಳ ವಿಷಯ ಬರುವ ತಮಾಷೆಗಳು ನಮ್ಮನ್ನು ಯಾಕೆ ನಗಿಸುತ್ತವೆ ಎಂದು ಕೇಳಿದರೆ ಮಂತ್ರಿಗಳು ನಮ್ಮ ಹಾಗೆ ನಿಜವಾಗಿ ಅಯೋಗ್ಯರೇ

...ಯಿಂದ ಅಧಿಕಾರಕ್ಕೆ ಬಂದಿದ್ದಾರೆ; ಅವರ ಮೇಲೆ ನಮಗೆ ಕಾರ್ಯವಾಗುವುದನ್ನು ಮುಚ್ಚಿಕೊಳ್ಳಲು ನಗುತ್ತೇವೆ ಎನ್ನುತ್ತಾರೆ. ಇನ್ನೊಬ್ಬರ ನೈತಿಕ ಅಧಃಪಾತದ ಕಥೆಯಿಂದ ನಾವು ನಗುವುದಕ್ಕೆ ಕಾರಣವೇನು? ನಮ್ಮ ನೈತಿಕ ಶಕ್ತಿಯ ಬಗ್ಗೆ ನಮಗೇ ಅಧೈರ್ಯವಿದೆ—ಅದಕ್ಕೆ. ಆದರೆ ನಗೆಗಳಿಗೆ ಒಂದೇ ಪ್ರಬಲ ಕಾರಣ ಹೇಳಬೇಕಾದರೆ ಅಸಂಬದ್ಧತೆಯ ಪ್ರಜ್ಞೆ ಎನ್ನಬೇಕಾಗುತ್ತದೆ. ಪ್ರಸಿದ್ಧ ಜರ್ಮನ್ ತತ್ವಜ್ಞಾನಿ ಶಾಪೇನ್‌ಹಾವರ್ ಈ ಅಭಿಮತವನ್ನು ಅನುಮೋದಿಸುತ್ತಾನೆ. ಆದರೂ ಕರಿಹಲಗೆಯನ್ನು ಕಂಡಾಗೆಲ್ಲ ಅವನಿಗೆ ತಡೆಯಲಾರದ ನಗು ಬರುತ್ತಿತ್ತಂತೆ. ಇದಕ್ಕೆ ಮನೋವಿಜ್ಞಾನಿಗಳು ಕೂಡ ಕಾರಣ ಹೇಳಲು ಶಕ್ತರಾಗಿಲ್ಲ. ಚಾರ್ಲಿ ಚಾಪ್ಲಿನ್ ಅಭಿಪ್ರಾಯದಲ್ಲಿ ನಿಜವಾದ ನಗೆ ಉದ್ಭವಿಸುವುದು ಯಾರಿಗಾದರೂ ಹಾಸ್ಯಾಸ್ಪದವಾದದ್ದೇನಾದರೂ ಒದಗಿ ಅವನು ತನ್ನ ಗಾಂಭೀರ್ಯವನ್ನು ಉಳಿಸಿಕೊಳ್ಳಲು ಏನೂ ಆಗಿಲ್ಲವೆಂದು ನಟಿಸಲು ಯತ್ನಿಸುವಾಗ.

ಥಿಯರಿಗಳು ಏನೇ ಹೇಳಲಿ, ನಮ್ಮಲ್ಲಿ ಹೆಚ್ಚಿನವರಿಗೆ ನಿಜವಾದ ವಿನೋದಪ್ರಜ್ಞೆಯ ಕೊರತೆ ಇದೆ. ಇತರರು ನಗುವುದನ್ನು ನೋಡಿ ನಾವೂ ನಗುತ್ತೇವೆ ಅಷ್ಟೇ. ಇದನ್ನು ಮನಗಂಡು ಕೆಲ ನಾಟಕ ಕಂಪನಿ ಮ್ಯಾನೇಜರರು ಹಾಸ್ಯ ಸನ್ನಿವೇಶಗಳಲ್ಲಿ ನಗುವನ್ನು ಪ್ರಾರಂಭಿಸಲು ಸಂಬಳ ಕೊಟ್ಟು ಕೆಲ ಜನರನ್ನು ಪ್ರೇಕ್ಷಕರ ಆಸನಗಳಲ್ಲಿ ಅಲ್ಲಲ್ಲಿ ಕೂರಿಸಿರುತ್ತಾರೆ! ನಿಜವಾಗಿಯೂ ನಟನ ಮಾತಿನಲ್ಲೋ ಕೃತಿಯಲ್ಲೋ ಇರುವ ಹಾಸ್ಯ ಬಹು ಜನರಿಗೆ ಅರ್ಥವಾಗುವುದಿಲ್ಲ. ಕೆಲವರಿಗೆ ಎಷ್ಟೋ ವೇಳೆಯ ನಂತರ ಅರ್ಥವಾಗುತ್ತದೆ. ನಾಟಕ ನೋಡಿ ಮನೆಗೆ ಬಂದ ಮೇಲೆ ಅರ್ಥ ಹೊಳೆದು ಹಾಹಾ ಎಂದು ನಗುವವರೂ ಇದ್ದಾರೆ.

ಇದಕ್ಕೆ ವಿರುದ್ಧವಾದ ಮನೋವೃತ್ತಿಯ ಬಗ್ಗೆ ಒಂದು ತಮಾಷೆ ಇದೆ. ಒಂದು ಪಾರ್ಟಿಗೆ ಹೋಗಿದ್ದವನು ಮನೆಗೆ ಬಂದ ಮೇಲೆ ಅಕಾರಣವಾಗಿ ಗೊಳ್ಳನೆ ನಗತೊಡಗಿದನಂತೆ. ಹೆಂಡತಿ, "ಏನು, ಹುಚ್ಚು ಹಿಡಿಯಿತೆ?" ಎಂದು ಕೇಳಿದಳು. "ಹುಚ್ಚಲ್ಲ ಮಹಾರಾಯಳೇ," ಎಂದನಾ ಪತಿರಾಯ, "ಪಾರ್ಟಿಯಲ್ಲಿ ಮಿಸ್ಟರ್—ಒಂದು ತುಂಬಾ ತಮಾಷೆಯ ಕಥೆ ಹೇಳಿದ. ಆದರೆ ಅವನಿಗೂ ನನಗೂ ಜಗಳವಾಗಿರುವುದರಿಂದ ನಾನು ಬೇಕೆಂದೇ ನಗಲಿಲ್ಲ. ಈಗ ನಗುತ್ತಿದ್ದೇನೆ!" ✡



### ಒಂದು ಸಂಗತಿ

ಅಮೇರಿಕಾದವರು
ರಶಿಯಾದವರು
ಅವರು ಇವರು
ಅಲ್ಲಿಗೆ ಇಲ್ಲಿಗೆ
ಎಲ್ಲೆಲ್ಲಿಗೋ ಹೋದರು
ಕೊನೆಗೆ
ಇದ್ದಾರೆ ಇದ್ದಲ್ಲೆ
ಈ ನೆಲದ ಮೇಲೆ.

### ಷೋಡಶಿ

ಮುಟ್ಟ ಕೊಟ್ಟರೂ
ಇವಳು
ಬಣಗಿರುವ ಹುಲ್ಲು
ತಿನ್ನುವವರೆಲ್ಲರೂ
ಆದನು
ಸುರಿಸುತ್ತ ಜೊಲ್ಲು.

— ಹೊ. ನ. ಸಂ[illegible]ಚಾರ್ಯ

# ಉಚಿತ




ಒಂದು ಸೀಸೆ

## ವಿಕೋ ಟರ್ಮರಿಕ್‌_

ನೀವು ಕೊಳ್ಳುವ

## ವಿಕೋ ವಜ್ರದಂತಿ ಯ ಜೊತೆಗೆ

(ಇಕಾನಮಿ ಸೈಜ್)




## ನಿಜವಾಗಿಯೂ ಒಂದು ಮಹಾನ್ ಕೊಡುಗೆ

### ವಿಕೋ ವಜ್ರದಂತಿ

ಆಯುರ್ವೇದೀಯ ಟೂಥ್ ಪೇಸ್ಟ್

ಈ ಆಯುರ್ವೇದೀಯ ಟೂಥ್‌ಪೇಸ್ಟ್ ಅಮೂಲ್ಯ ಗಿಡಮೂಲಿಕೆಗಳಿಂದ ತಯಾರಿಸಲ್ಪಡುತ್ತದೆ. ನಿಯಮಿತವಾಗಿ ವಿಕೋ ವಜ್ರದಂತಿಯನ್ನು ಬಳಸಿದರೆ ಅದು ದಂತಕ್ಷಯ, ಪಯೋರಿಯಾ, ಒಸಡುಗಳಿಂದ ಕೀವು ಮತ್ತು ರಕ್ತ ಬರುವುದು, ಶ್ವಾಸದ ದುರ್ಗಂಧ—ಇವನ್ನು ಎಳ್ಳಿಸಲು ನೆರವಾಗುತ್ತದೆ.

### ವಿಕೋ ಟರ್ಮರಿಕ್

ಗಂಧದ ಪರಿಮಳವಿರುವ ವ್ಯಾನಿಶಿಂಗ್ ಕ್ರೀಮ್

ಇದು ಎಷ್ಟು ಕಾಂತಿ ಬೆಳಗುವಂತೆ ಮಾಡುತ್ತದೆ. ಚರ್ಮವನ್ನು ನುಣುಪಾಗಿ, ಕೋಮಲವಾಗಿ ಇಡುತ್ತದೆ. ಮುಖಕ್ಷೌರ ಆದ ನಂತರ ಹಚ್ಚಿಕೊಳ್ಳುವುದಕ್ಕೂ ಆದರ್ಶ! ಅದು ಸಣ್ಣ ಗಾಯಗಳನ್ನೂ ಗುಣಪಡಿಸುತ್ತದೆ.

ತ್ವರೆ ಮಾಡಿರಿ! ಇಂದೇ ಕೊಳ್ಳಿರಿ

(ಈ ಕೊಡುಗೆ ಸ್ಟಾಕು ಮುಗಿಯುವ ವರೆಗೆ ಮಾತ್ರ)

## ವಿಕೋ ಲೆಬೋರೇಟರೀಸ್

ಬೊಂಬಾಯಿ ೧೪

RND.

ಸಿಲೋನ್, ಮಲಯಾ ಮತ್ತು ಸಿಂಗಾಪುರ್—ಈ ಸ್ಥಳಗಳಲ್ಲಿ ಏಜಂಟರು ಬೇಕಾಗಿದ್ದಾರೆ.



# ರಾಯಭಾರಿ ಬೆಕ್ಕಿನ ಮರಿ ಮತ್ತು ಪಾಕಿಸ್ತಾನ

ಒಂದು ಬೆಕ್ಕಿನ ಮರಿ ಅಂತಾರಾಷ್ಟ್ರೀಯ ಕೋಲಾಹಲ ಎಬ್ಬಿಸಬಲ್ಲದೆಂದು ನೀವು ನಂಬುತ್ತೀರಾ ? ಎಬ್ಬಿಸಬಲ್ಲದು. ಒಂದು ಉದಾಹರಣೆ ಇದು :

ಭಾರತದಲ್ಲಿ ಅಮೇರಿಕದ ರಾಯಭಾರಿಯಾಗಿದ್ದ ಜಾನ್ ಕೆನೆತ್ ಗಾಲ್‌ಬ್ರೇತರು ೧೯೬೨ ರಲ್ಲಿ ಗುಜರಾಥ ರಾಜ್ಯಕ್ಕೆ ಭೇಟಿ ಕೊಟ್ಟರು. ಆಗ ಗುಜರಾಥ ಗವರ್ನರರಾಗಿದ್ದ ನವಾಜ್ ಯಾರ್ ಜಂಗ್ ಅವರು ಈ ಜನಪ್ರಿಯ ರಾಯಭಾರಿಯ ಮಕ್ಕಳಿಗೆ ಎರಡು ಪರ್ಶಿಯನ್ ಬೆಕ್ಕಿನ ಮರಿಗಳನ್ನು ಉಡುಗರೆ ಕೊಟ್ಟರು. ಗುಜರಾಥದ ಪ್ರಮುಖ ನಗರದ ಸ್ಮರಣೆಗಾಗಿ ಗಾಲ್‌ಬ್ರೇತರು ಒಂದು ಬೆಕ್ಕಿನ ಮರಿಗೆ ಅಹಮದಾಬಾದ್ ಎಂದು ಹೆಸರಿಟ್ಟರು. ಕಾಲಾಂತರದಲ್ಲಿ ಈ ಹೆಸರು ಸಂಕೋಚಗೊಂಡು ಅಹಮದ್ ಎಂದಾಯಿತು.

ಕೆಲ ದಿನಗಳ ನಂತರ ದಿಲ್ಲಿಯಲ್ಲಿನ ಅಮೇರಿಕನ್ ರಾಯಭಾರದ ಹೊಸ ಕಟ್ಟಡವನ್ನು ನೋಡಲು [illegible] ಬಂದರು. ಗಾಲ್‌ಬ್ರೇತರ ಹೆಂಡತಿ ಅವರೊಡನೆ ಹರಟುತ್ತಿದ್ದಾಗ ಹೊಸ ಮನೆಯ ಸುಖ ದುಃಖಗಳ ಪ್ರಸ್ತಾಪ ಬಂತು. ಮನೆ ತುಂಬಾ ಚೆನ್ನಾಗಿದೆ, ಆದರೆ ಗುಜರಾಥ ಗವರ್ನರರು ಕೊಟ್ಟ ಒಂದು ಬೆಕ್ಕಿನ ಮರಿ ಇಲ್ಲಿನ ಒಂದು ಜಾಳಿಗೆಗೋಡೆಯ ಸಂದಿಗಳಲ್ಲಿ ನುಸುಳಿ ಒಂದು ಶಯನಾಗಾರವನ್ನು ಪ್ರವೇಶಿಸಿ ಹಾಸಿಗೆಯಲ್ಲಿ ಮಲಗುವುದರಿಂದ ಕಷ್ಟವಾಗಿದೆ. ಈಗ ಇಲ್ಲಿ ಅತಿಥಿಯಾಗಿರುವ ಅಮೇರಿಕದ ಪ್ರಸಿದ್ಧ ಅವರೆಲ್ ಹ್ಯಾರಿಮನ್ ಅವರಿಗೆ ಬೆಕ್ಕುಗಳೆಂದರೆ ಆಗುವುದಿಲ್ಲ. ಈ ಬೆಕ್ಕೀ ರಾತ್ರಿ ಅವರ ಹಾಸಿಗೆಯನ್ನಾಶ್ರಯಿಸಿ ಅವರನ್ನು ಕಂಗೆಡಿಸುತ್ತದೆ—ಎಂದು ಶ್ರೀಮತಿ ಗಾಲ್‌ಬ್ರೇತ್ ತಮಾಷೆಯಾಗಿ ವರ್ಣಿಸಿದರು. ಹ್ಯಾರಿಮನ್ನರು ಏತಕ್ಕೂ ಅಂಜದವರೆಂದು ಹೆಸರಾಗಿರುವಾಗ ಬೆಕ್ಕಿಗೆ ಅಂಜುತ್ತಾರೆಂಬ ಸುದ್ದಿ ಅಮೇರಿಕನ್ ಸುದ್ದಿಗಾರರಿಗೆ ವಿಶೇಷವಾಗಿ ಕಂಡಿತು. ಅವರು ಹ್ಯಾರಿಮನ್ನರನ್ನು ಪೀಡಿಸಿದ ಬೆಕ್ಕಿನ ಹೆಸರು ಕೇಳಿದರು. ಇವರು ಅಹಮದ್ ಎಂದರು.

ಚೀನೀ ದಾಳಿಯ ನಂತರ ಅಮೇರಿಕ ಭಾರತಕ್ಕೆ

ಆಧಾರ : ಜಾನ್ ಕೆನೆತ್ ಗಾಲ್‌ಬ್ರೇತರ Ambassador's Journal

ಶಸ್ತ್ರಾಸ್ತ್ರ ಸಹಾಯ ಮಾಡುತ್ತಿದ್ದುದರಿಂದ ಆಗ ಪಾಕಿಸ್ತಾನದಲ್ಲಿ ಅಮೇರಿಕ ವಿರೋಧಿ ವಾತಾವರಣ ಸೃಷ್ಟಿಯಾಗಿತ್ತು. ಸಾಲದ್ದಕ್ಕೆ ಗಾಲ್‌ಬ್ರೇತರು ಭಾರತದ ಪಕ್ಷಪಾತಿಗಳೆಂದೂ ಅವರ ಒತ್ತಾಯದಿಂದಲೇ ಅಮೇರಿಕ ಭಾರತಕ್ಕೆ ನೆರವು ನೀಡುತ್ತಿದೆಯೆಂದೂ ಪ್ರತೀತಿ ಇತ್ತು. ಆದ್ದರಿಂದ ಗಾಲ್‌ಬ್ರೇತರು ಒಂದು ಬೆಕ್ಕಿಗೆ ಅಹಮದ್ ಎಂದು ಹೆಸರಿಟ್ಟಿದ್ದಾರೆಂದು ಅಮೇರಿಕದ ಪತ್ರಿಕೆಯಲ್ಲಿ ಬಂದಿದೆಯೆಂದು ಕೇಳುತ್ತಲೇ ಪಾಕಿಸ್ತಾನದಲ್ಲಿ ಗಲಾಟೆ ಎದ್ದಿತು. ಅಹಮದ್ ಎಂಬುದು ಇಸ್ಲಾಮಿನ ಪ್ರವಾದಿಯ ಪವಿತ್ರ ನಾಮ. ಅದನ್ನು ಬೆಕ್ಕಿಗೆ ಇಟ್ಟು ಬೇಕಂತಲೇ ಗಾಲ್‌ಬ್ರೇತ್ ಇಸ್ಲಾಮಿಗೆ ಅಪಮಾನ ಮಾಡಿದ್ದಾನೆಂದು ಮುಲ್ಲಾ ಮೌಲವಿಗಳು ಕೂಗೆಬ್ಬಿಸಿದರು. ರಾಜಕೀಯ ಪರಿಣಾಮಗಳು ತತ್‌ಕ್ಷಣ ಕಾಣಿಸಿಕೊಂಡವು. ಲಾಹೋರಿನಲ್ಲಿದ್ದ ಅಮೇರಿಕನ್ ಕಾನ್ಸುಲೇಟ್ ಮೇಲೆ ಕಲ್ಲುಗಳು ಬಿದ್ದವು. ಅಮೇರಿಕನ್ ಸೈನಿಕರನ್ನು ಸಾಗಿಸುತ್ತಿದ್ದ ಒಂದು ಜೀಪನ್ನು ರುದ್ರ ಜನಜಂಗುಳಿಯೊಂದು ತಲೆ ಕೆಳಗು ಮಾಡಿತು.

ಕೆಲವೇ ನಿಮಿಷಗಳಲ್ಲಿ ಕರಾಚಿಯಿಂದ ಗಾಲ್‌ಬ್ರೇತರಿಗೆ ಕೋಲಾಹಲದ ಸಂದೇಶ ಬಂತು. ಕೂಡಲೆ ಸರಿಪಡಿಸದಿದ್ದರೆ ಪರಿಸ್ಥಿತಿ ನಿಜವಾಗಿ ಗಂಭೀರವಾಗಬಹುದಿತ್ತು. ಗಾಲ್‌ಬ್ರೇತರು ರಾಯಭಾರ ಕಾರ್ಯದಲ್ಲಿ ಅನನುಭವಿಗಳಾದ ವಿಶ್ವವಿದ್ಯಾಲಯ ಪ್ರೊಫೆಸರರು. ಇಂಥ ಅಮೆಚೂರರ ಕೈಲಿ ರಾಯಭಾರವನ್ನು ಕೊಟ್ಟರೆ ಎಂಥಾ ಪೀಕಲಾಟಗಳೇಳಬಹುದೆಂಬುದಕ್ಕೆ ಇದೊಂದು ಉದಾಹರಣೆಯೆಂದು ವ್ಯವಸಾಯಿ ರಾಯಭಾರಿಗಳು ಹಂಗಿಸುವುದು ಖಂಡಿತವೆಂಬುದು ಗಾಲ್‌ಬ್ರೇತರ ಇನ್ನೊಂದು ಸಂಕಟವಾಗಿತ್ತು. ಅದಕ್ಕೂ ಹೆಚ್ಚೆಂದರೆ ಭಾರತದಲ್ಲೆ ಮುಸ್ಲಿಮರು ಉರಿದೇಳಬಹುದಿತ್ತು. ಗಾಲ್‌ಬ್ರೇತರು ಅವಸರದಿಂದ ಪತ್ರಿಕಾ ಪರಿಷತ್ತು ಕರೆದು ಬೆಕ್ಕಿನ ಮರಿಗೆ ಆ ಹೆಸರು ಬಂದ ರೀತಿಯನ್ನು ವಿವರಿಸಿ ಇದರಲ್ಲಿ ದುರುದ್ದೇಶವಿದ್ದಿಲ್ಲವೆಂದು ವಿದಿತಪಡಿಸಿದರು. ಬೆಕ್ಕನ್ನು ಗುಜರಾಥ ಎಂದು ನಾಮಾಂತರ ಮಾಡಿದ್ದಾಗಿ ಪ್ರಕಟಿಸಿದರು. ದಿಲ್ಲಿಯಲ್ಲಿನ ಪಾಕಿಸ್ತಾನ ಹೈಕಮಿಶನರ ಸಂಪರ್ಕ ಬೆಳಸಿ ವಸ್ತುಸ್ಥಿತಿಯನ್ನು ತಿಳಿಸಿ ಪಾಕಿಸ್ತಾನದಲ್ಲಿ ಜನರನ್ನು ಸಮಾಧಾನಪಡಿಸುವುದರಲ್ಲಿ ನೆರವಾಗಬೇಕೆಂದು ಕೇಳಿಕೊಂಡರು. ಪಾಕಿಸ್ತಾನ ಸರಕಾರವೂ ಇಷ್ಟು ಸಾಕೆಂದು ಪರಿಸ್ಥಿತಿ ಪ್ರಕೋಪಕ್ಕೆ ಹೋಗದಂತೆ ನೋಡಿಕೊಂಡಿತು. ಅಷ್ಟಕ್ಕೇ ಪ್ರಕರಣ ಶಾಂತವಾಯಿತು.

ಆದರೂ ಎಷ್ಟೋ ಕಾಲ ಬೆಕ್ಕಿಗೆ ಅಹಮದ್ ಎಂದು ಹೆಸರಿಡುವ ಹುಚ್ಚುತನ ಹೇಗೆ ಆಯಿತೆಂದು ಆಗಾಗ್ಗೆ ಗಾಲ್‌ಬ್ರೇತರು ಪತ್ರಿಕಾಕರ್ತರ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾಗುತ್ತಿತ್ತು. "ಅಹಮದಾಬಾದ್" ಎಂಬ ಹೆಸರಿಗೂ ಪ್ರವಾದಿ ಮುಹಮ್ಮದರಿಗೂ ಏನು ಸಂಬಂಧವಿಲ್ಲ. ಆ ನಗರಕ್ಕೆ ಅದರ ಸ್ಥಾಪಕನಾದ ಸುಲ್ತಾನ ಅಹಮದ ಶಾನ ಹೆಸರು ಕೊಡಲಾಗಿತ್ತು ಮತ್ತು ಆ ಹೆಸರನ್ನು ಮಕ್ಕಳು ಹ್ರಸ್ವಗೊಳಿಸಿ ಅಹಮದ್ ಎಂದು ಮಾಡಿಕೊಂಡಿದ್ದರು, ಎಂದು ಭಾರತೀಯ ಮುಸ್ಲಿಮರನ್ನು ಸಮಾಧಾನ ಮಾಡುವುದು ಗಾಲ್‌ಬ್ರೇತರಿಗೆ ಒಂದು ಯಜ್ಞವೇ ಆಗಿ ಹೋಯಿತು. ✡



**ಕೃಷಿಯನ್ನು ಬಿಟ್ಟರೆ ಥೋಂಗಿಯೆಂ ನವ್ಯ ಕಾಲದ ಅತಿ ದೊಡ್ಡ ಉದ್ಯೋಗ.**

ಆಲ್ಫ್ರೆಡ್ ನೋಬೆಲ್

# ಕಾಲ್ಪನಿಕ ಸಂವಾದ



ಗಂಟೆ ಹನ್ನೊಂದು ಹೊಡೆಯಿತು. ಗುಣು ಗುಣಿಸುತ್ತಿದ್ದ ಸಿತಾರಿನ ರಾಷ್ಟ್ರೀಯ ಕಾರ್ಯಕ್ರಮ ಮುಕ್ತಾಯವಾಯಿತು. ತೂಕಡಿಕೆಯಿಂದ ಕೈಯಲ್ಲಿದ್ದ ಪುಸ್ತಕವೂ ಮುಚ್ಚಿಕೊಂಡಿತು. ಅರೆ ತಾಸಿನ ಮೊದಲು ಗುಡುಗು ಮಿಂಚಿನ ಆರ್ಭಟೆ ನಡೆದು, ಎಲ್ಲಿಯೋ ಮಳೆ ಬಂತು. ತಂಪಾದ ಗಾಳಿ ಬೇರೆ. ಹಾಸಿಗೆ ಸುರುಳಿ ಬಿಡಿಸಿ ಮೈ ಚಾಚಿದೆ. ಇನ್ನೇನು ಹಿತವಾದ ನಿದ್ರೆ ಎಂದು ಹೊದಿಕೆ ಎಳೆದುಕೊಂಡೆ.

ಹಾಗೆಂದುಕೊಂಡು ಮಲಗಿದಾಗಲೆಲ್ಲ ನಿದ್ರೆಗೆ ಏನಾದರೊಂದು ವಿಘ್ನ ಉಂಟೇ ಉಂಟು. ಅದು ನನ್ನ ಅನುಭವ. ಯಾರಾದರೂ ಕಾಲ್ ಬೆಲ್ ಒತ್ತುತ್ತಾರೆ. ತುಂಟ ಬೆಕ್ಕು ಏನನ್ನಾದರೂ ಕೆಡವಿದ ಸದ್ದು ಕೇಳಿಬರುತ್ತದೆ. ಅಥವಾ ಬೇರೇನಾದರೂ ಕಾರಣದಿಂದ ಎದ್ದೇಳುವ ಪ್ರಸಂಗ ಒದಗುತ್ತದೆ. ಇವತ್ತು ಕೂಡ ಹಾಗಾಯಿತು.

“ಗುರುತಾಯಿತೇನೋ?” ಎಂದು ಹಗುರಾಗಿ ಯಾರೋ ಕೇಳಿದ ಹಾಗಾಯಿತು. ಇದೇನು ಹಗಲೇ! ರೈಲ್ವೇ ಸ್ಟೇಶನ್ನೇ! ಗುರುತಿದೆಯೇ ಎಂದು ಕೇಳಿಕೊಂಡು ಬರುತ್ತಿದ್ದಾರೆ, ಈ ಹೊತ್ತಿಗೆ! ಅಥವಾ ಕೇವಲ ಭ್ರಮೆಯಿರಬಹುದೋ ಏನೋ ಎಂದುಕೊಂಡು ಮಗ್ಗುಲಿಗೆ ಹೊರಳಿದೆನೆಂದು ಕಾಣುತ್ತದೆ.

“ಏನಪ್ಪ, ನನ್ನ ನೆನಪಿದೆಯೋ?” ಎಂದು ಮತ್ತೆ ಅದೇ ಮೆಲುದನಿಯ ಪ್ರಶ್ನೆ!

“ಯಾರ್ರೀ ಅದು ?” ಎಂದು ಗೊಣಗುತ್ತ ಕಿಟಕಿಯಾಚೆ ನೋಡಿದರೆ ಮಿಂಚೊಂದು ದೂರದ ಆಗಸದಲ್ಲಿ ಗೀಚಿ ಮರೆಯಾಯಿತೇ ಹೊರತು ಮತ್ತೇನೂ ಕಾಣಿಸಲಿಲ್ಲ.

ಅಷ್ಟರಲ್ಲಿ, “ಕಿಟಕಿಯಾಚೆ ಏನನ್ನು ಹುಡುಕು

ಎ. ಎಸ್. ರಾಮಕೃಷ್ಣ

ತ್ತೀಯೊ! ನಾನಿದ್ದೇನೆ ಇಲ್ಲಿ." ಎಂದು ಪಕ್ಕದಲ್ಲಿ ಯಾರೋ ಅಂದಹಾಗಾಯಿತು.

"ಆಂ—" ಎಂದೆ ಕೊಂಚ ಭೀತಿಯಿಂದ.

"ಹೌದು...ಇಲ್ಲೇ ನಿನ್ನ ಮಗ್ಗುಲಲ್ಲೇ ಇದ್ದೇನಲ್ಲ."

"ಮಗ್ಗುಲಲ್ಲಿ!... ಮಗ್ಗುಲಲ್ಲಿರಬೇಕಾದವರನ್ನು ಅವರಣ್ಣ ಬಂದು ಕರೆದುಕೊಂಡು ಹೋದನಲ್ಲ ಸಂಜೆ ಹೊತ್ತಿಗೆ..." ಎಂದು ಜ್ಞಾಪಿಸಿಕೊಳ್ಳುವಷ್ಟರಲ್ಲಿ—

"ಹೌದು. ಅವರೇನೇ ಹೋಗುವ ಮೊದಲು ನನ್ನನ್ನು ಇಲ್ಲಿ ತಂದಿರಿಸಿದವರು," ಎಂದಹಾಗಾಯಿತು.

"ಯಾರು ನೀನು...ಬೇಗ ಹೇಳು!" ಎಂದು ಕಿರಿಚಿದೆ.

"ರೇಗಬೇಡವಮ್ಮ ...... ನಾನು... ನಿನ್ನ ಶಾಲು..."

"ಶಾಲು!...ಬಾಲು ಮಾತ್ರ ನನಗೆ ಗೊತ್ತು. ಅವನಮ್ಮನ ಜೊತೆಗೆ ಹೋಗಿದ್ದಾನೆ."

"ಗೊತ್ತು...ಆದರೆ ನಾನು, ಬಾಲು ಅಲ್ಲ... ನಿನ್ನ ಶಾಲು ಕಣಮ್ಮ."

"ಯಾವ ಶಾಲು?... ಯಾರು ನೀನು ಗೊತ್ತಾಗೋದಿಲ್ಲ."

"ಅದಕ್ಕೇನೇ ಕೇಳಿದ್ದು, 'ಗುರುತಿದೆಯೇನಮ್ಮ' ಅಂತ. ಮರೆತೇ ಹೋಗಿದೆ ಅಲ್ಲವೇ?"

ಶಾಲು... ಶಾಲು... ಎಂದು ನನ್ನಷ್ಟಕ್ಕೇ ಗೊಣಗಿದೆ ಯಾವುದು ಏನು ಎಂದು ತೋಚದೆ.

"ಹೌದು ಕಣಮ್ಮ...ನಿನ್ನ ಶಾಲೇ ನಾನು. ೧೯೪೨ ರ ಅಗಸ್ಟ್ ಎರಡನೇ ವಾರ...ಬೆಂಗಳೂರು ಕೋಟೆಯ ಖಾದಿ ಭಂಡಾರ ಜ್ಞಾಪಿಸಿಕೋ. 'Do or die' ಲೇಬಲಿನ ಖಾದಿ ಟೋಪಿ ಮತ್ತು ನಾನು—ಖಾದಿ ಶಾಲು—ಜ್ಞಾಪಿಸಿಕೋ...".

"ಓ, ಹಾಗೇನು! ಖಾದಿ ಶಾಲೇ? ಅದು ಎಲ್ಲೋ ಆ ಹಳೇ ಸೂಟ್‌ಕೇಸಿನ ಅಡಿಯಲ್ಲಿ ಇತ್ತಲ್ಲ..."

"ಹೌದು. ನೀನು ನನ್ನನ್ನು ಐರ್ನ್ ಮಾಡಿಸಿ ವರ್ಷ ಹದಿನೈದು ಕಳೆದಿರಬೇಕಲ್ಲವೇ? ಆದರೆ ನಿನ್ನ ಮುಂದಿಗೆ ನಾನು ನಿನ್ನತ್ತ ಜೀವನವನ್ನು ಕತ್ತಲಲ್ಲೇ ಕಳೆಯುವುದು ಸಹಜವಲ್ಲವೆಂದು ಕಾಣುತ್ತದೆ. ಮೊನ್ನೆ ನಿನ್ನ ಕಚೇರಿಪತ್ರಗಳಿಗಾಗಿ ಆ ಸೂಟ್‌ಕೇಸನ್ನೆಲ್ಲ ತಡಕಾಡಿದಳಲ್ಲ. ಆಗ ಅಡಿಯಲ್ಲಿ ಮುದುರಿ ಬಿದ್ದಿದ್ದ ನಾನು ಅವಳ ಕಣ್ಣಿಗೆ ಬಿದ್ದೆ. ಒಂದು ಕ್ಷಣ ಕೈಯಲ್ಲಿಟ್ಟುಕೊಂಡು ನನ್ನನ್ನೇ ನೋಡಿದಳು. ಏನನ್ನಿಸಿತೋ. ಕೊಂಡೊಯ್ದು ಬಿಸಿಲಲ್ಲಿ ಆರಿಸಿದಳು. ಸೂಟ್‌ಕೇಸಿನ ತಳದಲ್ಲಿ ಮುಗ್ಗುತ್ತಿದ್ದ ನನಗೆ ಆ ಬಿಸಿಲು ಆ ಗಾಳಿ ಎಷ್ಟೊಂದು ಹಾಯೆನಿಸಿತು ಗೊತ್ತೇ. ಆ ಮೇಲೆ ಅಣ್ಣನ ಜೊತೆಗೆ ಹೊರಟುಹೋಗುವ ಮೊದಲು, ನಿನ್ನ ಬೆಡ್‌ಶೀಟನ್ನು ತೆಗೆದು ನನ್ನನ್ನು ಹಾಸಿಟ್ಟು ಹಾಸಿಗೆ ಸಿದ್ಧಪಡಿಸಿದಳು. ಅಂತೂ ಮತ್ತೆ ನಿನ್ನ ಸಂಸರ್ಗ ದೊರೆಯುವಂತಾಯಿತು."

"ಎಲ ಎಲಾ, ಹಾಗೇನು! ಕೊನೆಗೂ ನೀನು ನನ್ನ ಬೆನ್ನು ಬಿಡಲಿಲ್ಲ."

"ಹಾಗೆನ್ನಬೇಡ ಕಣಮ್ಮ! ನಾನು ನಿನ್ನ ಬೆನ್ನು ಹಿಡಿಯುವುದೇನು ಬಂತು! ಒಂದು ಕಾಲದಲ್ಲಿ ನಾನು ಬೆನ್ನೇರದಿದ್ದರೆ ನೀನು ಯಾವ ಸಭೆ ಸಮಾರಂಭಗಳಿಗೂ ಹೊರಡುತ್ತಿರಲಿಲ್ಲ ನಿಜವೇ?"

"ಅದೊಂದು ಕಾಲ ಅನ್ನು...ಬೇಸರಪಡಬೇಡ, ಹಾಗಂದೆ ಅಂತ..."

"ಬೇಸರವೆಲ್ಲಿ ಬಂತು! ಹೌದು ಅದೊಂದು ಕಾಲ...ನಾನು ಬಲ್ಲೆ."

"ಮರೆತಿಲ್ಲ ಮರೆತಿಲ್ಲ...ನಿನ್ನನ್ನು ಧರಿಸುವುದೆಂದರೆ ಎಷ್ಟೊಂದು ಅಭಿಮಾನ ಆಗ! ನಾನೇ ನೂತು ತಯಾರಿಸಿದ ೨೦ ಲಡಿಯಷ್ಟು ನೂಲನ್ನು ಕೊಟ್ಟು ನಿನ್ನನ್ನು ಪಡಕೊಂಡೆನಲ್ಲವೇ? ದಿನಕ್ಕೊಂದು ಗಂಟೆಯಂತೆ ಹಲವಾರು ತಿಂಗಳುಗಳ ಪರಿಶ್ರಮದ ಫಲ ನೀನು. ಅಷ್ಟು ಮಾತ್ರವಲ್ಲ, ನಿನ್ನನ್ನು ಪಡೆದ ಆ ಸ್ವಾತಂತ್ರ್ಯ ಸಾಧ-

ತ್ತದಲ್ಲ...ಸಿನಿಕತನ ಸಮನಿಸಿದ ಹಾಗಿದೆಯಲ್ಲ!"

"ಹಾಗೆಂದುಕೋ ಪರವಾ ಇಲ್ಲ."

"ಕ್ಷಮಿಸಯ್ಯ ಕ್ಷಮಿಸು. ನೀನಂದದ್ದು ಪೂರ್ತಿ ಒಪ್ಪಲಾರೆನಾದರೂ ಅದರಲ್ಲಿ ತಥ್ಯಾಂಶವಿದೆ, ನಿಜ. ನಿನ್ನ ಕುರಿತು ನನಗೆ ಗೌರವವಿದೆ. ಆದ್ದರಿಂದಲೇ ನಿನ್ನನ್ನು ತ್ಯಜಿಸಲಾರೆ. ನನ್ನ ಯೌವನದ ಆದರ್ಶಗಳ ಸಂಕೇತ ನೀನು."

"ಸಾಕು ಸಾಕು, ನಿನ್ನ ಮುಖಸ್ತುತಿ."

"ಮುಖಸ್ತುತಿ ಅಲ್ಲವಯ್ಯ— ಬೇಕಿದ್ದರೆ ನೋಡು ನನ್ನ ಉಳಿದೆಲ್ಲ ಶಾಲುಗಳು ಉತ್ತರೀಯಗಳು ಎಲ್ಲಿಗೆ ಹೋದುವೋ ನನಗೆ ತಿಳಿಯದು. ಮದುವೆಯಲ್ಲಿ ನನ್ನ ಮಾವ ಹೊದಿಸಿದ ಆ ರೇಷ್ಮೆ ಕನಕಾಂಬರವನ್ನು ಕೂಡ ನಾಲ್ಕು ಸಲ ನಾನು ಸರಿಯಾಗಿ ಧರಿಸಿದ್ದೇನೆಯೆ? ಕೆಲವನ್ನು ನಮ್ಮವರು ಕತ್ತರಿಸಿ ಏನೇನು ಉಡುಪು ತಯಾರಿಸಿದರೋ ಯಾರು ಬಲ್ಲರು! ಆದರೆ ಇಷ್ಟು ವರ್ಷಗಳು ಕಳೆದರೂ ನಿನ್ನ ಗೋಜಿಗೆ ಯಾರೂ ಬರುವ ಹಾಗಿಲ್ಲ."

"ಕಾರಣ ಗೊತ್ತಿಲ್ಲವೆ? ಒರಟೊರಟಾಗಿರುವ ನನ್ನನ್ನು ಕತ್ತರಿಸಲು ಹೊರಟರೆ ಕತ್ತರಿಯೇ ಮುರಿದೀತು ಅಷ್ಟೆ!"

"ಹಾಗೇನಿಲ್ಲ. ರೇಷ್ಮೆಯ ನಯ ನಿನಗಿಲ್ಲದಿದ್ದರೇನಾಯಿತು? ನಿನ್ನ ಘನತೆಯನ್ನು ನಾನು ಅರಿಯದವನೆ!"

"ಆದ್ದರಿಂದಲೇ ನನ್ನನ್ನು ಸೂಟ್‌ಕೇಸಿನ ತಳದಲ್ಲಿ ಭದ್ರವಾಗಿರಿಸಿದ್ದು ಅಲ್ಲವೆ!...ಅಂದ ಹಾಗೆ, ಕೊನೇ ಸಲ ನೀನು ನನ್ನನ್ನು ಧರಿಸಿದ್ದು ಯಾವಾಗ ಎಂದಾದರೂ ನೆನಪುಂಟೆ?"

"ಸರಿಯಾಗಿ ಜ್ಞಾಪಕವಿಲ್ಲ. ಆದರೆ ಆಚಾರ್ಯ ವಿನೋಬಾ ಭಾವೆ ಬಂದಾಗ ನಿನ್ನನ್ನು ಹೊದ್ದುಕೊಂಡು ಹೋಗಿದ್ದ ಹಾಗೆ ಜ್ಞಾಪಕ."

"ಇರಬಹುದು. ಆದರೆ ಅದು ನೋಡು ಬೂಟಾಟಿಕೆ. ಬುಷ್‌ಷರ್ಟ್ ಧರಿಸಿ ವಿನೋಬಾಜೀ ದರ್ಶನಕ್ಕೆ ಹೋಗಿದ್ದರೆ ಅನರ್ಥವೇನೂ ಆಗುತ್ತಿರಲಿಲ್ಲ. ಈ ರೀತಿ ಮಾಡಿದರೆ ಉಡುಪು ಧರಿಸಿದಂತಾಗಲಿಲ್ಲ; ವೇಷ ತೊಟ್ಟಂತಾಯಿತು ಅಷ್ಟೆ. ಆದರೆ ಆ ಚಾಳಿ ಹಿಂದೆಯೂ ಇದ್ದಿತು. ಗಾಂಧೀಜಿಯವರ ಕಾಲದಲ್ಲೂ ಕೆಲವರು ದೇ. ಭ. ಗಳು ಮ್ಯಾಂಚೆಸ್ಟರ್ ಮಲ್ಲು, ಖಾದಿ ಪಂಚೆ, ಸರ್ಜ್ ಸೂಟು ಎಲ್ಲವನ್ನೂ ಜತನದಿ ಸಂಗ್ರಹಿಸಿ ಸಂದರ್ಭಕ್ಕೆ ಸರಿಯಾಗಿ ವೇಷ ಧರಿಸಿ ಮೆರೆಯುತ್ತಿದ್ದರು. ಅದು ಎಲ್ಲ ಕಾಲದಲ್ಲಿಯೂ ಇದ್ದದ್ದೇ— ಉದರ ನಿಮಿತ್ತಂ ಮಾತ್ರವಲ್ಲ, ಪದವಿ, ಕೀರ್ತಿ, ಸ್ಥಾನ ನಿಮಿತ್ತಂ ಬಹುಕೃತವೇಷಃ! ಅಲ್ಲವೆ?"

"ಸೂಟ್‌ಕೇಸಿನ ಅಡಿಯಲ್ಲಿ ಕುಳಿತು ತಪಸ್ಸು ಮಾಡಿ ಬಹಳ ಜಾಣನಾಗಿಬಿಟ್ಟಿದೀಯ ಶಾಲು ಮಹಾಶಯ! ಉದ್ದುದ್ದ ಉಪನ್ಯಾಸಗಳನ್ನೇ ಕೊಡುತ್ತಿದ್ದೀಯ."

"ಅಲ್ಲವೆ ಮತ್ತೆ! ಒಂದು ಕಾಲದಲ್ಲಿ ನಿನ್ನ ಮೇಲೆ ಸವಾರಿ ಮಾಡಿ ಹಾರಾಡುತ್ತ ಎಷ್ಟೊಂದು ಉಪನ್ಯಾಸಗಳನ್ನು ಕೇಳಿಲ್ಲ! ಎಷ್ಟು ಹಾರ ಹಾಕಿಸಿಕೊಂಡಿಲ್ಲ!"

"ಅಂಥವನನ್ನು ಒಳಗೆ ಕೂರಿಸಿ ಹೀಗೆ ಹಾಸಿಗೆಯಲ್ಲಿ ಹಾಸಿ ಅಪಚಾರ ಮಾಡಿದೆವು.... ಕ್ಷಮಿಸು ಅಂತೇನೆ."

"ಹಾಗೇನಿಲ್ಲ ಬಿಡು. ಅದೆಲ್ಲ ನೀನು ಮೊದಲೇ ಹೇಳಿದ ಹಾಗೆ ಒಂದೊಂದು ಕಾಲ. ಆ ವಯಸ್ಸು ನಿನ್ನದು. ಆ ಕಾಲ ಹಾಗಿತ್ತು."

"ಈಗ ನಿನಗೆ ಹೇಗೋ ಹಾಗೆಯೇ ನನಗೂ ಉಪನ್ಯಾಸ ಕೇಳದೆ ಇರುವುದರಲ್ಲಿಯೇ ಆನಂದವಿದೆ. ನೀನೀಗ ಮಲಗುವ ಮೊದಲು ಓದುತ್ತಾ ಇದ್ದೆಯಲ್ಲ—ಆ ಪುಸ್ತಕ—. J B. Priestley ಯ 'Delight'; ಅದರಲ್ಲಿ ಸಮಾರಂಭಗಳಿಗೆ ಹೋಗದೆ ಇರುವುದರಲ್ಲಿ ಇರುವ ಆನಂದದ ಕುರಿತು ಹೇಳುತ್ತಾನಲ್ಲ...."

"ನೀನು ಮಾತನಾಡುತ್ತಾ ಇದ್ದರೆ ನಿನ್ನನ್ನು ತಬ್ಬಿಕೊಳ್ಳೋಣ ಎನಿಸುತ್ತೆ ಶಾಲುರಾಯ... ನಾಳೆಯಿಂದ ನೀನು ಪುನಃ ನನ್ನ ಹೆಗಲೇರುವುದಾದರೂ ಸರಿಯೇ..."

"ಬೇಡ...ಬೇಡ... ಅದು ಮಾತ್ರ ಸಾಧ್ಯವಿಲ್ಲ.

ನನಗೆ ಇಂದಿಗೆ ಇದೇ ಸುಖ. ಆಗಲೇ ಹೇಳ್ತಾ ಇದ್ದೆನಲ್ಲ. ಹೊರಗೆ ಸವಾರಿ ಹೊರಡುವ ಆಸೆ ಈಗಿಲ್ಲ. ಅಲ್ಲದೆ ನಾನು ಒಪ್ಪಿದರೂ ನಿನ್ನ ಮಡದಿಗೆ ಅದು ಸರಿಹೋಗದು. ಹಿಂದೊಮ್ಮೆ ನನ್ನಿಂದಾಗಿ ನಿಮ್ಮೊಳಗೆ ನಾಲ್ಕು ಕ್ಷಣಗಳ ವಿರಸವಾದದ್ದನ್ನು ನಾನು ಮರೆತಿಲ್ಲ."

"ಯಾವಾಗ ಅದು? ಏನು ವಿರಸ? ನನಗೆ ಅರ್ಥವಾಗುತ್ತಿಲ್ಲ."

"ನೀನು ಮರೆತರೂ ನನಗೆ ನೆನಪಿದೆ. ನಿನ್ನ ಲಗ್ನವಾದ ಪ್ರಾರಂಭದಲ್ಲೇ ಎಂದು ಕಾಣುತ್ತದೆ. ಆಗ ನಾನು ನಿವೃತ್ತಿಪೂರ್ವ ರಜಾ ಅಂತಾರಲ್ಲ— ಆ ಸ್ಥಿತಿಯಲ್ಲಿದ್ದೆ. ಆಗಲೇ ನೀನು ನನ್ನನ್ನು ಉಪಯೋಗಿಸುವುದು ಕಡಮೆಯಾಗಿತ್ತು. ಒಂದು ಲಗ್ನಕ್ಕೆ ನೀವಿಬ್ಬರೂ ಹೋಗಬೇಕಾಗಿತ್ತು. ನೀನು ನನ್ನನ್ನು ಹೆಗಲಿಗೇರಿಸಿಕೊಂಡೆ. ಆಕೆ ಶಾಲು ಬೇಡ ಎಂದಳು. ನಿಮ್ಮೊಳಗೆ ನಯವಾಗಿಯೇ ನಾಲ್ಕು ಮಾತು ನಡೆಯಿತು. ಆಕೆಯ ಕಣ್ಣಿಂದ ಒಂದು ಹನಿ ಉದುರಿದ ಜ್ಞಾಪಕ. ಆಮೇಲೆ ಒಂದು ತಾಸು ಮೌನ. ಲಗ್ನಕ್ಕಂತೂ ಇಬ್ಬರೂ ಹೋಗಲಿಲ್ಲ. ನನಗೂ ಬೆಕೋ ಎನ್ನಿಸಿತು. ಅವತ್ತಿನಿಂದ ತಾನೆ ನಾನು ಸೂಟ್‌ಕೇಸ್‌ನಲ್ಲಿ ತಲೆ ಮರೆಸಿಕೊಂಡಿದ್ದು?"

"ಓ ಭಗವಂತ!... ನಿನ್ನ ಸ್ಮರಣೆಯ ಗರ್ಭದಲ್ಲಿ ಏನೆಲ್ಲ ಇದೆಯೋ ಶಾಲುರಾಯ...ನನಗಂತೂ ಆ ವಿಷಯ ನೆನಪಿನಲ್ಲೇ ಉಳಿದಿಲ್ಲ. ನೀನು ಹೇಳಿದ ಮೇಲೆಯೇ ಜ್ಞಾಪಕಕ್ಕೆ ಬರುತ್ತಿದೆ."

"ಅದೇನು ದೊಡ್ಡ ವಿಷಯವಲ್ಲ. ಗೊತ್ತು, ಒಂದು ಕ್ಷಣದ ಅಂತಹ ವಿರಸಗಳು ದಾಂಪತ್ಯದಲ್ಲಿ ಇದ್ದರೇನೇ ಚೆನ್ನ. ಬೆಳುದಿಂಗಳ ರಾತ್ರಿಯಲ್ಲಿ ಕರಿ ಮುಗಿಲೊಂದು ಒಂದು ಕ್ಷಣ ಸುಳಿದು ಹೋದ ಹಾಗೆ..."

"ಅರೆ ನೀನು ಕವಿ ಬೇರೆ ಆಗುತ್ತಿದ್ದೀಯೆ ಶಾಲು ಮಹಾಶಯ. ನಿನ್ನಂಥವನನ್ನು ಮಗ್ಗುಲು ಹಾಸಿಗೆಯಾಗಿ ಉಪಯೋಗಿಸಿದವರ ಅವಿವೇಕವನ್ನು ಕ್ಷಮಿಸಲಾರೆ ಕಣಯ್ಯ."

"ಥೂ ಬಿಡ್ತು ಅನ್ನು. ಅವಿವೇಕವಲ್ಲ ಅದು ವಿವೇಕ. ಉಪಯೋಗವಿಲ್ಲದೆ ಆ ಸೂಟ್‌ಕೇಸಿನ ತಳದಲ್ಲಿ ಮುದುರಿಕೊಂಡಿರುವುದಕ್ಕಿಂತ ಹೀಗೆ ಉಪಯೋಗಕ್ಕೆ ಬೀಳುವುದರಲ್ಲೇ ನನಗೆ ನೆಮ್ಮದಿ. ಸಾಧ್ಯವಾದರೆ ಯಾರಿಗೂ ತೊಂದರೆ ಕೊಡದೆ, ಒಂದಿಷ್ಟು ಉಪಕಾರವಾಗುವಂತೆ ಬಾಳಿದರೆ ಶಾಲಾಗಿ ಮೆರೆದರೇನು; ಮಗ್ಗುಲು ಹಾಸಿಗೆಯಾಗಿ ಸವೆದರೇನು! ಎಂಥೆಂಥವರು ಪಾಲಕಿ ಹೊತ್ತರಂತೆ; ನನ್ನ ಪಾಡೇನು!"

"ಎಲಾ...ಹಾಗೆ ತಿಳಿಯಬೇಡ."

"ಇಲ್ಲ. ಇಲ್ಲ...ತಪ್ಪು ತಿಳಿಯಬೇಡ. ನಿಜಕ್ಕೂ ನಾನು ನಿನ್ನ ಮಡದಿಗೆ ಕೃತಜ್ಞನಾಗಿರಬೇಕು. ನಿವೃತ್ತಿಯಿಂದ ಬಿಡಿಸಿ ಹೀಗೆ ನಿನ್ನ ಸಾಮೀಪ್ಯವನ್ನು ಆಕೆ ನನಗೆ ಒದಗಿಸಿರುವುದು ಒಂದು ಭಾಗ್ಯವೇ ಸರಿ. ನೀನು ನನ್ನ ಕುರಿತು ಏನೂ ಮಾಡಬೇಕಾಗಿಲ್ಲ. ಇಷ್ಟರಲ್ಲೇ ತೃಪ್ತ ನಾನು. ಇಂದಿಗೆ ಇಷ್ಟು ಸಾಕು. ನೀನಿನ್ನು ನಿದ್ರಿಸು."

"ನಿಜವಾಗಿ ನೀನು ತತ್ತ್ವಶಾಸ್ತ್ರಿ, ಶಾಲು ಮಹಾಶಯ. ಹಗಲು ಒಂದೆರಡು ತಾಸು ನಿನ್ನನ್ನು ಧರಿಸುವುದರಲ್ಲೇನು ಬಂತು... ಈ ತಂಪು ಹೊತ್ತಿನಲ್ಲಿ ನಿನ್ನ ಸಾಹಚರ್ಯ ಪಾವನವೆನಿಸುತ್ತದೆ," ಎಂದುಕೊಂಡು ಮಗ್ಗುಲು ಹೊರಳಿಸಿದೆ.

"ತಥಾಸ್ತು" ಎಂದು ಮೃದುವಾಗಿ ಉಸುರಿದಂತಾಯಿತು. ✡



# ಆ ರಾತ್ರಿ-ಆ ಹಗಲು

ಬಾ. ರಾ. ಗೋ.

ನಾವು ಮೂರು ಜನ ಹೊರಟಿದ್ದೆವು ಆ ರಾತ್ರಿ–ಧಾರವಾಡದಿಂದ ಮೈಸೂರಿಗೆ. ಹುಬ್ಬಳ್ಳಿಯಲ್ಲಿ ಬಸ್ಸನ್ನು ಬದಲಿಸಿ ಬೇರೆ ಲಗ್ಝುರಿ ಬಸ್ಸಿನಲ್ಲಿ ಹೊರಟಾಗ ರಾತ್ರಿ ೯–೧೦ ಘಂಟೆ.

ಮೂವರೂ ಮೂರು ವಿಧದ ಮಾನಸಿಕ ಪರಿಸ್ಥಿತಿಗೀಡಾಗಿದ್ದೆವು. ನಾನು, ಹಲವಾರು ವರ್ಷಗಳಿಂದ ಬೇರು ಬಿಟ್ಟುಕೊಂಡಿದ್ದ ನನ್ನ ಸ್ಥಳವನ್ನು ಕಿತ್ತುಕೊಂಡು, ಕಟ್ಟಿಸಿದ್ದ ಹೊಸ ಮನೆಯಲ್ಲಿ ಬಹಳ ಕಾಲ ವಾಸಿಸುವ ಯೋಗವಿಲ್ಲದೆ, ಹೊಸ ಹುದ್ದೆಯನ್ನು ಸ್ವೀಕರಿಸಲು ಹೊರಟಿದ್ದೆ. ಮಿಶ್ರಿತ ಮನೋಭಾವಗಳು. ಹಿಂದಿನ ಘಟನೆಗಳ ಮೆಲುಕಿನಿಂದಾದ ನೋವು, ಮುಂದಿನ ಘಟನೆಗಳನ್ನು ಕುರಿತಾದ ಕಾತರತೆ–ಇವು ನನ್ನ ಮನಸ್ಸಿನಲ್ಲಿ ಹೊಯ್ದಾಡುತ್ತಿದ್ದವು. ನನ್ನ ಮಿತ್ರ ಗು. ರವರು ಧಾರವಾಡಕ್ಕೆ ಸಂದರ್ಶನಕ್ಕೆ ಬಂದವರು. ಅದರಲ್ಲಿ ಯಶಸ್ವಿಯಾಗಿ ಮೈಸೂರಿನ ತಮ್ಮ ಹುದ್ದೆಯನ್ನು ಬಿಟ್ಟು ಹೊಸ ಹುದ್ದೆಯನ್ನು ಸ್ವೀಕರಿಸಲು ಮಾನಸಿಕವಾಗಿ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದವರು. ಇಬ್ಬರಿಗೂ ನಿದ್ದೆಯಿಲ್ಲ. ಮಾತನಾಡುತ್ತಲೇ ಇದ್ದೆವು. ಮೂರನೆಯವರು ಇನ್ನೊಬ್ಬ ತರುಣ ಮಿತ್ರ ನಾ.ರವರು. ಅವರೂ ಸಂದರ್ಶನಕ್ಕಾಗಿ ಬಂದವರೇ! ಇದ್ದ ಒಂದು ಸ್ಥಾನ ಗು. ರವರದಾಗಿತ್ತಾಗಿ ಸಹಜವಾಗಿಯೇ ಬರಿಗೈಯಲ್ಲಿ ಹಿಂತಿರುಗುತ್ತಿದ್ದರು. ಇವರಿಗೆ ಧಾರವಾಡಕ್ಕೆ ಬಂದಾಗಿನಿಂದ ಒಂದೇ ಯೋಜನೆ. ಹೇಗಾದರೂ ಮಾಡಿ ಖರ್ಚಾಗುವ ಐವತ್ತು ರೂಪಾಯಿಗಳನ್ನು ಮರಳಿ ಪಡೆಯಬೇಕು. ಅದಕ್ಕಿದ್ದುದೊಂದೇ ಮಾರ್ಗ–ಜೂಜು, ಅಂದರೆ ಇಸ್ಪೀಟಾಟ. ಈ ಆಟದಲ್ಲಿ ಇವರ ಕೈ ಚಳಕದ ಅನುಭವವಿದ್ದ ಅವರ ಮಿತ್ರರು ಯಾರೂ ಅವರ ಆಹ್ವಾನ ಸ್ವೀಕರಿಸಿರಲಿಲ್ಲ. ಹೇಗೋ ಮೂರು ಜನರನ್ನು ಕಲೆಹಾಕಿದ್ದರು. ಮರುದಿನ ನಮಗೆ ಹೇಳಿದರು, ೧೧೫ ಬಂತೆಂದು. ೬೫ ಲಾಭವಾಯಿತಲ್ಲಾ ಎಂದು ಅಸೂಯೆಪಡುತ್ತಾಗ ಸುಖವಾಗಿ ಮಾತೊಂದನ್ನು ಸೇರಿಸಿದ್ದರು. 'ಪೈಸೆಗಳು' ಎಂದು! ಇಷ್ಟಾದರೂ ಹಿಂತಿರುಗಿ ಬಂದಿತಲ್ಲಾ ಎಂಬ ತೃಪ್ತಿಯೊಡನೆ ಬಸ್ಸಿನಲ್ಲಿ ಕುಳಿತಲ್ಲೇ ನಿದ್ದೆ ಹೋಗಿದ್ದರವರು.

ಬಸ್ಸಿನ ಬಲಭಾಗದಲ್ಲಿ ಮೂರು ಜನರು ಕುಳಿತುಕೊಳ್ಳುವಂತೆ ಆಸನಗಳು. ಎಡಭಾಗದಲ್ಲಿ ಇಬ್ಬರಿಗೆ. ಮಧ್ಯೆ ಹಾದಿ. ನಾವು ಮೂವರೂ ಕುಳಿತದ್ದು ಮುಂದುಗಡೆ, ಬಾಗಿಲ ಬಳಿಯ ಬಲ

ಭಾಗದ ಮೂರು ಆಸನಗಳಲ್ಲಿ. ನನ್ನ ಮಿತ್ರರಿಬ್ಬರ ಬಳಿ ಎರಡು ಕೈಚೀಲಗಳಿದ್ದುವು. ನನ್ನ ಸಾಮಾನುಗಳೇ ಹೆಚ್ಚು. ನನ್ನ ಸಂಶೋಧನೆಗಳಿಗೆ ಸಂಬಂಧಿಸಿದಂತೆ ಪುಸ್ತಕಗಳು, ಟಿಪ್ಪಣಿ ಕಾಗದಗಳು—ಇಂತಹವುಗಳನ್ನು ಅಡಗಿಸಿದ್ದ ಎರಡು ದೊಡ್ಡ ಮೂಟೆಗಳು, ಒಂದು ಸೂಟ್‌ಕೇಸ್, ಎರಡು ಕೈಚೀಲಗಳು. ಆ ಮೂಟೆಗಳನ್ನು ಬಸ್ಸಿನ ಮೇಲೆ ಹಾಕಬೇಕೆಂದು ಬಸ್ಸಿನ ಅಧಿಕಾರಿಗಳು ಹುಬ್ಬಳ್ಳಿಯಲ್ಲಿ ಗಲಾಟೆ ಮಾಡಿದಾಗ, ಅವರನ್ನು ಹೇಗೋ ಒಪ್ಪಿಸಿ ಅವನ್ನೂ ಬಸ್ಸಿನೊಳಗೇ ಹಾಕಿಸಿದ್ದೆ. ಅದನ್ನು ಅವರು ಆಸನಗಳಾಗಿ ಉಪಯೋಗಿಸಲು ಸಮ್ಮತಿಸಿದ್ದೆ.

ಬಸ್ ಹುಬ್ಬಳ್ಳಿ ಬಿಟ್ಟ ಮೇಲೆ ಅದೂ ಇದೂ ಮಾತನಾಡುತ್ತಿದ್ದೆವು. ಸುಮಾರು ೧೧ ಘಂಟೆಗೆ ಅದು ಹಾವೇರಿ ತಲುಪಿತು. ಒಂದಿಬ್ಬರನ್ನು ಇಳಿಸಿ, ಇನ್ನಿಬ್ಬರನ್ನು ಹತ್ತಿಸಿ ಪುನಃ ಮುಂದಕ್ಕೆ ಹೊರಟಿತು. ಆ ವೇಳೆಗೆ ಬಸ್ಸಿನ ಕಂಡಕ್ಟರನೋ ಏಜಂಟನೋ ಒಬ್ಬಾತ ನಮ್ಮ ಟಿಕೆಟುಗಳನ್ನು ನಮ್ಮಿಂದ ಹಿಂದಕ್ಕೆ ಪಡೆದಿದ್ದ. ಮಧ್ಯದಾರಿಯಲ್ಲಿ ಇಳಿದ, ಹತ್ತಿದ, ಪ್ರಯಾಣಿಕರಿಂದ ಪಡೆದಿದ್ದ ಪ್ರಯಾಣಶುಲ್ಕವನ್ನೂ ಲೆಕ್ಕ ಹಾಕಿದ್ದ. ಎಲ್ಲವನ್ನೂ ಗಂಟು ಕಟ್ಟಿ, ಜೇಬಿನಲ್ಲಿಟ್ಟು, ಬಸ್ಸಿನ ಇನ್ನೊಬ್ಬ ಚಾಲಕನ ಜೊತೆಯಲ್ಲಿ ಮಾತನಾಡುತ್ತಿದ್ದ. ಆತನಾದರೊ ನನ್ನ ಮೂಟೆಯ ಮೇಲೆ ಕುಳಿತಿದ್ದ. ಚಾಲಕನ ಪಕ್ಕದಲ್ಲಿ ಬಹುಶಃ ಬಸ್ಸಿಗೆ ಸಂಬಂಧಿಸಿದ ಇನ್ನೊಬ್ಬ (ಕ್ಲೀನರ್?) ಕುಳಿತು ಅವನೊಡನೆ ಲೋಕಾಭಿರಾಮವಾಗಿ ಹರಟುತ್ತಿದ್ದ. ರಾತ್ರಿಯ ಹೊತ್ತು ಚಾಲಕನಿಗೆ ನಿದ್ರೆ ಬಾರದೆ ಅವನು ಎಚ್ಚರವಾಗಿರಲು ಹೀಗೆ ಇನ್ನೊಬ್ಬ ಮಾತನಾಡಬೇಕಂತೆ! ಬಸ್ ವೇಗವಾಗಿಯೇ— ಸುಮಾರು ೬೦ ಮೈಲುಗಳ ವೇಗವಿರಬಹುದು— ಮಾರ್ಗ ಕ್ರಮಿ



ಸುತ್ತಿತ್ತು.

ನನಗೂ ಗು.ರವರಿಗೂ ಸ್ವಲ್ಪವೂ ನಿದ್ದೆಯಿಲ್ಲ. ಬಸ್ಸಿನ ಮುಂದಿನ ದೀಪಗಳು ಪ್ರಕಾಶಮಾನವಾಗಿದ್ದು ಬಸ್ಸಿನ ಮುಂದೆ ಹಾಕಿದ್ದ ದೊಡ್ಡ ಗಾಜಿನಿಂದ ದಾರಿ ಸ್ಪಷ್ಟವಾಗಿ ಕಾಣುತ್ತಿತ್ತು. ಹಾವೇರಿ ಬಿಟ್ಟು ಹದಿನೈದು ನಿಮಿಷಗಳಾಗಿತ್ತು. ಇದ್ದಕ್ಕಿದ್ದಂತೆ ಒಬ್ಬ ಮನುಷ್ಯ ಬಸ್ಸಿನ ಮುಂದೆ, ರಸ್ತೆಯ ಮಧ್ಯೆ, ಎಡಗಡೆಯಿಂದ ಬಲಗಡೆಗೆ ಓಡಿ ಬಂದುಬಿಟ್ಟ. ಬಹುಶಃ ಆತನು ಬಸ್ಸನ್ನು ನಿಲ್ಲಿಸಲು ಹೀಗೆ ಮಾಡಿರಬಹುದು. ಎಡಗಡೆ ಒಂದು ಲಾರಿ (ಟ್ರಕ್) ನಿಂತಿತ್ತು. ಎದುರಿಗೆ ಬಂದವನನ್ನು ತಪ್ಪಿಸಲು ಬಸ್ಸು ಮತ್ತಿಷ್ಟು ಬಲಕ್ಕೆ ಹೋಯಿತು. ಅಷ್ಟೇ! ಇದ್ದಕ್ಕಿದ್ದಂತೆ ನಾನು ನೋಡಿದ್ದು ದಾರಿಯನ್ನಲ್ಲ, ಮರವನ್ನು. ಆ ಮನುಷ್ಯ ಎಡಗಡೆಗೆ ತಪ್ಪಿಸಿಕೊಂಡಿದ್ದನಾದರೂ ಬಸ್ಸಿನ ಎಡಭಾಗ ಅವನಿಗೆ ತಗುಲಿ ಅವನನ್ನು ಎತ್ತಿಹಾಕಿತ್ತು. ಆ ಮರಕ್ಕೆ ಬಸ್ಸು ಢಿಕ್ಕಿ ಹೊಡೆಯುತ್ತದೆ ಎನಿಸಿತ್ತು. ಆದರೆ ಹಾಗೇನೂ ಆಗಲಿಲ್ಲ; ನಿಧಾನವಾಗಿ ಬಲಗಡೆಗೆ ಹೊರಳಿ ಬಿತ್ತು. ನೋಡುತ್ತಿದ್ದಂತೆಯೇ ನನ್ನ ಎಡಗಡೆ ಇದ್ದ ಬಾಗಿಲು, ಕಿಟಕಿ, ಇಬ್ಬರು ಕುಳಿತಿದ್ದ ಆಸನಗಳು ಮೇಲ್ಗಡೆ ಬಂದವು. ನಾ.ರವರು ಕೆಳಗೆ, ಅವರ ಮೇಲೆ ಗು. ಹಾಗೂ ಅವರ ಮೇಲೆ ನಾನು! ನನ್ನ ಪಕ್ಕದಲ್ಲಿ ಆ ತುದಿಗೆ ಬಾಗಿಲಿತ್ತಾದ್ದರಿಂದ ನನ್ನ ಮೇಲೆ ಯಾರೂ ಒರಗಲಿಲ್ಲ.

ಇದೆಲ್ಲಾ ಒಂದೇ ಕ್ಷಣದಲ್ಲಿ ನಡೆಯಿತು. ನನ್ನಂತೆಯೇ. ಗು.ರವರೂ ಅಪ್ರತಿಭರಾದರು! ಆ ಕ್ಷಣದಲ್ಲಿ ಕಿರುಚಿದೆ, "ಗು, ಬಸ್ ಬಿತ್ತು!" ಎಂದು! ಒಂದು ಕ್ಷಣದ ಬಳಿಕ, "ಏನಾದರೂ ಆಗಿದೆಯೇ? ಪೆಟ್ಟು ತಾಗಿದೆಯೆ?" ಎಂದು ಕೇಳಿದೆ. "ಇಲ್ಲ"ವೆಂದರು. ನಾನು ಮುಂದಿನ ಆಸನದ ಹಿಂದಿನ ಕಬ್ಬಿಣದ ಕಂಬಿಯನ್ನು ಹಿಡಿದು ನಿಂತುಕೊಂಡೆ. ಗು.ರವರು ಮೊದಲು ನಾ.ರವರ ಮೇಲೆ ಬಿದ್ದು ಕೂಡಲೇ ಚೇತರಿಸಿಕೊಂಡು ಎದ್ದರು. ನಾ.ರವರು ಇನ್ನೂ ನಿದ್ದೆಯ ಗುಂಗಿನಲ್ಲಿದ್ದರು. ಎರಡು ಸಲ ಕೂಗಿ ಉತ್ತರ ಬಾರದಿದ್ದಾಗ ಹೆದರಿದೆವು. ಆದರೆ ಅವರು ನಿಧಾನವಾಗಿ ಮೆಲ್ಲಗೆ ನುಡಿದರು, "ಏನೂ ಆಗಿಲ್ಲ." ಬಲಗಡೆ ಕಿಟಕಿಯನ್ನು ಸ್ವಲ್ಪ ತೆರೆದಿದ್ದರು, ಸಿಗರೇಟಿನ ಹೊಗೆ ಹೋಗಲೆಂದು. ಅದರ ಮೂಲಕ ಹೊರಕ್ಕೆ ಕೈ ಚಾಚಿದಾಗ ಅವರಿಗೆ ಮಿದುವಾದ, ಹಸಿಯಾದ ಮಣ್ಣು ಮೆತ್ತಿತಂತೆ. ಆಗಲೇ ಅವರಿಗೆ ಪರಿಸ್ಥಿತಿಯ ಅರಿವಾಗಿದ್ದು!

ಇಷ್ಟರಲ್ಲಿ ಬಸ್ಸಿನಲ್ಲಿ ಹಾಹಾಕಾರವೆದ್ದಿತು. ಬಸ್ಸಿನ ಮುಂಭಾಗ ಸ್ವಲ್ಪ ಇಳಿಜಾರಿನಲ್ಲಿದ್ದು ಹಿಂದಿನ ಭಾಗ ಮೇಲಕ್ಕೆದ್ದಿತು. ಆ ಭಾಗ ಒಂದು ಮರದ ರೆಂಬೆಯನ್ನು ಮುರಿದು ಅದರ ಮೇಲೆ ಕುಳಿತಿತ್ತು. ಆದ್ದರಿಂದ ಹಿಂದಿನ ಐದಾರು ಸಾಲುಗಳಲ್ಲಿದ್ದ ಆಸನಗಳೂ ಮುಗುಚಿಕೊಂಡಂತಾಗಿದ್ದವು. ಬಲ ತುದಿಯಲ್ಲಿ ಕುಳಿತವರ ಅವಸ್ಥೆಯಂತೂ ಹೇಳತೀರದು. ಮುಂದಿನ ಆಸನಗಳಿಗೆ ತಾಗಿ ಅದರಿಂದ ಉಂಟಾದ ಪೆಟ್ಟಿನ ಜೊತೆಗೆ, ಎಡ ಪಕ್ಕದಲ್ಲಿದ್ದ ಮನುಷ್ಯರೂ ಸಾಮಾನುಗಳೂ ಅವರ ಮೇಲೆ ಬಿದ್ದು ಅವರು ಮೇಲಕ್ಕೇಳಲು ಸಹ ಸಾಧ್ಯವಾಗದೇ ಹೋಗಿತ್ತು. ಕಿಟಕಿಯ ಗಾಜುಗಳು ಚೂರುಚೂರಾಗಿ ಅವು ಇನ್ನೊಂದು ಕಡೆ ಚುಚ್ಚುತ್ತಿದ್ದವು. ನರಳಿಕೆ, ಅಳು, ಗಾಬರಿಯಿಂದಾದ ಕೂಗಾಟ ಇವುಗಳು ಎಲ್ಲರನ್ನು ಕಂಗಾಲಾಗಿ ಮಾಡಿತ್ತು. ಅವರೆಲ್ಲಾ ನಿದ್ರೆಯ ಗುಂಗಿನಲ್ಲಿದ್ದರು.

ದೈವವಶಾತ್ ವಾಹನ ಅಪಘಾತಕ್ಕೀಡಾಗುವಾಗ ಚಾಲಕ ಒಳಗಿನ ದೀಪಗಳನ್ನು ಉರಿಸಲು ಸ್ವಿಚ್ ಒತ್ತಿದ್ದ. ಅದು ಒಳಗಡೆ ಬೆಳಕನ್ನು ಚೆಲ್ಲಿತ್ತು. ಚಾಲಕ ತನ್ನ ಮುಂದಿನ ದೊಡ್ಡ ಗಾಜನ್ನು ಒಡೆದು ಅದರ ಮೂಲಕ ಹಾದು ಹೋದ. ಅನಂತರ ಆ ಗಾಜನ್ನು ಸಂಪೂರ್ಣವಾಗಿ ತೆಗೆದು ಎಲ್ಲರೂ ಅದರ ಮೂಲಕವೇ ಹೊರಗೆ ಬರುವಂತೆ ಕೂಗಿಕೊಂಡ. ಮಳೆ ಬಿದ್ದಿದ್ದು ಅಲ್ಲೆಲ್ಲಾ ಕೆಸರಾಗಿತ್ತು. ತುಂತುರು ಹನಿ ಬೀಳುತ್ತಲೇ ಇತ್ತು. ೩–೪ ಜನರು ಇಳಿದ

ಬಳಿಕ ನಾನು ನನ್ನ ತೊಗಲಿನ ಕೈಚೀಲವನ್ನು ಹುಡುಕಿ ತೆಗೆದುಕೊಂಡು ಹೊರಗೆ ಬಂದೆ. ಅದರಲ್ಲಿ ಹೆಚ್ಚಿನ ಹಣವಿತ್ತೆಂದು ಅದನ್ನು ಕಾಪಾಡುವ ಮುಂಜಾಗ್ರತೆ!

ಹೊರಗೆ ಬಂದಾಗಲೇ ನನಗೆ ದೇವರಲ್ಲಿ ನಂಬಿಕೆ ಬಂದಿದ್ದು. ಮೂರೇ ಗಜಗಳು ಮುಂದೆ ಹೋಗಿದ್ದರೆ ಅಲ್ಲಿ ದೊಡ್ಡ ಹೊಂಡವೊಂದಿದ್ದು ನಮ್ಮ ವಾಹನ ಅದರಲ್ಲಿ ಮುಗುಚುತ್ತಿತ್ತು. ಬಾಗಿಲ ಬಳಿ ಏಜೆಂಟ್ ಕುಳಿತಿದ್ದನಲ್ಲ. ಆತನು ಬಸ್ ಪಕ್ಕಕ್ಕೆ ಉರುಳಿದ ಕೂಡಲೇ ಬಾಗಿಲು ತೆಗೆದು ಹೊರಗೆ ಧುಮುಕಿದ. ಬಸ್ ಇನ್ನೂ ಉರುಳುತ್ತಲೇ ಇತ್ತು, ನಿಧಾನವಾಗಿ. ಅವನು ನೆಲವೆಂದು ಭ್ರಮಿಸಿದ್ದು ಹಳ್ಳವಾಗಿ ಮೇಲಿಂದ ಕೆಸರಿನಲ್ಲಿ ಬಿದ್ದ, ಹಾಗೇ ಮಲಗಿದ. ನಾನೂ ಆ ಮೂಲಕ ಹೋಗೋಣವೆಂದು ನಂತರ ನೋಡಿದರೆ—ಅಸಾಧ್ಯ. ಹಾಗೆ ಮಾಡಿದಲ್ಲಿ ನಾನು ಬಸ್ಸಿನ ಕೆಳಭಾಗಕ್ಕೆ ಉರುಳುವ ಸಾಧ್ಯತೆ ಇತ್ತು. ಆದ್ದರಿಂದ ಮುಂದುಗಡೆಯಿಂದಲೇ ಬಂದೆ. ಅವನಿನ್ನೂ ಹಾಗೆಯೇ ಮಲಗಿದ್ದ. "ಏಟು ಬಿತ್ತೇ? ಏನಾಗಿದೆ?" ಅಂದೆ. "ಏನೂ ಇಲ್ಲ," ಎಂದ.

ನನ್ನ ಹಿಂದೆಯೇ ಗು.ರವರು, ನಾ.ರವರು ಹೊರಗೆ ಬಂದರು. ಅವರ ಕೈಚೀಲಗಳೂ ಬಂದವು. ಆದರೆ ನನ್ನದಿನ್ನೂ ಸಾಮಾನುಗಳಿದ್ದುವಲ್ಲ! ಪುನಃ ಒಳಗೆ ಹೋದೆ. ಆ ವೇಳೆಗೆ ಬಸ್ಸಿನ ಕ್ಲೀನರ್ (?) ಒಳಗಿನವರನ್ನು ಒಬ್ಬೊಬ್ಬರನ್ನೇ ಮೇಲಕ್ಕೆತ್ತಿ ಹೊರಗೆ ತರುವುದರಲ್ಲಿ ನಿರತನಾಗಿದ್ದ. ನನ್ನ ಸೂಟ್‌ಕೇಸ್ ತೆಗೆದುಕೊಂಡೆ. ಬಟ್ಟೆಯ ಕೈಚೀಲಕ್ಕಾಗಿ ಹುಡುಕಿದೆ. ಅದು ಅಷ್ಟರಲ್ಲಿ ಸಹಪ್ರಯಾಣಿಕರೊಬ್ಬರ ಕೈ-ಸೇರಿತ್ತು. ಅದರಲ್ಲಿ ಧಾರವಾಡದ ನೆನಪಿಗಾಗಿ ಕೊಂಡ ಆ ಭಾಗದ 'ತಂಬಿಗೆ', ಹೊಸದು, ಇತ್ತು. ಅವರಿಗೆ ಅದು ನನ್ನದೆಂದು ಹೇಳಿ ಚೀಲವನ್ನು ಅವರಿಂದ ಪಡೆದೆ. ಸೂಟ್‌ಕೇಸ್‌ನಲ್ಲಿ ಹೊಸ 'ತಾಟು'ಗಳಿದ್ದುವು. ಸಾಕಷ್ಟು ಭಾರವನ್ನು ಹೊತ್ತು ಕೆಸರಿನ ಬಯಲನ್ನು ಹತ್ತಿ ಮೇಲೆ ರಸ್ತೆಗೆ ಬಂದೆ. ಅಲ್ಲಿ ಒಂದು ಕಡೆ ಅವನ್ನಿಟ್ಟು ಮತ್ತೆ ಬಸ್ಸಿಗೆ ಹಿಂತಿರುಗಿದೆ, ನನ್ನ ಎರಡು ಮೂಟೆಗಳಿಗಾಗಿ.

ಈ ವೇಳೆಗೆ ಬಸ್ಸಿನ ಹಿಂಭಾಗದಲ್ಲಿದ್ದ ಪ್ರಯಾಣಿಕರು ಹೊರಗೆ ಬಂದಿದ್ದರು. ಒಬ್ಬರ ತಲೆಯಿಂದ ರಕ್ತ ಧಾರಾಕಾರವಾಗಿ ಸುರಿಯುತ್ತಿತ್ತು. ಅವರನ್ನು ಕಷ್ಟಪಟ್ಟು ಹೊರಗೆ ತಂದಿದ್ದರು. ಸುರಿಯುತ್ತಿದ್ದ ರಕ್ತವನ್ನು ಒರೆಸಲು ಬೇರೆ ಏನೂ ಸಿಗದೆ, ಆತನ ಭುಜದ ಮೇಲಿದ್ದ ವಸ್ತ್ರವನ್ನು ತೆಗೆದುಕೊಂಡ ಕ್ಲೀನರ್. ಆ ನೋವಿನಲ್ಲಿಯೂ ಆ ಹಿರಿಯರು ಕೂಡಲೇ, "ಅಯ್ಯೋ, ಅದು ಬೇಡಪ್ಪಾ, ರಕ್ತ ಆಗುತ್ತೆ," ಎಂದು ನರಳಿದರು. ಸಹಾಯಕನಿಗೆ ಬಂದ ಕೋಪ ಅಷ್ಟಿಷ್ಟಲ್ಲ. "ನಿಮ್ಗೇಟು ಬಿಗಾಕಿಲ್ಲ ಬುದ್ದೀ, ಇತ್ಲಾಗ್ತನ್ನೀ ಬಟ್ಟೆವಾ, ಒರಿಸ್ಬುಡ್ತೀನಿ. ಪ್ರಾಣಾ ಹೋಯ್ತಾ ಇದ್ರೆ ಟವಲ್ಲಿಗ್ಬಡ್ಕೋತದೆ ಇವಯ್ಯಾ!" ಎಂದ ಆತ, ಶುದ್ಧ ಮೈಸೂರು ಭಾಷೆಯಲ್ಲಿ!

ಇನ್ನೊಬ್ಬರು, "ಅಯ್ಯೋ, ನನ್ನ ಚಪ್ಲೀಪ್ಪಾ, ಒಂದೇ ಇದೆ, ಇನ್ನೊಂದ್ಕಾಣೋಲ್ಲಾ—ಅಯ್ಯೋ ಸ್ವಲ್ಪ ನೋಡಿ ದೇವರೇ, ಎಲ್ಲಿದ್ಯೋ!" ಎಂದರು. ಬಿಜಾಪುರದವರೊಬ್ಬರು, "ನನ್ನಬುತ್ತೀ ಗಂಟು ಹೋಗ್ಯೈತೀ, ಟೊಪ್ಪಿಗಿ ಸುದ್ದಾ ಕಾಣವಲ್ಲ್ರೀ," ಎಂದು ಗೋಳಿಡುತ್ತಿದ್ದರು. ಶಿವಮೊಗ್ಗದವರೊಬ್ಬರಿಗೆ ನಿಜವಾಗಿಯೂ ಹೆಚ್ಚಿನ ಪೆಟ್ಟಾಗಿತ್ತು. ಎಡಭುಜದ ಮೂಳೆ ಮುರಿದಿತ್ತೇನೋ, ಆ ಭಾಗ ಅಲುಗಾಡಿಸಲು ಸಹ ಆಗುತ್ತಿರಲಿಲ್ಲ. ಗು.ರವರು ಸರಸರ ಬಂದರು. "ಸೀಟಿನ ಹಿಂದೆ ಸಣ್ಣ ಚೀಲ ಕಟ್ಟಿದ್ದೆ," ಎಂದರು. ಒಳಗೆ ಹೋಗಿ ಅದನ್ನು ತಂದರು. ಆಗ ನೆನಪಾಯಿತು, ಧಾರವಾಡ ಬಿಡುವಾಗ ಮಿತ್ರರು ಫೇಡೆಯನ್ನು ಕೊಟ್ಟಿದ್ದರು, ರ.ರವ-ರಿಗೆ ತಲುಪಿಸಲು ಎಂದು. ಸರಿ, ಅದೂ ಸಿಕ್ಕಿತು. ಇಷ್ಟರಲ್ಲಿ ಕೆಳಗೆ ಬಿದ್ದಿದ್ದ ಏಜೆಂಟ್ ಯಾವ

ಮಾಡುವಲ್ಲೇ ಇದ್ದ, ಬರುತ್ತಿದ್ದ ಲಾರಿ-
ಯೊಂದನ್ನು ನಿಲ್ಲಿಸಿ, "ಏನಾದರೂ ಏರ್ಪಾಡು
ಮಾಡ್ತೇನೆ" ಅಂತ ಹೇಳಿ ಜಾರಿಕೊಂಡಿದ್ದ—
ಹಣದ ಸಮೇತ. ಅವನಂತೆಯೇ ಉಳಿದ ಇಬ್ಬರೂ
ಪಲಾಯನ ಮಾಡಿದ್ದರು. ಬಸ್ಸಿನ ಇನ್ನೊಬ್ಬ
ಚಾಲಕ ಮಾತ್ರ ಅಲ್ಲಿಯೇ ಇದ್ದ.

ಈ ವೇಳೆಗೆ ಅಲ್ಲಿನ ಮಳೆಯ ವಾತಾವರಣ,
ನರಳಾಟಗಳು, ಕತ್ತಲೆಗಳಿಂದ ದಿಙ್ಮೂಢನಾಗಿದ್ದ
ನಾನು ಹೊರಗೆ ತಂದಿಟ್ಟಿದ್ದ ನನ್ನ ಮೂಟೆಗಳ
ಮೇಲೆ ತಣ್ಣಗೆ ಕುಳಿತುಬಿಟ್ಟೆ. ಅನೇಕ ನಿಮಿಷ
ಗಳ ವರೆಗೆ ನನ್ನ ತಲೆ ಖಾಲಿಯಾಗಿತ್ತು. ಗು.
ಮತ್ತು ನಾ.ರವರು ಮಾತ್ರ ಸಹಪ್ರಯಾಣಿಕರಿಗೆ
ಸಹಾಯ ಮಾಡುವುದರಲ್ಲಿ ತೊಡಗಿದ್ದರು. ಕೆಳಗೆ
ಬಿದ್ದಿದ್ದ, ಅಪಘಾತಕ್ಕೆ ಕಾರಣನಾಗಿದ್ದ ಬಿರಿಯು-
ನನ್ನು ಪಕ್ಕಕ್ಕೆ ಎತ್ತಿ ಮಲಗಿಸಿದರು. ಹೋಗಿ
ಬರುವ ವಾಹನಗಳನ್ನು ನಿಲ್ಲಿಸಿ ಗಾಯಾಳು
ಗಳನ್ನು ಹೇಗಾದರೂ ಒಂದು ಊರಿಗೆ, ಅದು
ಯಾವ ದಿಕ್ಕಿನಲ್ಲೇ ಇರಲಿ, ತಲುಪಿಸಲು
ಯತ್ನಿಸುತ್ತಿದ್ದರು. ಇದು ಅಲ್ಲಿದ್ದ ಅನೇಕರ
ಯೋಚನೆಯೂ ಆಗಿತ್ತು. ಹಿಂದಿನಿಂದ ಬರು
ತ್ತಿದ್ದ ಬೇರೆ ಲಗ್ಜುರಿ ಬಸ್ಸಿನವರು ಆ ಜವಾ-
ಬ್ದಾರಿಯನ್ನು ಹೊರಲು ಸಿದ್ಧರಿರಲಿಲ್ಲ. ಕೊನೆಗೆ
ಹಾವೇರಿಗೆ ಹೊರಟಿದ್ದ ಮಹಾತ್ಮರೊಬ್ಬರು
ತಮ್ಮ ಕಾರನ್ನು ನಿಲ್ಲಿಸಿ ಅದರಲ್ಲಿ 'ಆ' ಮನುಷ್ಯ
ನನ್ನೂ ಇನ್ನೂ ಇಬ್ಬರು ಗಾಯಾಳುಗಳನ್ನೂ
ಕಳಿಸಿದರು. ಅಲ್ಲದೆ ಎದುರಲ್ಲಿ ಬರುತ್ತಿದ್ದ
ಬಸ್ಸನ್ನು ನಿಲ್ಲಿಸಿ, ಅದರ ಚಾಲಕ ಮುಂತಾದವ-
ರೊಡನೆ ಜಗಳವಾಡಿ ಹದಿನೈದಿಪ್ಪತ್ತು ಜನ
ಅದರಲ್ಲಿ ಹೋಗುವ ಏರ್ಪಾಡು ಮಾಡಿದರು.
ಅವರ ಕಾರು ಇನ್ನೂ ಹಿಂತಿರುಗಿರಲಿಲ್ಲ.

ಅಷ್ಟರಲ್ಲಿ ಪುನಃ ದೇವರು ನಮ್ಮ ಸಹಾಯಕ್ಕೆ
ಬಂದ. ಹುಬ್ಬಳ್ಳಿಯ ಸರ್ಕಾರಿ ಬಸ್ ಕಾರ್ಯಾ-
ಗಾರದಲ್ಲಿ ರಿಪೇರಿಗಾಗಿ ಬಂದಿದ್ದು 'ಕಂಡೆಮ್'
ಆದ ಬಳಿಕ ಸ್ವಸ್ಥಾನವಾದ ಹಾಸನದ ಡಿಪ್ಪೋಗೆ
ಹಿಂತಿರುಗುತ್ತಿದ್ದ ಒಂದು ಖಾಲಿ ಬಸ್ ಅಲ್ಲಿಗೆ
ಬಂತು. ನಮ್ಮವರು ಇದನ್ನು ತಡೆದರು. ಪರಿಸ್ಥಿತಿ
ಯನ್ನು ವಿವರಿಸಿ ಹಾಸನದ ವರೆಗಾದರೂ
ಪ್ರಯಾಣಿಕರನ್ನು ಕರೆದೊಯ್ಯಬೇಕೆಂದು
ಪ್ರಾರ್ಥಿಸಿದರು. ಬಸ್ಸಿನಲ್ಲಿದ್ದುದು ಚಾಲಕ
ನೊಬ್ಬನೇ. ಆತ ಸ್ವಲ್ಪ 'ನಿಯಮ' ಪ್ರಭಾವ-
ಕ್ಕೊಳಗಾಗಿದ್ದಂತೆ ನನಗೆ ತೋರಿತು. ಆತ
ಒಪ್ಪಿದ. ನಮ್ಮ ಸಾಮಾನುಗಳನ್ನೆಲ್ಲಾ ಕೂಡಲೇ
ಬಸ್ಸಿನೊಳಗೆ ಹಾಕಿದೆವು. ಈಗ ಉಳಿದವರು
ನಾವು ಸುಮಾರು ೨೦ ಜನ. ಇಬ್ಬರು
ಹೆಂಗಸರು. ಸಣ್ಣ ಸಣ್ಣ ಮಕ್ಕಳಿರಲಿಲ್ಲ. ಆದ್ದ
ರಿಂದ ಸ್ವಲ್ಪ ಅನುಕೂಲವಾಗಿಯೇ ಕುಳಿತು-
ಕೊಳ್ಳಲು ಸಾಧ್ಯವಾಯಿತು.

ರಾತ್ರಿ ೧೨-೩೦ ಕ್ಕೆ ಬಸ್ ಹೊರಟಿತು.
ನಾನು ನನ್ನ ಮಿತ್ರರೊಡನೆ ಮುಂದುಗಡೆ ಕುಳಿ-
ತಿದ್ದೆ. ಕೊನೆಯಲ್ಲಿದ್ದ ಉದ್ದನೆಯ ಆಸನ
ಖಾಲಿಯಾಗಿತ್ತು. ಸ್ವಲ್ಪ ನಿದ್ದೆ ಮಾಡೋಣ—
ಕಾಲಾದರೂ ಚಾಚಿ ಮಲಗೋಣ—ಎಂದು ಅಲ್ಲಿ
ಹೋದೆ. ಕಾಲು ಚಾಚಿದೆ. ಸುಮಾರು ಹದಿ-
ನೈದು ನಿಮಿಷಗಳಾಗಿರಬಹುದು. ಇದ್ದಕ್ಕಿದ್ದಂತೆ
ನನ್ನ ಇಡೀ ದೇಹ ಒಮ್ಮೆ ಮೇಲಕ್ಕೆ ಹಾರಿತು.
ಕೊನೆಯ ಆಸನದಲ್ಲಿದ್ದೆನಾಗಿ ರಸ್ತೆಯಲ್ಲಿನ
ತಗ್ಗೊಂದರ ಮೇಲೆ ಬಸ್ ವೇಗವಾಗಿ ಚಲಿಸಿ
ದುದರ ಪರಿಣಾಮವಿದು. ಸರಿ, ಹೀಗಿದ್ದ
ಮೇಲೆ ಮಲಗಿಕೊಳ್ಳುವ ಮೊದಲೇ ಜಾಗ-
ರೂಕನಾಗಿರುವುದು ಲೇಸೆಂದು ಆ ಸ್ಥಳ ಬಿಟ್ಟು
ಮುಂದಕ್ಕೆ, ನಾನು ಮೊದಲು ಕುಳಿತಿದ್ದ
ಸ್ಥಳಕ್ಕೇ ಹಿಂತಿರುಗಿದೆ.

ರಾಣೆಬೆನ್ನೂರಲ್ಲಿ 'ಚಹಾ'ಗೆಂತ ಅರ್ಧ
ಘಂಟೆ ನಿಲ್ಲಿಸಿದ, ಚಾಲಕ. ಅವನಿಗೆ ರಾತ್ರಿಯ
ಪ್ರಯಾಣದ ರೂಢಿಯಿರಲಿಲ್ಲವೇನೋ. ನಾವೆಲ್ಲಾ
ಇಲ್ಲದಿದ್ದರೆ ಅಲ್ಲೇ ಎಲ್ಲಾದರೂ ನಿಲ್ಲಿಸಿ ನಿದ್ದೆ
ಮಾಡುತ್ತಿದ್ದ. ಆದರೆ ನಮ್ಮಲ್ಲಿ [illegible]
ನಾಲ್ಕಾರು ಜನ ತೀವ್ರ ಗಾಯಾಳುಗಳಿದ್ದರು.
ಅವರು, "ಬೇಗಾದರೂ ಹೋಗಿದ್ರಿ," [illegible]
ದರು. [illegible]

ಕ್ರಮೇಣ ಎಲ್ಲರಿಗೂ ಧೈರ್ಯ ಬಂದಿತು. ಈಗ ನಮ್ಮದು **non stop** ಬಸ್ಸಾಗಿತ್ತು. ಗಾಡಿ ವೇಗವಾಗಿ ಮಾರ್ಗ ಕ್ರಮಿಸುತ್ತಿತ್ತು. ಭದ್ರಾವತಿ ದಾಟಿದಾಗ ಬೆಳಗು ಮುಂಜಾವು. ಊರ ಹೊರಗೆ ಭದ್ರಾ ಕಾಲುವೆಯಲ್ಲಿ ನಾವು ಕೆಲವರು ಪ್ರಾತರ್ವಿಧಿಗಳನ್ನು ತೀರಿಸಿಕೊಂಡೆವು. ನಂತರ ಅರಸೀಕೆರೆ. ಆ ವೇಳೆಗೆ ಏಳು ಘಂಟೆ. ಈ ಆತಂಕಗಳಲ್ಲಿಯೂ ಗಾಡಿಯಲ್ಲಿ ಒಮ್ಮೊಮ್ಮೆ ನಗೆಯ ಮಿಂಚು ಸುಳಿಯುತ್ತಿತ್ತು. ಸಹ ಪ್ರಯಾಣಿಕರು ಹಿಂದೆ ನಡೆದ ಅಪಘಾತವನ್ನು ಮೆಲುಕು ಹಾಕುತ್ತಾ, "ಏನ್ಸಾರ್, ಬಸ್ ಹತ್ತಿದಾಗ ಬಾಗಿಲು, ಕಿಟಕಿ ಪಕ್ಕಕ್ಕಿತ್ತು. ಕಣ್ಬಿಟ್ಟರೆ ಎಲ್ಲಾ ಮೇಲೆ ಬಂದ್ಬಿಟ್ಟಿದೆ. ನನ್ನ ಮೇಲೆ ಮೂಟೆ ಒಂದು. ಚಂದ್ರಲೋಕಕ್ಕೆ ಹೋಗ್ತಾ ಇದ್ದೀನಿ ಅನ್ನಿಸ್ತು ಸಾರ್," ಎಂದಾಗ ಎಲ್ಲರೂ ನಕ್ಕರು.

ಸರ್ಕಾರಿ ಬಸ್ಸಿನ ಚಾಲಕ ಒಳಗೆ ಇನ್ನೊಂದು ತುದಿಯಲ್ಲಿ ಮಲಗಿದ್ದನಲ್ಲ. ಒಂದು ಸಲ ಬಸ್ ಜೋರಾಗಿ ಪಕ್ಕಕ್ಕೆ ತಿರುಗಿದಾಗ ಅವನು ಅಲ್ಲಿಂದ ತಳ್ಳಲ್ಪಟ್ಟು 'ಧಡ್' ಎಂದು ಮುಂದಿನ ಎಂಜಿನ್ ಮೇಲೆ ಬಿದ್ದ. ಅವನ ಮುಖದಲ್ಲಿ ಆಗ ಕಂಡ ಗಾಬರಿಯನ್ನು ನೋಡಿ ಒಳಗಿದ್ದ ನಮಗೆ ನಗೆ; ಮರುಕ ಕೂಡ.

ಅರಸೀಕೆರೆಯಲ್ಲಿ ಕಾಫಿ. ಹಾಸನ ಸುಮಾರು ೧೦ ಘಂಟೆಗೆ. ನನಗೂ ನನ್ನ ಮಿತ್ರರಿಗೂ ವಿಪರೀತ ಹಸಿವಾಗಿತ್ತು. ಹಾಸನದಲ್ಲಿ breakfast. ಅನಂತರ ಮೈಸೂರಿಗೆ ಬಸ್ ಯಾವುದಿದೆ ಎಂತ ವಿಚಾರಿಸಿದೆವು. ಕೂಡಲೇ ಒಂದು ಬಸ್, ನಂತರ ೧೨ ಘಂಟೆಗೆ ಇನ್ನೊಂದು ಎಂದರು. ಸುಮ್ಮನೆ ಅಲ್ಲಿ ಕುಳಿತು ಕಾಯುವ ಬದಲು ಬೇಗನೇ ಊರನ್ನು ಸೇರೋಣವೆಂದು ನಮ್ಮ ಆಸೆ. ಅದಕ್ಕಾಗಿ ಮೊದಲ ಬಸ್ಸನ್ನೇ ಹತ್ತಿದೆವು. ಆದರೆ ಅದು ಹೊರಟ ಲಕ್ಷಣ, ಕೈ ತೋರಿದಲ್ಲಿ ನಿಲ್ಲಿಸುತ್ತಿದ್ದ ವೈಶಿಷ್ಟ್ಯ, ಅದರ ವೇಗ, ಇವುಗಳನ್ನು ಕಂಡು ನಮಗಾದ ನಿರಾಶೆ ಅಷ್ಟಿಷ್ಟಲ್ಲ. "ಹಳ್ಳಿ ಮೈಸೂರು" ಎಂಬ ಹೆಸರನ್ನು ನನ್ನ ವಿದ್ಯಾರ್ಥಿ ದೆಸೆಯಿಂದಲೂ ಕೇಳಿದ್ದೆ. ಆ ಹಳ್ಳಿಯನ್ನು ಕಾಣುವ ಭಾಗ್ಯ ಬಂದದ್ದು ಮಾತ್ರ ಈಗಲೇ. ಅಲ್ಲಿ ನಾವು ತಿಂದ ಹಲಸಿನ ತೊಳೆಗಳು ಮಾತ್ರ ಸಿಹಿಯಾಗಿದ್ದವು. ಕೆ. ಆರ್. ನಗರ! ಇಲ್ಲಿ ನಾವು ಇಳಿಯುವ ವೇಳೆಗೆ ಹಾಸನದಿಂದ ೧೨ ಘಂಟೆಗೆ ಹೊರಟ ಬಸ್, ಫ್ರೆಸ್ ಎಂದು ನಮ್ಮನ್ನು ದಾಟಿಕೊಂಡು ಹೋಗಿಬಿಡ್ತು. ಸರಿ, ಎದುರಿಗೆ ಕಂಡ ಹೋಟಲಿಗೆ ನುಗ್ಗಿದೆವು. ಸುಮಾರು ಮೂರು ಘಂಟೆ ಆಗಿತ್ತು. ಕೆಟ್ಟ ಹಸಿವು. ವಡೆ, ದೋಸೆ ಹೇಳಿದೆವು. ವಡೆ ಮುಗಿಸಿದೆವು. ದೋಸೆ ಇನ್ನೂ ಬಂದಿರಲಿಲ್ಲ—ಅಷ್ಟರಲ್ಲಿ ದೂರದಲ್ಲಿ ನಿಂತಿದ್ದ ನಮ್ಮ ಬಸ್ ಹೊರಟೇಬಿಟ್ಟಿತು. ಅದುವರೆಗೂ ಇಲ್ಲದ ಅವಸರ ಆ ಡ್ರೈವರ್‌ಗೆ ಆಗಲೇ ಬರಬೇಕೆ? ಆ ಬಿಸಿಬಿಸಿ ದೋಸೆ ಬರುವುದಕ್ಕೂ ಬಸ್ ಶಂಖಪಾದ್ಯ ಮಾಡುವುದಕ್ಕೂ ಸರಿಹೋಗಿತ್ತು. ಅದನ್ನು ಹೇಗೆ ತಿಂದೆವೋ ಏನೋ—ಬಿಡಲೂ ಇಷ್ಟವಿಲ್ಲ. ಬಿಲ್ ಚುಕಾಯಿಸಿ ಓಡಿದೆವು.

ದೂರದಿಂದ ಮೈಸೂರು ಪಟ್ಟಣ ಕಂಡಾಗ ನನಗೆ ದೊಡ್ಡದೊಂದು ಯಾತ್ರೆ ಮುಗಿಸಿ ಬಂದಷ್ಟು ಸಂತೋಷವಾಗಿತ್ತು—ಪುನರ್ಜನ್ಮ ಪಡೆದೇ ಬಂದಿದ್ದೆವು. ನಾಲ್ಕು ಬಸ್, ಐವರು ಡ್ರೈವರ್‌ಗಳು. ಇನ್ನೂ ಮೈನವಿರೇಳುತ್ತೆ ಆ ರಾತ್ರಿ—ಆ ಹಗಲು ನೆನಸಿದಾಗಲೆಲ್ಲಾ. ☆

ಸಚ್ಚಾರಿತ್ರ್ಯವಿಲ್ಲದವನ ಕೇವಲ ಬೌದ್ಧಿಕ ಜ್ಞಾನವು ಸುಗಂಧ ಪೂಸಿದ ಶವಕ್ಕೆ ಸಮಾನ.

—ಗಾಂಧೀಜಿ

# ಮೈ ಬಿಸಿಯಾಗಿದೆ? ಸ್ವಲ್ಪ ತಾಳಿ!

ಎಲ್ಲ ವೈದ್ಯಕೀಯ ಥರ್ಮಾಮೀಟರುಗಳಲ್ಲಿಯೂ ಮನುಷ್ಯ ಶರೀರದ ಸಾಮಾನ್ಯ (ನಾರ್ಮಲ್) ಉಷ್ಣತೆಯನ್ನು ನಿರ್ದೇಶಿಸುವ ಒಂದು ಕೆಂಪುಗೆರೆ ಇರುತ್ತದೆ. ಆದರೆ ಥರ್ಮಾಮೀಟರನ್ನು ನಿಮ್ಮ ನಾಲಗೆಯ ಕೆಳಗಿರಿಸಿದಾಗ ಈ ಸಾಮಾನ್ಯಕ್ಕಿಂತ ಸ್ವಲ್ಪ ಹೆಚ್ಚು ಇಲ್ಲವೆ ಕಡಿಮೆ ಉಷ್ಣತೆಯನ್ನು ತೋರಿಸಿದರೆ ಭಯಪಡಬೇಕಾಗಿಲ್ಲ. ಎಲ್ಲ ಸರಾಸರಿಗಳ ಹಾಗೆ ೯೮.೪ ಡಿಗ್ರಿಗಳ ಈ ಸಾಮಾನ್ಯವೂ ಒಂದು ಕಾಲ್ಪನಿಕ ಮರ್ಯಾದೆಯೇ. ವೈಯಕ್ತಿಕವಾಗಿ ನಿಮ್ಮ ಶರೀರದ ಸ್ವಂತ ಸಾಮಾನ್ಯ ಉಷ್ಣತೆ ಥರ್ಮಾಮೀಟರಿನ ಸಾಮಾನ್ಯಕ್ಕೆ ನಿಖರವಾಗಿ ಕೂಡಿಬರಲಿಕ್ಕಿಲ್ಲ. ಮಾನವರ ಸಾಮಾನ್ಯ ಶಾರೀರಿಕ ಉಷ್ಣತೆ ೯೭ ರಿಂದ ೯೯ ಡಿಗ್ರಿಗಳ ವರೆಗೂ ಭಿನ್ನಭಿನ್ನವಾಗಿರಬಹುದೆಂದು ಡಾಕ್ಟರರು ಹೇಳುತ್ತಾರೆ.

ಈ ಉಷ್ಣತೆಯೂ ಎಲ್ಲ ಕಾಲದಲ್ಲಿ ಸಮನಾಗಿರುವುದಿಲ್ಲ. ರಾತ್ರಿ ಎರಡರಿಂದ ಬೆಳಗಿನ ಐದು ಗಂಟೆಯ ಅವಧಿಯಲ್ಲಿ ಶರೀರದ ಉಷ್ಣತೆ ಕನಿಷ್ಠ ಮಟ್ಟವನ್ನು (೯೭ ಡಿಗ್ರಿ ಅಥವಾ ಇನ್ನೂ ಕೆಳಗೆ), ಮಧ್ಯಾಹ್ನದಲ್ಲಿ ಪರಮಾವಧಿ ಮಟ್ಟವನ್ನು (೯೯.೫ ಡಿಗ್ರಿಯ ಆಸುಪಾಸು) ಮುಟ್ಟುತ್ತದೆ.

ಮಾನವ ಶರೀರ ಒಂದು ಉಷ್ಣ ನಿಯಾಮಕ (thermostat) ಯಂತ್ರದಂತೆ ವರ್ತಿಸುತ್ತದೆ. ಶರೀರದಲ್ಲಿ ಸಾಮಾನ್ಯ ಮಟ್ಟದಲ್ಲಿರುವುದಕ್ಕಿಂತ ಹೆಚ್ಚು ಉಷ್ಣತೆ ಉತ್ಪನ್ನವಾದೊಡನೆ ಮಿದುಳು ಬೆವರಿನ ಗ್ರಂಥಿಗಳಿಗೆ ಸಂದೇಶ ಕಳಿಸಿ ಮೈ ಬೆವರುವಂತೆ ಮಾಡುತ್ತದೆ. ಬೆವರು ಶರೀರದ ಉಷ್ಣತೆಯನ್ನುಪಯೋಗಿಸಿಕೊಂಡು ಬಾಷ್ಪೀಭವನ ಹೊಂದುವುದರಿಂದ ಶರೀರದ ಉಷ್ಣತೆ ಒಂದೇ ಮಟ್ಟದಲ್ಲಿ ಉಳಿಯುತ್ತದೆ. ಶರೀರದ ಉಷ್ಣತೆ ಕಡಿಮೆಯಾಗುವ ಲಕ್ಷಣಗಳು ಕಂಡೊಡನೆ ರಕ್ತವಾಹಿನಿಗಳು ಸಂಕುಚಿತಗೊಳ್ಳುವುದರಿಂದ ಉಷ್ಣತೆ ಹೆಚ್ಚು ಪ್ರಮಾಣದಲ್ಲಿ ಹೊರಸೂಸದೆ ಶಾರೀರಿಕ ಉಷ್ಣತೆಯ ಪ್ರಮಾಣವನ್ನು ಸ್ಥಿರವಾಗಿರಿಸಲು ಸಹಾಯ ಮಾಡುವುದು.

ಉಷ್ಣತೆ ಸಮನಾಗಿರುವಂತೆ ನೋಡಿಕೊಳ್ಳುವ ಗುಣವನ್ನು ಚಿಕ್ಕ ಮಕ್ಕಳು ಸರಿಯಾಗಿ ರೂಢಿಸಿಕೊಂಡಿರುವುದಿಲ್ಲವೆಂದು ತೋರುತ್ತದೆ. ಹೀಗಾಗಿ ಅತ್ಯಲ್ಪ ಕಾರಣಕ್ಕೂ ಶಿಶುಗಳ ಶಾರೀರಿಕ ಉಷ್ಣತೆ ತಟ್ಟನೆ ಮೇಲೇರುತ್ತದೆ. ಆದ್ದರಿಂದಲೇ ೧೦೫ ಡಿಗ್ರಿಗಳ ವರೆಗೂ ಜ್ವರ ಬಂದರೂ ಅವು ಬದುಕುಳಿಯುತ್ತವೆ. ಹಾಗೆಂದ ಮಾತ್ರಕ್ಕೆ ನೀವು ಶಿಶುಗಳ ಜ್ವರವನ್ನು ಅಲಕ್ಷಿಸಬೇಕೆಂದಿಲ್ಲ.

ಪ್ರೌಢರಲ್ಲಿ ೧೦೦ ಡಿಗ್ರಿಗಳಷ್ಟು ಜ್ವರವೇರಿದರೂ ಜಾಗ್ರತೆ ವಹಿಸಬೇಕು. ೧೦೨ ಡಿಗ್ರಿ

ಜ್ವರವಿದ್ದಾಗ ಅವರಿಗೆ ಮತಿಭ್ರಮಣೆಯಾಗುವು-ದಿದೆ. ತಾಸೆರಡು ತಾಸುಗಳ ವರೆಗೆ ೧೦೬.೭ ಅಥವಾ ಅದಕ್ಕೂ ಹೆಚ್ಚು ಉಷ್ಣತೆಯಿದ್ದರೆ ಮಿದುಳಿಗೆ ಧಕ್ಕೆ ತಟ್ಟಬಹುದು. ೧೦೯ ಡಿಗ್ರಿ-ಗಳ ವರೆಗೆ ಜ್ವರವೇರಿದರೆ ರೋಗಿ ಬದುಕುವ ಸಾಧ್ಯತೆ ಇಲ್ಲವೇ ಇಲ್ಲ ಎನ್ನಬಹುದು.

ಜ್ವರ ಎಂದರೇನು? ನಿಮ್ಮ ಶರೀರ ಹೊರ ಹೊಮ್ಮಿಸುವುದಕ್ಕಿಂತ ಹೆಚ್ಚು ಉಷ್ಣತೆಯನ್ನು ಉಂಟುಮಾಡುತ್ತಿದೆ ಎಂದು. ಇದು ಶಾರೀರಿಕ ಶ್ರಮದಿಂದಾಗಬಹುದು. ಆದರೆ ನೆಗಡಿ, ಇನ್-ಫ್ಲುಯೆಂಜಾ, ನ್ಯುಮೋನಿಯ ಮೊದಲಾದ ಕ್ರಿಮಿಜನ್ಯ ರೋಗಗಳು ಕೂಡ ಶರೀರದ ಉಷ್ಣತೆಯನ್ನು ಹೆಚ್ಚಿಸುವುದುಂಟು. ಇದರಿಂದ ರೋಗಾಣುಗಳ ಸಂಗಡ ಹೋರಾಡಲು ಶರೀರಕ್ಕೆ ಸಹಾಯ ಸಿಗುತ್ತದೆ.

ಜ್ವರ ಬಂದಾಗ ಹೆಚ್ಚು ಬೆವರು ಉತ್ಪನ್ನ-ವಾಗುವುದರಿಂದ ಅದರಿಂದಾಗುವ ನೀರಿನ ನಷ್ಟ-ವನ್ನು ತುಂಬಿಕೊಳ್ಳಲು ಹೆಚ್ಚು ಪ್ರಮಾಣದಲ್ಲಿ ನೀರು ಕುಡಿಯಿರಿ. ಜ್ವರ ಬಂದಾಗ ಆಹಾರವನ್ನು ಸೇವಿಸಕೂಡದೆಂಬ ಭಾವನೆ ಸರಿಯಲ್ಲ. ಆಗ ಶರೀರದಲ್ಲಿನ ಸ್ನಿಗ್ಧ ಪದಾರ್ಥಗಳು, ಪ್ರೋಟೀನು ಹಾಗೂ ಕಾರ್ಬೋಹೈಡ್ರೇಟುಗಳು ಹೆಚ್ಚು ಉಷ್ಣತೆಯನ್ನು ಉತ್ಪಾದಿಸುವುದರಲ್ಲಿ ವ್ಯಯ-ವಾಗುವುದರಿಂದ ಅವುಗಳ ಮಟ್ಟವನ್ನು ಕಾಯ್ದುಕೊಳ್ಳಲು ಸಮೃದ್ಧವಾಗಿರುವ ಆಹಾರ-ವನ್ನು ಸೇವಿಸುವುದೊಳಿತು. ಎಲ್ಲಕ್ಕೂ ಮುಖ್ಯ-ವಾಗಿ ಶಾಂತಚಿತ್ತರಾಗಿರಿ. ಮನೋವ್ಯಗ್ರತೆ ಶರೀರದ ಉಷ್ಣತೆಯನ್ನು ಹೆಚ್ಚಿಸುವುದು. ✡



"ಹಲೋ... ಫೈರ್ ಸ್ಟೇಶನ್ನಾ... ಬೇಗ ಬನ್ನಿ ಸಾರ್... ಪಕ್ಕದ ಮನೇಲಿ ಭಾರೀ ಬೆಂಕಿ ಹತ್ತಿ-ರೋದ್ರಿಂದ ನಮ್ಮ ಗಾರ್ಡನ್‌ನಲ್ಲಿರೋ ಗಿಡ-ಗಳೆಲ್ಲಾ ಬೆಂದುಹೋಗ್ತಿವೆ..."

## ಬಡರಾಷ್ಟ್ರದ ಪ್ರಜೆ

ಕಪೂರ್‌ಥಲಾದ ಜೆಂಗಾಡು ಪ್ರದೇಶದಲ್ಲಿ ಒಂದು ನೀರಾವರಿ ಯೋಜನೆಯನ್ನು ಆರಂಭಿಸಲು ಹಿಂದಿನ ಪ್ರಧಾನಮಂತ್ರಿ ದಿವಂಗತ ಜವಹರಲಾಲ್ ನೆಹರೂರವರು ಹೋದಾಗ ಅವರಿಗೆ ಒಂದು ಬೆಳ್ಳಿಯ ಗುದ್ದಲಿಯನ್ನು ಕೊಡಲಾಯಿತು. ಅದನ್ನು ನೋಡಿ ಆಶ್ಚರ್ಯಚಕಿತರಾದ ನೆಹರೂ, "ನಾನು ಒಂದು ಬಡರಾಷ್ಟ್ರದ ಪ್ರಜೆ. ಆದುದರಿಂದ ಬೆಳ್ಳಿಯದಲ್ಲ, ಕಬ್ಬಿಣದ ಗುದ್ದಲಿ ಬೇಕು" ಎಂದು ಹೇಳಿದರು.

ಕೂಡಲೆ ಮುಖ್ಯ ಎಂಜಿನಿಯರ್ ಕಬ್ಬಿಣದ ಗುದ್ದಲಿಯನ್ನು ತರಿಸಿಕೊಟ್ಟರು. ಆ ನಂತರ ಪ್ರಧಾನ ಮಂತ್ರಿಯವರು ಆ ಕಬ್ಬಿಣದ ಗುದ್ದಲಿಯಿಂದ ಅಗೆಯುವ ಕಾರ್ಯಾರಂಭ ಮಾಡಿದರು.

ಸಂಗ್ರಹ: ಎಸ್. ವಿಶ್ವನಾಥ

ಗಣಿತಲೋಕದಲ್ಲಿದು
ಅಜರಾಮರ ಹೆಸರು

# ಭಾಸ್ಕರಾಚಾರ್ಯರ ಲೀಲಾವತೀ

❁ ಎಸ್. ಬಾಲಚಂದ್ರರಾವ್

ಯೇಷಾಂ ಸುಜಾತಿಗುಣವರ್ಗ-
ವಿಭೂಷಿತಾಂಗೀ
ಶುದ್ಧಾಖಿಲವ್ಯವಹೃತಿಃ ಖಲು
ಕಂಠಸಕ್ತಾ ।
ಲೀಲಾವತೀಹ ಸರಸೋಕ್ತಿ-
ಮುದಾಹರಂತೀ
ತೇಷಾಂ ಸದೈವ ಸುಖಸಂಪದುಪೈತಿ
ವೃದ್ಧಿಂ ॥

"ಸತ್ಕುಲದವಳಾಗಿ, ಒಳ್ಳೆಯ ಗುಣಗಳಿಂದಲೂ ನಡತೆಯಿಂದಲೂ ಕೂಡಿ ಮೃದು ಭಾಷಣವನ್ನು ಮಾಡುವಂತಹ ಲಲನಾಮಣಿಯನ್ನು ಪಡೆದಿರುವ ಪುರುಷರಿಗೆ ಯಾವಾಗಲೂ ಸುಖಸಂಪತ್ತುಗಳು ವೃದ್ಧಿಹೊಂದುತ್ತಾ ಇರುತ್ತವೆ."

ಈ ಶ್ಲೋಕದೊಂದಿಗೆ ಭಾರತೀಯ ಗಣಿತ-ಶಾಸ್ತ್ರಶಿರೋಮಣಿಯಾದ ಭಾಸ್ಕರಾಚಾರ್ಯರು ತಮ್ಮ "ಲೀಲಾವತೀ" ನಾಮಕ ಗ್ರಂಥವನ್ನು ಉಪಸಂಹರಿಸುತ್ತಾರೆ. ಯಾರಿಗಾದರೂ ಈ ಶ್ಲೋಕಕ್ಕೂ ಗಣಿತಕ್ಕೂ ಯಾವ ಸಂಬಂಧ ಎಂಬ ಪ್ರಶ್ನೆ ಬರುವುದು ಸಹಜ. ಸಾಮಾನ್ಯ ಜನರಿಗೆ ತಲೆತಿನ್ನುವ ಗಣಿತದಂತಹ ಶಾಸ್ತ್ರವನ್ನೂ—ಇದು ಗಣಿತವೇ ಅಲ್ಲವೇನೋ ಅನ್ನಿಸುವಂತೆ—ಬಹಳ ಸರಳವೂ ಮಧುರವೂ ಕಾವ್ಯಮಯವೂ ಆಗಿಸುವ ವೈಶಿಷ್ಟ್ಯ ಶ್ರೀಭಾಸ್ಕರಾಚಾರ್ಯರದು.

ಗಣಿತಶಾಸ್ತ್ರಕ್ಕೆ ಪ್ರಾಚೀನ ಭಾರತೀಯರ ಕೊಡುಗೆ ಬಹಳ ಮಹತ್ವದ್ದು ಎಂಬುದು ನಿರ್ವಿವಾದ. ಇಂತಹ ಶಾಸ್ತ್ರದ ಬೆಳವಣಿಗೆ ವೇದಗಳ ಕಾಲದಿಂದಲೂ ಅವ್ಯಾಹತವಾಗಿ ನಡೆದು ಬಂದಿದೆ. ಈ ಬೆಳವಣಿಗೆಗೆ ಕಾರಣೀಭೂತವಾದ ಗ್ರಂಥಗಳು ಮತ್ತು ಗಣಿತಶಾಸ್ತ್ರಜ್ಞರು ಮುಖ್ಯವಾಗಿ ಶುಲ್ವಸೂತ್ರಗಳು, ವೇದಾಂಗ ಜ್ಯೋತಿಷ; ಮೊದಲನೆಯ ಆರ್ಯಭಟ್ಟ, ಬ್ರಹ್ಮಗುಪ್ತ, ವರಾಹಮಿಹಿರ, ಮಹಾವೀರ, ಶ್ರೀಧರ ಮುಂತಾದವರು. ಇವರೆಲ್ಲರಿಗಿಂತಲೂ ಬಹಳ ಪ್ರಖ್ಯಾತರಾದವರು ಎಂದರೆ ಎರಡನೆಯ ಭಾಸ್ಕರಾಚಾರ್ಯರು. ಇವರು ಕ್ರಿ. ಶ. ೧೧೧೪ರಲ್ಲಿ ಕರ್ನಾಟಕದ ವಿಜಾಪುರದಲ್ಲಿ ಜನಿಸಿದರು.

ಭಾಸ್ಕರಾಚಾರ್ಯರ ವೈಯಕ್ತಿಕ ಜೀವನದ ವಿಷಯದಲ್ಲಿ ಹೆಚ್ಚು ಏನೂ ತಿಳಿದುಬಂದಿಲ್ಲ. ಬಹುಶಃ ಮಹಾನುಭಾವರ ಕೃತಿಗೆ ಮಾತ್ರ ಮಹತ್ವ ಕೊಟ್ಟು ಅವರ ವೈಯಕ್ತಿಕ ಜೀವನದ ವಿಷಯದಲ್ಲಿ ಅಲಕ್ಷ್ಯ ತೋರಿಸುವುದು ನಮ್ಮ ಭಾರತೀಯರ ವೈಶಿಷ್ಟ್ಯವೇನೋ! ಆಚಾರ್ಯವರೇಣ್ಯರಾದ ಶಂಕರಭಗವತ್ಪಾದರ, ಕವಿಕುಲತಿಲಕನಾದ ಕಾಳಿದಾಸನ, ಗಣಿತ ಜ್ಯೋತಿಷ ಶಾಸ್ತ್ರಶಿರೋಮಣಿಗಳಾದ ವರಾಹಮಿಹಿರ ಮತ್ತು ಭಾಸ್ಕರರ ಜೀವನಗಳೇ ಇದಕ್ಕೆ ಉದಾಹರಣೆಗಳು. ಈ ಮಹಾನುಭಾವರ ವಿಷಯದಲ್ಲಿ ಅನೇಕ ದಂತಕತೆಗಳು ಚಲಾವಣೆಯಲ್ಲಿವೆ. ಅವುಗಳಲ್ಲಿ ತಥ್ಯವೆಷ್ಟು ಮಿಥ್ಯವೆಷ್ಟು ಎಂದು ನಿರ್ಧರಿಸುವುದು ಸುಲಭಸಾಧ್ಯವಲ್ಲ. ಏನೇ ಆಗಲಿ, ಆ ಮಹಾನುಭಾವರ ಮಹತ್ಕಾರ್ಯಗೌರವಕ್ಕೆ ಪೋಷಕವಾಗಿರುವ ದಂತಕಥೆಗಳನ್ನು ಒಪ್ಪಿಕೊಳ್ಳುವುದರಿಂದ ಬಾಧಕವೇನೂ ಇಲ್ಲ.

ಭಾಸ್ಕರಾಚಾರ್ಯರ ಲೀಲಾವತಿಗೆ ಸಂಬಂಧಪಟ್ಟಂತೆಯೂ ಹೀಗೊಂದು ದಂತಕತೆ ಪ್ರಚಲಿತವಾಗಿದೆ. ಭಾಸ್ಕರರ ಏಕಮಾತ್ರ ಪ್ರೇಮದ ಪುತ್ರಿ ಲೀಲಾವತಿ. ಜ್ಯೋತಿಷಶಾಸ್ತ್ರದಲ್ಲಿ ನಿಷ್ಣಾತರಾದ ಭಾಸ್ಕರರು ಆಕೆಯ ಜಾತಕದಲ್ಲಿ ಅತಿ ಕ್ರೂರವಾದ ವೈಧವ್ಯಯೋಗವಿರುವುದನ್ನು ಮನಗಂಡರು. ಅದರ ನಿವಾರಣೆಗೋಸ್ಕರ ಬಹಳ ಲೆಕ್ಕಾಚಾರಗಳನ್ನು ಮಾಡಿ ಒಂದು ಒಳ್ಳೆಯ ಮುಹೂರ್ತವನ್ನು ಗುಣಿಸಿ ಆಕೆಯ ವಿವಾಹವನ್ನು ನೆರವೇರಿಸಲು ನಿಶ್ಚಯಿಸಿದರು. ಆ ಶುಭಮುಹೂರ್ತದಲ್ಲಿ ಲೀಲಾವತಿಯ ಮದುವೆ ನೆರವೇರಿದ ಪಕ್ಷದಲ್ಲಿ ವೈಧವ್ಯ ಯೋಗವು ಇರುತ್ತಿರಲಿಲ್ಲ. ಮದುವೆಗೆ ಬೇಕಾದ ಏರ್ಪಾಟುಗಳನ್ನೆಲ್ಲ ಮಾಡಿ, ಮುಹೂರ್ತದ ಕಾಲವನ್ನು ನಿಖರವಾಗಿ ಗೊತ್ತುಮಾಡುವುದಕ್ಕೋಸ್ಕರ ಲೆಕ್ಕಾಚಾರಗಳ ಪ್ರಕಾರ ಒಂದು ವಿಶೇಷವಾದ ಘಟಿಕಾಜಲಯಂತ್ರವನ್ನು ನಿರ್ಮಿಸಿದರು. ಬಹಳ ಕುತೂಹಲಪೂರ್ಣಳೂ ಬುದ್ಧಿಮತಿಯೂ ಆದ ಲೀಲಾವತಿಗೆ ಈ ಯಂತ್ರದ ರಚನೆಯನ್ನು ತಿಳಿದುಕೊಳ್ಳುವ ಕುತೂಹಲ. ಕಾರ್ಯಬಾಹುಲ್ಯದಿಂದ ತಂದೆ ಮಗಳಿಗೆ ಈ ಯಂತ್ರದ ವಿಷಯವಾಗಿ ಏನನ್ನೂ ಹೇಳಲಿಲ್ಲ. ಆದರೆ ಬಹಳ ಕುತೂಹಲದಿಂದ ಬಾಲೆಯಾದ ಲೀಲಾವತಿ ಈ ಯಂತ್ರದ ರಮ್ಯವಾದ ರಚನೆಯನ್ನು ವೀಕ್ಷಿಸುವುದರಲ್ಲೇ ಮಗ್ನಳಾದಳು. ಈ ಯಂತ್ರದ ತತ್ತ್ವವೇನೆಂದರೆ ಒಂದು ನಿಯಮಿತ ವೇಗಮಿತಿಯಂತೆ ಒಂದು ಕ್ಷಣಕ್ಕೆ ಒಂದು ಹನಿಯಂತೆ ನೀರು ಒಂದು ಪಾತ್ರೆಯಿಂದ ಇನ್ನೊಂದು ಪಾತ್ರೆಗೆ ಬೀಳುತ್ತಿತ್ತು. ಮಾರನೆಯ ದಿನ ಲೀಲಾವತಿಯ ಮದುವೆ. ಅದರ ಏರ್ಪಾಟುಗಳನ್ನು ಮಾಡುವುದರಲ್ಲೇ ತಲ್ಲೀನರಾದ ಭಾಸ್ಕರರು ಯಾವಾಗಲೋ ಲೀಲಾವತಿಯನ್ನು ಹುಡುಕಿಕೊಂಡು ಬಂದರು. ಈಕೆಯಾದರೋ ತದೇಕಚಿತ್ತಳಾಗಿ ಘಟಿಕಾಯಂತ್ರವನ್ನು ವೀಕ್ಷಿಸುತ್ತಿದ್ದಳು. ತಂದೆಯನ್ನು ನೋಡಿದೊಡನೆಯೇ ಗಾಬರಿಯಿಂದ ಎದ್ದಳು. ಏಳುವ ಭರದಲ್ಲಿ ಅವಳ ಕೊರಳಿನಲ್ಲಿದ್ದ ಮುತ್ತಿನ ಹಾರವು ಛಿದ್ರವಾಗಿ ಹೋಯಿತು; ಮುತ್ತುಗಳು ಚಲ್ಲಾಪಿಲ್ಲಿಯಾದವು. ಅವುಗಳಲ್ಲಿ ಒಂದು ಮುತ್ತು ಘಟಿಕಾಪಾತ್ರೆಯ ರಂಧ್ರದಲ್ಲಿ ಸಿಕ್ಕಿಕೊಂಡು ಜಲವೇಗವು ಕಡಿಮೆಯಾಯಿತು. ತತ್ಪರಿಣಾಮವಾಗಿ ಕಾಲಮಾನದ ಲೆಕ್ಕಾಚಾರವು ಹೆಚ್ಚು ಕಡಿಮೆಯಾಯಿತು. ಇದನ್ನು ನೋಡದೆ (ನೋಡಿದ್ದರೂ ಏನೂ ಮಾಡಲು ಸಾಧ್ಯವಿರಲಿಲ್ಲ), ಅನಿಶ್ಚಿತ ವೇಳೆಯಲ್ಲಿ ಲೀಲಾವತಿಯ ವಿವಾಹ ಜರುಗಿತು. ವಿಧಿನಿಯಮದಂತೆ ಲೀಲಾವತಿ ಮರುವರ್ಷದಲ್ಲೇ ವಿಧವೆಯಾದಳು. ಮನುಷ್ಯನು ಎಷ್ಟೇ ಬುದ್ಧಿವಂತನೆಂದುಕೊಂಡರೂ ವಿಧಿನಿಯಮವನ್ನು ಮೀರಲು ಸಾಧ್ಯವೇ?

ಚಿಕ್ಕ ವಯಸ್ಸಿನಲ್ಲಿಯೇ ಅಸಾಧಾರಣ ಬುದ್ಧಿಶಕ್ತಿಯನ್ನೂ ಜ್ಞಾಪಕಶಕ್ತಿಯನ್ನೂ ಸ್ತ್ರೀಸಹಜವಲ್ಲದ ಪ್ರತಿಭೆಯನ್ನೂ ಹೊಂದಿದ ಲೀಲಾವತಿಯು ದುಃಖನಿವಾರಣೆಯಾಗಿ ಸಾರ್ಥಕವಾದ

ಜೀವನ ನಡೆಸುವಂತೆ ಅವಳ ಮನಸ್ಸಿಗೆ ಕೆಲಸ ಕೊಡಬೇಕಾಯಿತು. ಭಾಸ್ಕರರು ಬಹಳ ಯೋಚಿಸಿ ಕಡೆಗೆ ಆಕೆಗೆ ಗಣಿತಶಾಸ್ತ್ರವನ್ನು ಬೋಧಿಸುವುದು ಉಚಿತವೆಂದು ನಿರ್ಧರಿಸಿದರು. ಆದರೆ ಸ್ತ್ರೀಸಹಜವಾದ ಮಾರ್ದವದ ಪುತ್ಥಳಿಯಾದ ಲೀಲಾವತಿಗೂ ಕಠಿಣಾತ್ ಕಠಿಣತರವಾದ ಗಣಿತಕ್ಕೂ ಯಾವ ಹೊಂದಾಣಿಕೆ ? ಆದರೆ ಬಹಳ ಶುಷ್ಕವೂ ಕಠಿಣವೂ ಎಂದು ತೋರುವ ಗಣಿತ ಶಾಸ್ತ್ರದ ಹೃದಯಾಂತರಾಳವನ್ನು ಪರಿಚಯ ಮಾಡಿಕೊಂಡವರಿಗೆ ಅದರಷ್ಟು ಸೌಂದರ್ಯಮಯವೂ ಮಧುರವೂ ಮೃದುತರವೂ ಆದ ವಿಷಯವಿನ್ನೊಂದಿಲ್ಲ ಎಂದು ಸಾಧಿಸಿದ ಹಿರಿಮೆ ಶ್ರೀಮದ್ಭಾಸ್ಕರಾಚಾರ್ಯರದು. ಕಷ್ಟವಾದ ಸಮಸ್ಯೆಗಳನ್ನೂ ಕ್ಲಿಷ್ಟವಾದ ನಿಯಮಗಳನ್ನೂ ಅತಿ ಮನೋಹರವಾದ ಪದ್ಯಗಳಲ್ಲಿ ಬಹಳ ಸುಲಭವಾದ ಉದಾಹರಣೆಗಳ ಮೂಲಕ ಹೃದಯಂಗಮವಾದ ಸನ್ನಿವೇಶಗಳನ್ನಾರಿಸಿ ಕೊಂಡು ತಮ್ಮ ಸುಕೋಮಲಳಾದ ಲೀಲಾವತಿಯ ಮನಸ್ಸಿಗೆ ಸ್ವಲ್ಪವೂ ಬೇಸರ ಬರದಂತೆ ಗಣಿತವನ್ನು ಬೋಧಿಸಿದ್ದಾರೆ. ಆ ಗ್ರಂಥಕ್ಕೆ ತಮ್ಮ ನೆಚ್ಚಿನ ಮಗಳ ಹೆಸರನ್ನೇ ಇಟ್ಟಿದ್ದಾರೆ. ಲೀಲಾವತಿಯು ಕೇವಲ ಒಂದು ಗಣಿತಗ್ರಂಥ ಮಾತ್ರವಲ್ಲದೆ ಶ್ರೇಷ್ಠದರ್ಜೆಯ ಕಾವ್ಯವೂ ಆಗಿದೆ. ಈ ಗ್ರಂಥದಲ್ಲಿ ಕಾವ್ಯದಲ್ಲಿ ಇರಬೇಕಾದ ವೃತ್ತಾಲಂಕಾರ ಲಕ್ಷಣಗಳೆಲ್ಲವೂ ಇವೆ. "ಲೀಲಾವತಿ"ಯು ಭಾಸ್ಕರರ ಉದ್ಗ್ರಂಥವಾದ "ಸಿದ್ಧಾಂತಶಿರೋಮಣಿ"ಯ ಪ್ರಥಮ ಪಾದ. ಇನ್ನುಳಿದ ತ್ರಿಪಾದಗಳು ಪ್ರೌಢ ಬೀಜಗಣಿತ, ರೇಖಾಗಣಿತ ಮತ್ತು ಗ್ರಹಗಣಿತಗಳಿಗೆ ಸಂಬಂಧಪಟ್ಟವು.

"ಲೀಲಾವತಿ" ಗ್ರಂಥದಲ್ಲಿ ಮುಖ್ಯವಾಗಿ ಪ್ರಸ್ತಾಪಿಸಿರುವ ವಿಷಯವೆಂದರೆ ಅಂಕಗಣಿತ. ಇದನ್ನೇ ಪಾಟೀಗಣಿತವೆಂದೂ ಕರೆಯುವ ರೂಢಿಯುಂಟು. ಆಗಿನ ಕಾಲದ ಪಾಠಕ್ರಮಕ್ಕನುಗುಣವಾಗಿ ಸ್ವಲ್ಪ ರೇಖಾಗಣಿತ ಮತ್ತು ಬೀಜಗಣಿತಗಳ ಉಲ್ಲೇಖವೂ ಅದರಲ್ಲುಂಟು. ಲೀಲಾವತಿಯಲ್ಲಿ ಮುಖ್ಯವಾಗಿ ಉಲ್ಲೇಖಿಸಿರುವ ಅಧ್ಯಾಯಗಳೆಂದರೆ : (೧) ಪರಿಕರ್ಮ, (೨) ವ್ಯವಹಾರ, (೩) ರಜ್ಜುಗಣಿತ, (೪) ತ್ರೈರಾಶಿ, (೫) ಕಲಸವರ್ಣ (ಭಿನ್ನರಾಶಿ), (೬) ಯಾವತ್ ತಾವತ್ (ಸಮೀಕರಣಗಳು), (೭) ವರ್ಗ ಮತ್ತು ವರ್ಗಮೂಲ, (೮) ಘನ ಮತ್ತು ಘನಮೂಲ ಮತ್ತು (೯) ವಿಕಲ್ಪ. ಇವುಗಳೆಲ್ಲದಕ್ಕಿಂತ ಬಹಳ ಮಹತ್ವಪೂರ್ಣವಾದ ಕೊಡಿಗೆ ಎಂದರೆ "ಕುಟ್ಟಕಾಧ್ಯಾಯ". ಇದನ್ನು ಇಂದಿನ ಗಣಿತದಲ್ಲಿ (Theory of Indeterminate Equations) ಎಂಬುದಾಗಿ ಸಾಮಾನ್ಯವಾಗಿ ಡಯೋಫಾಂಟಸ್ (Diophantus) ಎಂಬ ಗ್ರೀಕ್ ಗಣಿತಜ್ಞನ ಹೆಸರಿನಲ್ಲಿ ಕರೆಯುವ ವಾಡಿಕೆ. ವಾಸ್ತವವಾಗಿ ಇದು ಸರಿಯಲ್ಲ. ಡಯೋಫಾಂಟಸ್ ಭಾಸ್ಕರರಿಗಿಂತ ಒಂಭೈನೂರು ವರ್ಷ ಹಿಂದೆ ಇದ್ದವನೆಂಬುದು ನಿಜವಾದರೂ ಆತನು ಕೆಲವು ಹೊಸ ರೀತಿಯ ಸಮೀಕರಣಗಳನ್ನು ಬಿಡಿಸುವ ಸಮಸ್ಯೆಯನ್ನು ಮಂಡಿಸಿದನೇ ಹೊರತು ಅವುಗಳಿಗೆ ಉತ್ತರಗಳನ್ನಾಗಲಿ ಅಂಥ ಸಮೀಕರಣಗಳನ್ನು ಪೂರ್ಣಾಂಕಗಳಲ್ಲಿ ಬಿಡಿಸುವ ವಿಧಾನಗಳನ್ನಾಗಲಿ ಚರ್ಚಿಸಿಲ್ಲ. ಆತನ ಮತ್ತು ಅನಂತರದ ಅನೇಕ ಶತಮಾನಗಳವರೆಗೆ ಬಂದ ಅನೇಕ ಪಾಶ್ಚಾತ್ಯಗಣಿತಜ್ಞರ ಆಸಕ್ತಿ ಇವುಗಳನ್ನು ಭಾಗಲಬ್ಧ ಸಂಖ್ಯೆಗಳಲ್ಲಿ (rational numbers) ಬಿಡಿಸುವುದಾಗಿತ್ತು. ಈ ಕುಟ್ಟಕಾಧ್ಯಾಯದಲ್ಲಿ ಭಾಸ್ಕರಾಚಾರ್ಯರು ಅದಕ್ಕಿಂತ ಕಷ್ಟಕರವಾದ $Ax + By = C$ ಮತ್ತು $Nx^2 \pm 1 = y^2$ ಎಂಬ ಅನಿರ್ದಿಷ್ಟ ಸಮೀಕರಣಗಳನ್ನು ಪೂರ್ಣಾಂಕಗಳಲ್ಲಿ ಬಿಡಿಸುವ ವಿಧಾನಗಳನ್ನು ಚರ್ಚಿಸಿದ್ದಾರೆ. ಈಗಿನ ಗಣಿತದಲ್ಲಿ ಅಂತಹ ಸಮೀಕರಣಗಳನ್ನು ಬಿಡಿಸಲು continued fractions ವಿಧಾನಗಳನ್ನು ಉಪಯೋಗಿಸುತ್ತೇವೆ. ವಿಶೇಷದ ಸಂಗತಿಯೆಂದರೆ ಪಾಶ್ಚಾತ್ಯ ದೇಶಗಳ ೧೮ನೇ ಶತಮಾನದ ಪ್ರಸಿದ್ಧ ಗಣಿತಜ್ಞ

ರಾದ ಫ್ರೆನಿಕಲ್, ಫರ್ಮಾಟ್, ಆಯಿಲರ್ ಮತ್ತು ಲಾಗ್ರಾಂಜ್ ಮುಂತಾದವರಿಗಿಂತ ಬಹಳ ಮೊದಲೇ ಭಾಸ್ಕರರು ಈ ವಿಧಾನಗಳನ್ನು ಚರ್ಚಿಸಿದ್ದಾರೆ. ನಿಜವಾಗಿ ಈ ಸಮೀಕರಣಗಳನ್ನು ಭಾರತದ ಬ್ರಹ್ಮಗುಪ್ತ ಮತ್ತು ಭಾಸ್ಕರರ ಹೆಸರಿನಲ್ಲಿ ಕರೆಯುವುದೇ ನ್ಯಾಯ.

ಗಣಿತಶಾಸ್ತ್ರಕ್ಕೆ ಒಟ್ಟಾಗಿ ಭಾಸ್ಕರರ ಕೊಡುಗೆ ಅವರ ಕಾಲದ ಜಾಗತಿಕ ಗಣಿತಶಾಸ್ತ್ರೀಯ ಸ್ಥಿತಿಯನ್ನವಲೋಕಿಸಿದರೆ ಹಿರಿದಾದದ್ದು. ಉದಾಹರಣೆಗೆ ಶೂನ್ಯ ಮತ್ತು ಅನಂತದ ಗಣಿತಶಾಸ್ತ್ರೀಯ ಕಲ್ಪನೆಯನ್ನು ಅವರು ಸ್ಫುಟವಾಗಿಸಿದ್ದಾರೆ. ಯಾವುದೇ ಸಂಖ್ಯೆಯನ್ನು ಶೂನ್ಯದಿಂದ ಭಾಗಿಸಿದರೆ ಭಾಗಲಬ್ಧವು ಅನಂತವಾಗುತ್ತದೆ. (ಅವರು ಇದನ್ನು ಖಹರ ಎಂದು ಕರೆದಿದ್ದಾರೆ). ಅನಂತದ ಕಲ್ಪನೆ ಅವರಿಗೂ ಹಿಂದಿನ ಭಾರತೀಯರಿಗೆ ಗೊತ್ತಿತ್ತೆಂಬುದಕ್ಕೆ ಆಧಾರವಿದೆ. ಆದರೆ ಅದರ ಸರಿಯಾದ ಸ್ವರೂಪವನ್ನು ಭಾಸ್ಕರರೇ ಮೊಟ್ಟಮೊದಲು ಮನಗಂಡವರು.

ನ್ಯೂಟನ್ ಮತ್ತು ಲೇಬ್ನೀತ್ಸರಿಗಿಂತ ಐದು ಶತಮಾನಗಳ ಹಿಂದೆಯೇ ಗ್ರಹಗಣಿತಕ್ಕೆ ಅವಶ್ಯವಾದ ಕ್ಯಾಲ್ಕುಲಸ್‌ಗೆ ಬುನಾದಿ ಹಾಕಿದ ಶ್ರೇಯಸ್ಸು ಭಾಸ್ಕರರದು. Differential Calculus ನ ಮೂಲತತ್ತ್ವವಾದ Differential coefficient (derivative)ನ್ನು ಅವರೇ ಪ್ರಪಂಚದಲ್ಲಿ ಮೊದಲ ಬಾರಿ ಉಲ್ಲೇಖಿಸಿದರು. Derivative ನ ಒಂದು ಮುಖ್ಯ ಗುಣವನ್ನೂ ಅವರು ತಿಳಿಯಪಡಿಸಿದ್ದಾರೆ: ಗರಿಷ್ಠ ಬಿಂದುವಿನಲ್ಲಿ (maxima) ಈ derivative ಶೂನ್ಯವಾಗಿರುತ್ತದೆ–ಎಂಬುದೇ ಆ ಗುಣ.

ಇನ್ನೂ ಗಣಿತಶಾಸ್ತ್ರಕ್ಕೆ ಭಾಸ್ಕರಾಚಾರ್ಯರ ವಿಶೇಷ ಕೊಡುಗೆಯನ್ನು ಶಾಸ್ತ್ರೋಕ್ತವಾಗಿ ಚರ್ಚಿಸುವುದು ಈ ಲೇಖನದ ಉದ್ದೇಶವನ್ನು ಮೀರುತ್ತದೆ. ವಾಚಕರ ಅವಗಾಹನೆಗೆ ಕೇವಲ ಕೆಲವು ಉದಾಹರಣೆಗಳನ್ನು ಕೊಟ್ಟಿದೆ. ಭಾಸ್ಕರರ ಒಂದು ವೈಶಿಷ್ಟ್ಯವೆಂದರೆ ಗಣಿತದ ಪ್ರಶ್ನೆಗಳನ್ನು ರಸವತ್ತಾಗಿ ಮಾಡುವುದು. ಹೆಚ್ಚು ಸ್ಥಳಾವಕಾಶವನ್ನು ಉಪಯೋಗಿಸದೆ ಇರಲು ಮೂಲ ಸಂಸ್ಕೃತ ಶ್ಲೋಕಗಳನ್ನು ಬಿಟ್ಟು ಅವುಗಳ ಸರಳ ಕನ್ನಡ ಅನುವಾದವನ್ನು ಮಾತ್ರ ಕೊಟ್ಟಿದೆ. ನಿಜವಾಗಿ ಈ ಸೊಗಸಾದ ಗ್ರಂಥದ ಕಾವ್ಯಗುಚ್ಛವನ್ನು ಸವಿಯುತ್ತಿದ್ದರೆ, ಗಣಿತದ್ವೇಷಿಗಳು ಕೂಡ ಪ್ರಾಜ್ಞ ಗಣಿತಜ್ಞರಾಗುವುದರಲ್ಲಿ ಸಂಶಯವಿಲ್ಲ:

(೧) "ಬಾಲೇ ಬಾಲಕುರಂಗಲೋಲನಯನೇ ಲೀಲಾವತಿ ಪ್ರೋಚ್ಯತಾಂ......"

—ಎಳೆ ಜಿಂಕೆಯ ಕಣ್ಣುಗಳಂತೆ ಚಂಚಲನೇತ್ರೆಯಾದ ಲೀಲಾವತಿಯೇ, ೧೩೫ನ್ನು ೧೨ರಿಂದ ಗುಣಿಸಿದರೆ ಏನು ಬರುತ್ತದೆಂದು ಹೇಳು. ಎಲೈ ಕಲ್ಯಾಣಿ, ರೂಪ, ಸ್ಥಾನ, ವಿಭಾಗ, ಖಂಡ ಮೊದಲಾದ ಗುಣಾಕಾರ ವಿಧಾನಗಳಲ್ಲಿ ನೀನು ಚತುರೆಯಾದ ಪಕ್ಷದಲ್ಲಿ, ಗುಣಲಬ್ಧವು ಅದೇ ಗುಣಕದಿಂದ ಭಾಗಿಸಲ್ಪಟ್ಟರೆ ಭಾಗಲಬ್ಧವೇನು?

(೨) ಎಲೈ ಬಾಲೆ, ಒಂದು ಹಂಸಸಮೂಹದ ವರ್ಗಮೂಲದ ಅರ್ಧದ ಏಳರಷ್ಟು ನದೀ ತೀರದಲ್ಲಿ ವಿಲಾಸದಿಂದ ಆಯಾಸಹೊಂದಿ ಮೆಲ್ಲ ಮೆಲ್ಲನೆ ನಡೆಯುತ್ತಿತ್ತು. ಉಳಿದ ಎರಡು ಹಂಸಗಳು ನೀರಿನಲ್ಲಿ ಪ್ರಣಯಕಲಹವನ್ನು ಮಾಡುತ್ತಿದ್ದರೆ, ಹಂಸಸಮೂಹದ ಸಂಖ್ಯೆಯೆಷ್ಟು?

(೩) ಒಂದು ಆನೆಗಳ ಹಿಂಡಿನ, ೧/೩ ಭಾಗದಿಂದ ಕೂಡಿದ ಅರ್ಧವು ಕಾಡಿನಲ್ಲಿ ತಿರುಗಾಡುತ್ತಿತ್ತು. ತನ್ನ ೧/೬ ದಿಂದ ಕೂಡಿದ ೧/೭ ಭಾಗವು ನದಿಯಲ್ಲಿ ನೀರು ಕುಡಿಯುತ್ತಿತ್ತು. ತನ್ನ ೧/೮ ದಿಂದ ಕೂಡಿದ ೧/೯ ಭಾಗವು ಪದ್ಮಿನಿಯೊಂದಿಗೆ ಅನುರಾಗದಿಂದ ಆಡುತ್ತಿತ್ತು; ಸಲಗವು ಉಳಿದ ಮೂರು ಹೆಣ್ಣಾನೆಗಳಿಂದ ಹಿಂಬಾಲಿಸಲ್ಪಟ್ಟರೆ, ಹಿಂಡಿನ ಸಂಖ್ಯೆಯೆಷ್ಟು?

(೪) ವರ್ಷಋತುವಿನಲ್ಲಿ ಹಂಸಸಮೂಹದ ವರ್ಗಮೂಲದ ಹತ್ತರಷ್ಟು ಮಾನಸ ಸರೋವರಕ್ಕೂ, ಅದರ ಎಂಟನೇ ಒಂದು ಭಾಗವು ಸ್ಥಲ

ಕಮಲದ ಕಾಡಿಗೂ ಹಾರಿಹೋದರೆ, ಎಲೈ ಬಾಲೇ, ಬಾಲ ಮೃಣಾಲಗಳಿಂದ ತುಂಬಿದ ನೀರಿನಲ್ಲಿ ಮೂರು ಹಂಸಯುಗ್ಮಗಳು ಕೇಳಿ ಕ್ರಿಯೆಯಲ್ಲಿ ಮಗ್ನವಾಗಿದ್ದರೆ, ಹಂಸಗಳ ಒಟ್ಟು ಸಂಖ್ಯೆಯೇನು?

(೫) ಅರ್ಜುನನು ಮಹಾಭಾರತ ಯುದ್ಧದಲ್ಲಿ ಕರ್ಣನ ಸಂಹಾರಕ್ಕೋಸ್ಕರ ಕೆಲವು ಬಾಣಗಳನ್ನು ಧನುಸ್ಸಿನಲ್ಲಿಡಲು ತೆಗೆದು, ಅದರ ಅರ್ಧದಿಂದ ಕರ್ಣನ ಬಾಣಸಮೂಹವನ್ನು ನಿವಾರಿಸಿ, ವರ್ಗಮೂಲದ ನಾಲ್ಕರಷ್ಟರಿಂದ ಕುದುರೆಗಳನ್ನೂ ಆರರಿಂದ ಶಲ್ಯನನ್ನೂ ಮೂರರಿಂದ ಛತ್ರ, ಪತಾಕೆ ಮತ್ತು ಬಿಲ್ಲುಗಳನ್ನೂ ಮುರಿದು, ಉಳಿದ ಒಂದರಿಂದ ಕರ್ಣನ ತಲೆಯನ್ನು ಕತ್ತರಿಸಿದರೆ, ಅರ್ಜುನನು ತೆಗೆದ ಬಾಣಗಳ ಸಂಖ್ಯೆಯೆಷ್ಟು? (ಈ ಲೆಕ್ಕಾಚಾರ ಕೇವಲ ಕಾಲ್ಪನಿಕ; ಇದರ ಉಲ್ಲೇಖ ವ್ಯಾಸರ ಮಹಾಭಾರತದಲ್ಲಿಲ್ಲ.)

(೬) ಚಕ್ರವಾಕ ಮತ್ತು ಕ್ರೌಂಚಪಕ್ಷಿಗಳಿಂದ ಆವೃತವಾದ ಒಂದು ಕೊಳದಲ್ಲಿ ನೀರಿನ ಮೇಲೆ ಅರ್ಧ ಮೊಳದಷ್ಟು ಕಮಲನಾಳವು ಕಾಣುತ್ತಿತ್ತು. ಗಾಳಿಯಿಂದ ಮೆಲ್ಲ ಮೆಲ್ಲನೆ ನೂಕಲ್ಪಟ್ಟು ಎರಡು ಮೊಳ ದೂರದಲ್ಲಿ ಅದರ ತುದಿ ನೀರಿನಲ್ಲಿ ಮುಳುಗಿದರೆ, ನೀರಿನ ಆಳ ಬೇಗ ಹೇಳು.

ಇನ್ನೂ ಈ "ಲೀಲಾವತೀ" ಗ್ರಂಥದ ವಿಷಯ ಹೆಚ್ಚೇನೂ ಹೇಳಬೇಕಾಗಿಲ್ಲ. ಲೀಲಾವತಿಯ ಸೌಂದರ್ಯವನ್ನು ಒಮ್ಮೆ ಸವಿದರೂ ಸಾಕು, ಗಣಿತಶತ್ರುಗಳು ಕೂಡ (ಲಿಂಗಭೇದವಿಲ್ಲದೆ!) ಉಲ್ಲಸಿತರಾಗಿ ರಸೋನ್ಮತ್ತರಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

ಭಾರತದಲ್ಲಿ ಆಗಿಹೋದ ಮಹಾ ಗಣಿತಶಾಸ್ತ್ರಜ್ಞನಾದ ಬ್ರಹ್ಮಗುಪ್ತನ ಮಾರ್ಗವನ್ನು ಅನೇಕ ವಿಷಯಗಳಲ್ಲಿ ಭಾಸ್ಕರರು ಅನುಸರಿಸಿದ್ದಾರೆಂಬುದು ನಿಜ. ವಿಶೇಷವಾಗಿ ಗ್ರಹಗಣಿತದಲ್ಲಿ ಈ ಮಾತು ಅನ್ವಯಿಸುತ್ತದೆ. ಬ್ರಹ್ಮಗುಪ್ತನು (ಕ್ರಿ. ಶ. ೭ ನೇ ಶತಮಾನ) ಅವನಿಗಿಂತ ಪೂರ್ವಿಕನಾದ ಆರ್ಯಭಟ್ಟನನ್ನು ಕೆಲ ವಿಷಯಗಳಲ್ಲಿ ಮೀರಿಸಿದನಾದರೆ ಬ್ರಹ್ಮಗುಪ್ತನಿಗಿಂತ ಭಾಸ್ಕರರು ಕೆಲ ವಿಷಯಗಳಲ್ಲಿ ಮೇಲ್ಗೈಯಾಗಿದ್ದಾರೆ. ಕುಟ್ಟಕಾಧ್ಯಾಯದಲ್ಲಿ ಬ್ರಹ್ಮಗುಪ್ತನ ವಿಧಾನಗಳನ್ನು ಬಹಳಷ್ಟು ಬದಲಾವಣೆ ಮಾಡಿ ತಮ್ಮದೇ ಆದ "ಚಕ್ರವಾಳ" ಪದ್ಧತಿಯನ್ನು ಪ್ರತಿಪಾದಿಸಿದರು. ಎಲ್ಲಕ್ಕಿಂತಲೂ ಕ್ಯಾಲ್ಕುಲಸ್‌ನ ಮೂಲ ಕಲ್ಪನೆಗಳು ಅವರದೇ ದೊಡ್ಡ ಕೊಡುಗೆ.

ಆದಿಯಲ್ಲಿ ಉಲ್ಲೇಖಿಸಿದ ಶ್ಲೋಕದ ಫಲಶ್ರುತಿಯೊಂದಿಗೆ, ಗಣಿತಾಚಾರ್ಯ ಭಾಸ್ಕರರು ತಮ್ಮ ಲೀಲಾವತೀ ನಾಮಕ ಗ್ರಂಥವನ್ನು ಉಪಸಂಹಾರ ಮಾಡುತ್ತಾರೆ. ಈ ಶ್ಲೋಕದ ಇನ್ನೊಂದು ಶ್ಲೇಷಾರ್ಥವು ಹೀಗಿದೆ:– "ಯಾರ ಕಂಠದಲ್ಲಿ ಶುದ್ಧವಾದ ವ್ಯವಹಾರವುಳ್ಳ ಭಿನ್ನರಾಶಿ, ಗುಣಾಕಾರ, ವರ್ಗಮೂಲ ಇತ್ಯಾದಿಗಳಿಂದ ಕೂಡಿದ ಸರಸವಾಗಿ ಮಾತುಗಳನ್ನಾಡುವ ಲೀಲಾವತಿಯು ಇರುವಳೋ ಅವರಿಗೆ ಯಾವಾಗಲೂ ಸುಖ ಸಂಪತ್ತುಗಳ ಅಭಿವೃದ್ಧಿಯುಂಟಾಗುವುದರಲ್ಲಿ ಸಂಶಯವಿಲ್ಲ." ✡

**ಗಣಿತಶಾಸ್ತ್ರದಲ್ಲಿ ಮಹಾವಿದ್ವಾಂಸರಾದ ದಿ. ಡಾ. ಸಿ. ಎನ್. ಶ್ರೀನಿವಾಸ ಅಯ್ಯಂಗಾರರ ಸ್ಮರಣೆಗಾಗಿ ಅರ್ಪಿತ– ಲೇಖಕ.**



# ನನ್ನ ಜೀವನದಲ್ಲಿಯ ಸಾರ್ಥಕ ಕ್ಷಣಗಳು

ರಂಗನಾಥ ದಿವಾಕರ

ಭಾರತೀಯ ಸ್ವಾತಂತ್ರ್ಯಸಮರದ ಕಥೆ ಇನ್ನೂ ಪೂರ್ತಿಯಾಗಿ ಹೇಳಲ್ಪಟ್ಟಿಲ್ಲ ಎಂದರೆ ತಪ್ಪಾಗದು. ಈ ಕಥೆಯ ಆಧಾರವಸ್ತು ರಾಷ್ಟ್ರೀಯ ಆಲೇಖ ಸಂಗ್ರಹಾಲಯಗಳಲ್ಲಿ ರಾಶಿ ರಾಶಿಯಾಗಿ ಕೂಡಿ ಬಿದ್ದಿದೆ. ಅದು ಮಹಾ ಯೋಗ್ಯತೆಯುಳ್ಳವನೊಬ್ಬನ ಲೇಖನ ಸಾಮರ್ಥ್ಯಕ್ಕಾಗಿ ಕಾಯುತ್ತಿದೆ. ಹೋರಾಟ ಅಹಿಂಸಕವಾಗಿತ್ತೆಂಬುದರಿಂದ ಅದು ಕಡಿಮೆ ಸಾಹಸದ್ದಾಗಲಿ ಕಡಿಮೆ ರೋಮಾಂಚಕವಾಗಲಿ ಆಗಿಲ್ಲ. ಇತಿಹಾಸದಲ್ಲೇ ಅಪ್ರತಿಮ ಬಲಶಾಲಿಯಾದ ಒಂದು ಸಾಮ್ರಾಜ್ಯದ ಹಿಡಿತದಿಂದ ನಿರಾಯುಧವೂ ಸಂಮಿಶ್ರವೂ ಆದ ಮೂವತ್ತು ಕೋಟಿ ಜನತೆ ಬಿಡಿಸಿಕೊಂಡು ಸ್ವತಂತ್ರವಾದ ಆಖ್ಯಾನ ಯಾವಾಗಲೂ ರಸವತ್ತಾಗಿಯೇ ಇದ್ದೀತು.

ಸ್ವಾತಂತ್ರ್ಯದ ಇಚ್ಛೆ ಮನುಷ್ಯನ ಜೀವನೇಚ್ಛೆಯ ಒಂದು ಅಂಗವೇ ಆಗಿದೆ. ಶತಮಾನಗಳ ವರೆಗೆ ಅದು ಒಳಗೊಳಗೇ ಹುದುಗಿರಬಹುದು. ಆದರೆ ಒಮ್ಮೆ ಅದು ಎಚ್ಚತ್ತು ಮಾಗಿತೆಂದರೆ ಅತ್ಯಂತ ಶೌರ್ಯದ ಪ್ರಯತ್ನಗಳನ್ನು ಪ್ರಚೋದಿಸುತ್ತದೆ. ಅಸಹಾಯತೆ, ಭಯಗಳು ಪರಿಣಾಮಕಾರಿ ಪ್ರಯತ್ನಗಳಿಗೆ ತಾತ್ಕಾಲಿಕವಾಗಿ ತಡೆಯೊಡ್ಡಬಹುದಾದರೂ ಯಾವುದೋ ಒಂದು ಕ್ಷಣದಲ್ಲಿ ಅದು ಅದಮ್ಯವಾಗಿ, 'ಮಾಡು ಇಲ್ಲವೆ

ಮಡಿ' ರೂಪವನ್ನು ತಾಳಿ ಯಶಸ್ಸನ್ನು ಸಂಪಾದಿಸಿಯೇ ತೀರುತ್ತದೆ.

ಭಾರತದಲ್ಲಿ ಅಷ್ಟು ಪ್ರಬಲವಲ್ಲದ ಹಿಂಸಾತ್ಮಕ ಕ್ರಾಂತಿ ಚಳವಳಿಯೊಂದು ಮೊದಲು ಇತ್ತು. ಲೋಕಮಾನ್ಯ ತಿಲಕರಿಗೆ ಅದರ ಸಂಪರ್ಕವಿತ್ತು. ಅವರು ಅದನ್ನು ಆಳರಸರ ಗಮನಕ್ಕೆ ತಂದು ಇದೊಂದು ಲಕ್ಷಣವೆಂದು ಹೇಳಿದರು. ಸ್ವರಾಜ್ಯವೆಂಬುದು ಜನ್ಮಸಿದ್ಧ ಹಕ್ಕು, ಜನ ಅದಕ್ಕಾಗಿ ಬಗೆಬಗೆಯಲ್ಲಿ ಹೋರಾಡದೆ ಬಿಡರೆಂದೂ ಸಾಧಿಸಿದರು. ಶ್ರೀ ಅರವಿಂದರೂ ಬಿಸಿ ನೆತ್ತರ ತರುಣರಲ್ಲಿ ಕ್ರಾಂತಿಯ ಉಗ್ರ ಮನಸ್ಸನ್ನು ಪ್ರಚೋದಿಸಿದರು; ಆದರೆ ಅವರು ಕೊನೆಯಲ್ಲಿ ಕ್ಷಾತ್ರದ ಬದಲು ಬ್ರಾಹ್ಮ ತೇಜಸ್ಸನ್ನು ಸ್ವೀಕರಿಸುವ ನಿರ್ಧಾರಕ್ಕೆ ಬಂದರು. ಗಾಂಧೀಜಿಯಾದರೋ ಅನ್ಯಾಯದ ವಿರುದ್ಧ ಹೋರಾಡುವಲ್ಲಿ ಕ್ಷತ್ರಿಯಸದೃಶವಾದ ವೀರ್ಯವನ್ನು ಪ್ರತಿಪಾದಿಸಿದರೂ ಅವರು ಹೋರಾಟಕ್ಕೆ ಬ್ರಾಹ್ಮ ತೇಜಸ್ಸಿನ ಆಯುಧಗಳನ್ನು ಅಂಗೀಕರಿಸಿದರು. ಅವರು ಮಾನವ ಆತ್ಮದಲ್ಲಿ ಅಂತರ್ಹಿತವಾದ ಆಚಾರಶುದ್ಧಿ, ಸತ್ಯ ಮತ್ತು ವಾಣಿಯ ಶಕ್ತಿಯನ್ನು ಅವಲಂಬಿಸಿದರು.

ನನ್ನ ತಲೆಮಾರಿನವರಲ್ಲಿ ಮೊದಲು ಸ್ವಾತಂತ್ರ್ಯ ಹೋರಾಟದ ಬೀಜ ಬಿತ್ತಿದ್ದು ೧೯೦೫-೦೬ ರ ಸ್ವದೇಶಿ ಚಳವಳಿ. ಲಾರ್ಡ್ ಕರ್ಜನ್ನನು ರಾಜಕೀಯ ಕಾರಣಗಳಿಗಾಗಿ ಬಂಗಾಲ ಪ್ರಾಂತವನ್ನು ಪೂರ್ವ-ಪಶ್ಚಿಮ ಎಂದು ಒಡೆಯಲು ನಿಶ್ಚಯಿಸಿದ್ದರಿಂದಾದ ಮನಃಕ್ಷೋಭವೇ ಈ ದೇಶದಲ್ಲಿ ಬ್ರಿಟಿಶ್ ಆಳಿಕೆಯ ವಿರುದ್ಧ ಸಾರ್ವತ್ರಿಕವಾಗಿ ಕಾಣಿಸಿಕೊಂಡ ಪ್ರಪ್ರಥಮ ಪ್ರತಿಭಟನೆಯಾಗಿದೆ. ಅದು ನಿರ್ಣಯವಾಗಿ ವ್ಯಕ್ತಗೊಳಿಸಲ್ಪಟ್ಟಿತು. ವಂಗಭಂಗ ಚಳವಳಿಯೆಂದು ಹೆಸರಾಂತ ಆ ಆಂದೋಲನದಲ್ಲಿ ಬ್ರಿಟಿಶ್ ಮತ್ತು ವಿದೇಶಿ ವಸ್ತುಗಳ ಬಹಿಷ್ಕಾರ ಮತ್ತು ಸ್ವದೇಶಿ ವಸ್ತುಗಳ ಉತ್ಪಾದನೆ ಇವೆರಡಕ್ಕೆ ಮಹತ್ವ ಕೊಡಲಾಯಿತು. ಅದರ ಪರಿಣಾಮವಾಗಿ ೧೯೦೬ರಲ್ಲಿ ಕಲಕತ್ತೆಯಲ್ಲಿ ದಾದಾಭಾಯಿ ನವರೋಜಿಯವರ ಅಧ್ಯಕ್ಷತೆಯಲ್ಲಿ ಸೇರಿದ ಕಾಂಗ್ರೆಸ್ ಅಧಿವೇಶನದಲ್ಲಿ ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ ಮತ್ತು ಸ್ವರಾಜ್ಯದ ಚರಮ ಗುರಿ—ಈ ಚತುರ್ಮುಖಿ ಕಾರ್ಯಕ್ರಮವನ್ನು ಒಪ್ಪಿಕೊಳ್ಳಲಾಯಿತು.

ತಿಲಕ, ಲಾಜಪತರಾಯ, ಬಿಪಿನ್ ಚಂದ್ರಪಾಲ ಮತ್ತು ಶ್ರೀ ಅರವಿಂದರ ನೇತೃತ್ವದಲ್ಲಿ ಆರಂಭವಾದ ಈ ಜಾಗೃತಿ ಆ ಕಾಲದಲ್ಲಿ ಶಾಲಾ ಬಾಲಕರಾಗಿದ್ದ ನಮ್ಮ ಮೇಲೆ ಬೀರಿದ ಪ್ರಭಾವ ಅಷ್ಟಿಷ್ಟಲ್ಲ. ನಾವು ಚಹಾ—ಕಾಫಿಗಳನ್ನು ಬಿಟ್ಟೆವು; ವಿದೇಶಿ ಸಕ್ಕರೆಯನ್ನು ಬಹಿಷ್ಕರಿಸಿದೆವು; ಸ್ವದೇಶಿ ಬಟ್ಟೆಯನ್ನು ಧರಿಸತೊಡಗಿದೆವು; ಬಿರಡೆ ಮೊದಲಾದ ವಸ್ತುಗಳನ್ನು ಸಮುದ್ರದ ಮತ್ತು ತೆಂಗಿನ ಚಿಪ್ಪುಗಳಿಂದ ತಯಾರಿಸಲು ಹವಣಿಸಿದೆವು. ಉಗ್ರಪಂಥಿ ಪತ್ರಿಕೆಗಳನ್ನು ಹಸಿದವರಂತೆ ಓದಿದೆವು; ಸಭೆಗಳಲ್ಲಿ ಭಾಗವಹಿಸಿದೆವು; ಸಾರ್ವಜನಿಕ ಸಮಾರಂಭಗಳಲ್ಲಿ ಸ್ವಯಂಸೇವಕರಾಗಿ ಕೆಲಸ ಮಾಡಿದೆವು. 'ವಂದೇ ಮಾತರಂ' ನಮ್ಮ ಮಂತ್ರವಾಯಿತು. ನಮ್ಮ ಒಂದೆರಡು ಸಾಹಸಗಳನ್ನು ಇಲ್ಲಿ ಹೇಳಬಹುದು. ನಾನಾಗ ಬೆಳಗಾವಿಯಲ್ಲಿ ಪ್ರಿಪರೇಟರಿ ಸ್ಕೂಲ್ ಎಂಬ ಒಂದು ಖಾಸಗಿ ಶಾಲೆಗೆ ಹೋಗುತ್ತಿದ್ದೆ. ತಿಲಕರ 'ಕೇಸರಿ' ಪತ್ರಿಕೆಯಲ್ಲಿ, ಪುಣೆಯಲ್ಲಿ ಮದ್ಯದಂಗಡಿಗಳೆದುರು ಪಿಕೆಟಿಂಗ್ ನಡೆಯುತ್ತಿದ್ದುದನ್ನು ನಾವು ಓದಿ. ಉಗಾರದ ಮಹಾದೇವ ದಿವೇಕರ ಎಂಬ ಹಿರಿಯ ವಿದ್ಯಾರ್ಥಿ ಮತ್ತು ಅವರ ಸಂಗಡಿಗರೊಡನೆ ಸೇರಿ ೧೯೦೬ರಲ್ಲಿ ಬೆಳಗಾವಿಯ ಜೋಗಾರ ವೇಸದ ಸೆರೆಯಂಗಡಿಯ ಮುಂದೆ ಪಿಕೆಟಿಂಗ್ ಪ್ರಾರಂಭಿಸಿದೆವು. ಇದಕ್ಕೆ ಶ್ರೀ ಯಾಳಗಿ ಮೊದಲಾದವರ ಬೆಂಬಲವಿತ್ತು. ಇವರ ಸಂಬಂಧದಲ್ಲಿ ಕೆಲವರಿಗೆ ಶಿಕ್ಷೆಯಾಯಿತು. ನಾವು ಗರಡಿ ಮನೆಯೊಂದರಲ್ಲಿ ಸೇರುತ್ತಿದ್ದೆವು. ದಿವೇಕರ [illegible]

ಲಾದವರು ಬ್ರಿಟಿಶ್ ಸಾಮ್ರಾಜ್ಯದ ವಿರುದ್ಧ ಹೋರಾಟ ಹೂಡಲು ಕಲಿ ಹಾಕಿದ್ದ ಹಳೇ ಖಡ್ಗಗಳು, ಭರ್ಚಿಗಳು ಮತ್ತು ಮುದಿ ಬಂದೂಕುಗಳನ್ನು ನಮಗೆ ತೋರಿಸಿದ್ದು ಅಲ್ಲಿಯೇ. ಇದೆಲ್ಲ ಹುಡುಗಾಟಿಕೆಯಾಗಿತ್ತು ನಿಜ. ಆದರೂ ಅವರ ಹಿಂದಿದ್ದ ಭಾವನೆಗಳು ಪ್ರಾಮಾಣಿಕವಾಗಿದ್ದವು. ಕೊನೆಗೆ ಅದಕ್ಕೇ ತಾನೆ ಪ್ರಾಮುಖ್ಯ ಇರುವುದು.

ಈ ಚಳವಳಿ ಕಾಲಾಂತರದಲ್ಲಿ ಮುಗ್ಗರಿಸಿತಾದರೂ ಮುಂದೆ ೧೯೧೪ ರಲ್ಲಿ ಹೋಂ ರೂಲ್ ಬೇಡಿಕೆಯ ರೂಪದಲ್ಲಿ ಪುನರುತ್ಥಾನ ಹೊಂದಿತು. ಅಂತೂ ಈ ಚಳವಳಿ ನನ್ನ ಜೀವನಕ್ಕೆ ಒಂದು ಹೊಸ ತಿರುವನ್ನು ನೀಡಿತು. ಅದು ನನ್ನಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಇಚ್ಛೆಯನ್ನು ಎಚ್ಚರಿಸಿತು. ಭಾರತೀಯ ಸಂಸ್ಕೃತಿಯ ಮೇಲೆ ಪ್ರೇಮವನ್ನು ಹುಟ್ಟಿಸಿತು ಮತ್ತು ಭಾರತದ ಜನತೆಯ ಸೇವೆ ಮಾಡಲು ಪ್ರೇರಣೆ ಕೊಟ್ಟಿತು. ೧೯೦೮ ರಲ್ಲಿ ಲೋಕಮಾನ್ಯ ತಿಲಕರಿಗೆ ಆರು ವರ್ಷಗಳ ಶಿಕ್ಷೆಯಾದಾಗ ನಾನು ಶಾಲೆ ತಪ್ಪಿಸಿದುದಕ್ಕೆ ನನ್ನನ್ನು ಶಾಲಾಧಿಕಾರಿಗಳು ದಂಡಿಸಿದರು; ಇದರಿಂದ ತಿಲಕರ ಬಗ್ಗೆ ನನ್ನ ನಿಷ್ಠೆ ಇನ್ನೂ ಬಲಿತಿತೆಂದು ಹೇಳಬಹುದು. ೧೯೧೪ರಲ್ಲಿ ಅವರ ಬಿಡುಗಡೆಯಾದ ಮರುದಿನ ಮುಂಜಾನೆಯೇ ಪುಣೆಯ ಗಾಯಕವಾಡದಲ್ಲಿ ಅವರ ದರ್ಶನಕ್ಕೆ ಹಾಜರಿದ್ದ ಮೊದಲಿಗರಲ್ಲಿ ನಾನೊಬ್ಬನಾಗಿದ್ದೆ. ೧೯೧೬ರಲ್ಲಿ ನಾನು ಪದವೀಧರನಾದೊಡನೆ ಅವರನ್ನು ಕಂಡು ನನ್ನ ದೇಶಸೇವಾ ಕಾರ್ಯಕ್ರಮದ ಬಗ್ಗೆ ಅವರ ಸಲಹೆ ಕೇಳಿದೆ. ೧೯೨೦ರಲ್ಲಿ ತಿಲಕರು ನಿಧನ ಹೊಂದಿದರು. ಗಾಂಧೀಯುಗ ಮೊದಲಾಯಿತು.

ಸ್ವಾತಂತ್ರ್ಯ ಹೋರಾಟದಲ್ಲಿ ಅನೇಕ ಹಿರಿಕಿರಿಯ ಜನರಂತೆ ನಾನೂ ಅನೇಕ ಸಲ ಸೆರೆಮನೆ ವಾಸವನ್ನು ಅನುಭವಿಸಿದೆ. ೧೯೨೨ರಲ್ಲಿ ನನಗಾದದ್ದು ಸಾದಾ ಶಿಕ್ಷೆಯಾದರೂ ನಮ್ಮನ್ನು ಯರವಡಾದ ಪ್ರತ್ಯೇಕ ವಿಭಾಗದಲ್ಲಿ ಪ್ರತ್ಯೇಕ ಪ್ರತ್ಯೇಕ ಕೋಣೆಗಳಲ್ಲಿ ದಿನದ ಇಪ್ಪತ್ನಾಲ್ಕು ತಾಸೂ, ಸ್ನಾನ ಊಟಗಳಾಗಿ ಒಂದು ಗಂಟೆ ಹೊರತು, ಒಂಟಿಯಾಗಿ ಬಂಧಿಸಿಡಲಾಗುತ್ತಿತ್ತು. ಎರಡು ಧಾರ್ಮಿಕ ಪುಸ್ತಕಗಳ ಹೊರತು ಯಾವ ಪುಸ್ತಕವನ್ನಾಗಲಿ ಲೇಖನ ಸಾಮಗ್ರಿಗಳನ್ನಾಗಲಿ ತರಗೊಡಲಿಲ್ಲ. ಕೆಲ ಕಾಲಾನಂತರ ಈ ಬಿಗಿ ಸ್ವಲ್ಪ ಸಡಿಲಿತೆನ್ನಿ. ರಾಜಕೀಯ ಕೈದಿಗಳಿಗೆ ಹೆಚ್ಚು ಪುಸ್ತಕಗಳನ್ನೂ ಚರಖಾಗಳನ್ನೂ ತರಲು ಅನುಮತಿ ಸಿಕ್ಕಿತು. ೧೯೩೦ರಲ್ಲಿ ಸಾಕಷ್ಟು ಬದಲಾವಣೆ ಕಂಡುಬಂತು. ಕೈದಿಗಳಲ್ಲಿ A, B, C ವರ್ಗಗಳನ್ನು ಮಾಡಿದರು.

೧೯೩೦ ರ ಶಿಕ್ಷೆಯ ಒಂದು ಸ್ವಾರಸ್ಯವೆಂದರೆ ಒಂದು ರಾತ್ರಿಯ ಮಟ್ಟಿಗೆ ಧಾರವಾಡ ಜೈಲಿನಲ್ಲಿ ನನಗೆ A ವರ್ಗ ಕೊಡಲ್ಪಟ್ಟು ಸೊಳ್ಳೆ ಪರದೆ, ಮಂಚಗಳನ್ನು ಒದಗಿಸಲಾಯಿತು. ಆದರೆ ಮರು ದಿನ ಮುಂಜಾನೆಯೇ ಜೈಲಧಿಕಾರಿ ಬಂದು ನನ್ನನ್ನು B ವರ್ಗಕ್ಕೆ ಇಳಿಸಲಾಗಿದೆ ಎಂದು ಹೇಳಿದ. ನನ್ನನ್ನು ಇನ್ನು ಯಾವಾಗ C ವರ್ಗಕ್ಕೆ ಇಳಿಸುವಿರಿ? ಎಂದು ಕೇಳಿದೆ. ಆತ ಕ್ಷಮೆ ಕೇಳುವವನಂತೆ ನಕ್ಕು ಇದೆಲ್ಲ ಮ್ಯಾಜಿಸ್ಟ್ರೇಟರ ನಿರ್ಣಯಕ್ಕೆ ಒಳಪಟ್ಟದ್ದೆಂದು ಹೇಳಿದ.

ನಾನು ಧಾರವಾಡ, ಬೆಳಗಾವಿ, ವಿಜಾಪುರ, ಯರವಡಾ, ನಾಸಿಕ ಸೆರೆಮನೆಗಳಲ್ಲಿ ಶಿಕ್ಷೆಯನ್ನು ಅನುಭವಿಸಿದ್ದುಂಟು.

ಮುಂದೆ ಜೈಲುವಾಸದ ಬಿಗಿ ಕಡಿಮೆಯಾಗಿ ನನಗೆ ಓದುವುದಕ್ಕೂ ಬರೆಯುವುದಕ್ಕೂ ಅಧ್ಯಯನಕ್ಕೂ ಮಾನವ ಸ್ವಭಾವ ಬೇರೆ ಬೇರೆ ಅನೈಸರ್ಗಿಕ ಪರಿಸ್ಥಿತಿಗಳಲ್ಲಿ ಹೇಗೆ ವ್ಯತ್ಯಾಸಗೊಳ್ಳುವುದೆಂದು ಅಭ್ಯಾಸ ಮಾಡಲಿಕ್ಕೂ ಅವಕಾಶ ದೊರಕಿತು. ಯರವಾಡಾ ಸೆರೆಮನೆಯಲ್ಲಾದ ಒಂದು ಘಟನೆಯನ್ನು ಇಲ್ಲಿ ಉಲ್ಲೇಖಿಸಬಹುದು. ೧೯೨೨ರ ಮೇ ತಿಂಗಳಲ್ಲಿ ಒಂದು ದಿನ ಅಪರಾಹ್ನ ೩ ಗಂಟೆಗೆ ಒಮ್ಮೆಂದೊಮ್ಮೆ ಜೈಲಧಿಕಾರಿಗಳು ನಾವೆಲ್ಲ ನಂನಮ್ಮ ಕೋಣೆಗಳಲ್ಲಿ ಭದ್ರವಾಗಿ ಬಂಧಿತರಾಗಿದ್ದೇವೋ ಇಲ್ಲವೋ ನೋಡಲು

ಬಂದರು. ಗಂಗಾಧರರಾವ್ ದೇಶಪಾಂಡೆಯವರನ್ನೊಳಗೊಂಡು ಕರ್ನಾಟಕದ ಐದಾರು ಮುಂದಾಳುಗಳು ಆಗ ಅಲ್ಲಿದ್ದರು. ನಾವು ಕೂಡಲೆ ಶಂಕರರಾವ್ ಬ್ಯಾಂಕರರೊಡನೆ ಮಹಾತ್ಮಾ ಗಾಂಧಿಯವರನ್ನು ಈ ಸೆರೆಮನೆಗೆ ತಂದಿರಬೇಕೆಂದು ತರ್ಕಿಸಿದೆವು. ಅದೇ ಡಿಸೆಂಬರದಲ್ಲಿ ನನ್ನ ಬಿಡುಗಡೆಯಾಗಲಿತ್ತು. ಗಾಂಧೀಜಿಯನ್ನು 'ಪ್ರತ್ಯೇಕ' ವಿಭಾಗದ ಹೊರ ಬರಾಕುಗಳಲ್ಲಿ ಇರಿಸಲಾಗಿತ್ತು. ನಾವು ಅವರ ಕೋಣೆಯನ್ನು ದಾಟಿ ಹೋಗುವಾಗ ನಿತ್ಯ ಮುಳ್ಳು ತಂತಿ ಬೇಲಿಯಾಚೆಗೆ ಅವರನ್ನು ಕಾಣುತ್ತಿದ್ದೆವು. ನನ್ನನ್ನು ಯರವಡಾದಿಂದ ಧಾರವಾಡ ಜೈಲಿಗೆ ವರ್ಗಾಯಿಸಿ ಅಲ್ಲಿಂದ ಬಿಡುಗಡೆ ಮಾಡುವವರಿದ್ದರು. ವರ್ಗಾವಣೆಯ ಮುನ್ನಾದಿನ ಸಂಜೆ ಗಾಂಧೀಜಿಯನ್ನು ನಾನು ಇಲ್ಲಿಂದ ಹೊರಡುವ ಮೊದಲು ಕಾಣಲು ಆಶಿಸುತ್ತೇನೆಂದು ಅವರಿಗೆ ಸುದ್ದಿ ಕಳಿಸಿದೆ. ಇಂಥ ಭೆಟ್ಟಿ ಜೈಲು ನಿಯಮಗಳಿಗೆ ವ್ಯತಿರಿಕ್ತವಾಗಿತ್ತು. ಅದ್ದರಿಂದ ಕರ್ನಾಟಕದವರೇ ಆಗಿದ್ದ ವಾರ್ಡರರ ಮೂಲಕ ಕಳಿಸಿದ ಸಂದೇಶಕ್ಕೆ ಗಾಂಧೀಜಿ ಒಪ್ಪಿಕೊಂಡರೆಂದು ಕೇಳಿ ನನಗೆ ಸೋಜಿಗವಾಯಿತು. ಒಪ್ಪಿಕೊಂಡಂತೆ ಅವರು ತಂತಿ ಬೇಲಿಯಾಚೆಗೆ ಬಂದು ನಿಂತರು. ನಾನು ಗೇಟಿನ ಬಳಿ ಸ್ವಲ್ಪ ದೂರದಲ್ಲಿ ನಿಂತಿದ್ದೆ. ಮಾತುಕತೆ ಸುಮಾರು ೧೫ ನಿಮಿಷ ನಡೆದಿರಬೇಕು. ನಾನು ಚರಖಾ, ಅಸ್ಪೃಶ್ಯತಾನಿವಾರಣೆ ಮೊದಲಾದವುಗಳನ್ನು ನಮ್ಮ ರಾಜಕೀಯ ಕಾರ್ಯಕ್ರಮದ ಅಂಗವಾಗಿ ಮಾಡಿಕೊಳ್ಳುವುದೇ ಮೊದಲಾದ ವಿಷಯಗಳಲ್ಲಿ ಹಲವಾರು ಪ್ರಶ್ನೆಗಳನ್ನು ಅವರಿಗೆ ಕೇಳಿದೆ. ೧೯೩೩ ಜನವರಿಯಲ್ಲಿ ಹೊರಗೆ ಬಂದ ಮೇಲೆ ನಾನು ಇವನ್ನೆಲ್ಲ ಅಡಕಗೊಳಿಸಿ, 'ಇಂದು ಮಹಾತ್ಮಾಜಿಯ ವಿಚಾರಗಳೇನು ?' (What Mahatmaji Thinks Today) ಎಂಬ ಹೆಸರಿನಲ್ಲಿ ಒಂದು ಹಸ್ತ ಪತ್ರಿಕೆ ಹೊರಡಿಸಿದೆ. 'ಬಾಂಬೆ ಕ್ರಾನಿಕಲ್' ಪತ್ರಿಕೆ ತನ್ನ ಅಗ್ರಲೇಖನದಲ್ಲಿ ಧಾರಾಳವಾಗಿ ಅದರಿಂದ ಅವತರಣಿಕೆಗಳನ್ನು ಕೊಟ್ಟಿತು.

ಅನೇಕ ದುಃಖಗಳನ್ನನುಭವಿಸಿ ಅನೇಕ ತ್ಯಾಗಗಳನ್ನು ಮಾಡಿದ ಮೇಲೆ ೧೯೪೭ ಅಗಸ್ಟ ೧೪ರ ಮಧ್ಯರಾತ್ರಿ ಭಾರತಕ್ಕೆ ಸ್ವಾತಂತ್ರ್ಯ ಬಂತು. ನಾವು ದಿಲ್ಲಿಯಲ್ಲಿ ಪಾರ್ಲಿಮೆಂಟಿನ ಕೇಂದ್ರ ಭವನದಲ್ಲಿ ಸಭೆಗೂಡಿದ್ದೆವು. ಅಷ್ಟರಲ್ಲೇ ನಾನು ಘಟನಾ ಸಮಿತಿಯ ಸದಸ್ಯನಾಗಿ ಆರಿಸಲ್ಪಟ್ಟಿದ್ದೆ. ನಾನು ಸೆರೆಮನೆಗೆ ಹೋಗಿ ಕಷ್ಟಪಟ್ಟಿರಬಹುದು ಮತ್ತು ಸ್ವಾತಂತ್ರ್ಯ ಬಂದ ಮೇಲೆ ಹೊಣೆಗಾರ ಅಧಿಕಾರ ಸ್ಥಾನಗಳನ್ನು ನಿರ್ವಹಿಸಿರಬಹುದು. ಆದರೆ ಇಂದು, ಈ ಕ್ಷಣದಲ್ಲಿ ನನಗೆ ಜೀವನ ಸಾರ್ಥಕ್ಯದ ಅನುಭವವಾಗುತ್ತಿರುವುದು ಬದುಕಿನ ಆರಂಭದಲ್ಲೇ ನಾನು ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಲು ನಿರ್ಧರಿಸಿದ್ದಕ್ಕಾಗಿ, ಆ ಹೋರಾಟದಲ್ಲಿ ಧೈರ್ಯದಿಂದ, ಅಹಿಂಸಾತ್ಮಕವಾಗಿ, ಗೌರವಪೂರ್ವಕವಾಗಿ ಭಾಗವಹಿಸಿದೆನೆಂಬುದಕ್ಕಾಗಿ, ಮತ್ತು ಇಂದು ೫೦ ಕೋಟಿ ಬಾಂಧವರೊಡನೆ ನಾನೂ ತನ್ನ ಉನ್ನತತರ ಭವಿತವ್ಯದ ಕಡೆ ಮುನ್ನಡೆಯುತ್ತಿರುವ ಸ್ವತಂತ್ರ ಭಾರತದ ನಾಗರಿಕನಾಗಿದ್ದೇನೆನ್ನುವುದಕ್ಕಾಗಿ. ✡

ಶಾಸಕನು ಪ್ರಜೆಗಳಿಂದ ಕರವಸೂಲು ಮಾಡುವುದು ಭ್ರಮರವು ಪುಷ್ಪಗಳಿಂದ ರಸ ಹೀರಿಕೊಳ್ಳುತಿರಬೇಕು.

— ಕೌಟಿಲ್ಯ

*

ಪಕ್ಷಿಯು ಆಕಾಶದಲ್ಲಿ ಹಾರುವುದಕ್ಕೆ ಎರಡು ಪಕ್ಕಗಳು ಬೇಕೇಬೇಕು. ಅದರಂತೆಯೇ, ಮನುಷ್ಯ ಮುಕ್ತಿಪಡೆಯಬೇಕಿದ್ದರೆ ಜ್ಞಾನಯೋಗ, ಕರ್ಮಯೋಗಗಳೆರಡೂ ಬೇಕೇಬೇಕು.

— ಯೋಗವಾಸಿಷ್ಠ

ಬಹುಶಃ ಮಾನವನ ಹೊರತು ಜೀವ ಜಗತ್ತಿನ ಬೇರಿನ್ನಾವ ಪ್ರಾಣಿಯೂ ತನ್ನ ಬದುಕಿನ ಬಗ್ಗೆ ಕೀಳು ಮನೋಭಾವವನ್ನು ಹೊಂದಿಲ್ಲ. ಬದುಕನ್ನು ಅನುಭವಿಸುವ ತನ್ಮಯತೆಯಲ್ಲಿ ಬಹುತೇಕ ಪ್ರಾಣಿಗಳು ಎಷ್ಟು ನಿಮಗ್ನವಾಗುತ್ತವೆಂದರೆ ಅವುಗಳಿಗೆ ಬದುಕು [illegible]. ಅಗತ್ಯವೇ, ಬದುಕಿನ ಗುರಿ ಏನು, ಬದುಕಿನ ಅನಂತರ ಏನು ಎಂಬಿತ್ಯಾದಿ ಬಹು ಜಟಿಲವಾದ ಪ್ರಶ್ನೆಗಳು ಹೊಳೆಯುವಷ್ಟು ಸಮಯವೂ ಇಲ್ಲವೆನಿಸುತ್ತದೆ. ಇಂದು ನಾಗರಿಕತೆಯು ಕೊಂಚವೂ ಮುಟ್ಟದ ಅನೇಕ ಆಫ್ರಿಕನ್, ದಕ್ಷಿಣ ಅಮೇರಿಕನ್ ಮೂಲನಿವಾಸಿಗಳು ಬದುಕನ್ನು ಬಾಳುವ ನಿರಪೇಕ್ಷ ವೈಭವವನ್ನು ನಮಗಿಂತ ಹೆಚ್ಚಾಗಿ ಮೈಗೂಡಿಸಿಕೊಂಡಿರುವಂತಿದೆ. ಯಾಕೆಂದರೆ ಯಾವ ಬದುಕಿನಿಂದ ನಮ್ಮ "ನಾಗರಿಕತೆ" ಹುಟ್ಟಿಕೊಂಡಿತೋ ಅದೇ ಬದು-

> **ಆಧುನಿಕ ಭಾರತೀಯ ಚಿಂತಕರಲ್ಲಿ ಜಿಡ್ಡು ಕೃಷ್ಣಮೂರ್ತಿಯವರು ತುಂಬ ಸ್ವತಂತ್ರ ಪಂಥದವರು. ಬದುಕನ್ನು ಕಾಣಬೇಕಾದ ನೀಳಪ್ತ ದೃಷ್ಟಿಯನ್ನು ಅವರು ತಮ್ಮ Total Process ಎಂಬ ಗ್ರಂಥದಲ್ಲಿ ಚರ್ಚಿಸಿದ್ದಾರೆ ಅದರ ಸಾರ ಇಲ್ಲಿದೆ.**

ತಪ್ಪಿಗೆ ಪಾಪದ ಭಯವನ್ನು ಹಾಗೂ ಒಳಿತಿಗೆ ಪುಣ್ಯದ ಫಲವನ್ನು ಕೊಡುಗೆಯಾಗಿ ಒಡ್ಡಿರುವವು. ಹೀಗಾಗಿ ವ್ಯಕ್ತಿಯ ನಡವಳಿಕೆಯ ಎರಡು ಧ್ರುವಗಳಾಗಿ ನೈತಿಕತೆ ಹಾಗೂ ಅನೈತಿ-ಕತೆಗಳನ್ನು ನಿಲ್ಲಿಸುವ ಬದಲು ಕಲ್ಪನಾತ್ಮಕ ಪಾಪ-ಪುಣ್ಯಗಳು, ಸ್ವರ್ಗ-ನರಕಗಳು ಮೈತಳೆದವು. ಪಾಪಭಯ ಯಾರಿಗೆ ಇಲ್ಲವೋ ಆತ

# ನಮ್ಮದೆಂಬುದು

❀ ಜಯಸುದರ್ಶನ

ಕನ್ನು ಇಂದದು ಒಂದು ಪಾಪದ ಫಲವಾಗಿ, ನಿಷ್ಫಲ ಕ್ರಿಯೆಯಾಗಿ ನೋಡುವ ಅಪಕ್ವ ಪ್ರವೃತ್ತಿಯನ್ನು ಬೆಳೆಸಿಕೊಳ್ಳುತ್ತಿದೆ. ನಮ್ಮ ಮತಗಳು ಬದುಕನ್ನು ಸಾಮಾನ್ಯವಾಗಿ ನೋಡುವ ದೃಷ್ಟಿ ಮೂರ್ಖತನದ್ದಾಗಿದೆ ಎನಿಸುತ್ತದೆ. ನಮ್ಮನ್ನು ಬದುಕಿನ "ಪಾಪ"ದಿಂದ ಮೇಲೆತ್ತುವ ಹಾಗೂ ಮೋಕ್ಷ ಕೊಡುವ ಅವತಾರಿಗಳ ಮತ್ತು ಬದುಕಿನ ನಿಷ್ಠೆಗೆ ಹೊರ-ತಾದ ಮತಗಳ ಹುಟ್ಟು ನಮ್ಮ ತಿಳಿಗೇಡಿತನಕ್ಕೂ ವಾಸ್ತವವನ್ನು ಮುಟ್ಟಿಕೊಳ್ಳಲಾಗದ ಪಲಾಯನ ಪ್ರವೃತ್ತಿಗೂ ದ್ಯೋತಕವಾಗಿದೆ. ಪ್ರಶ್ನೆಯೆಂದರೆ ಮಾನವ ಈ ಕ್ಷಣದಲ್ಲಿ ಬದುಕುತ್ತಿರುವ ಒಂದು ಕ್ರಿಯೆ—ಬಾಳು—ಹೇಗೆ ಕೀಳು? ಆತ ಬಯಸುವ ಮೋಕ್ಷ ಏನು ಅಥವಾ ಯಾತರಿಂದ?

ಇದುವರೆಗೆ ಮತಗಳು ತಪ್ಪನ್ನು ಮಾಡುವು[illegible] ಸ್ವತಃ ವ್ಯಕ್ತಿಯ ನೈತಿಕ ಮಟ್ಟ[illegible] ಪ್ರಯತ್ನಿಸುವ ಬದಲು

ನರಕವನ್ನೂ ಲೆಕ್ಕಿಸಲಾರ ಎಂಬುದು ಸ್ಪಷ್ಟವಾದಾಗ ಈ ಕಲ್ಪನೆ ಕುಸಿದುಬೀಳುತ್ತದೆ. ಇದರಂತೆ ಪುಣ್ಯಕ್ಕೆ ಒಂದು ಕ್ರಿಯೆಯೇ ಒಂದು ಸಾರ್ಥಕ ಬಹುಮಾನವಾಗಿರುವಾಗ ನಿಸ್ಪೃಹ ವ್ಯಕ್ತಿ ಸ್ವರ್ಗದಾಸೆಗಾಗಿ ಪುಣ್ಯ ಮಾಡಲಾರ. ಒಟ್ಟಾರೆ ಮತಗಳು ಬದುಕಿನ ಮತ್ತು ಅನಂತರದ ಅಸ್ತಿತ್ವಗಳನ್ನು ನಿರ್ಣಯಿಸುವ ಏಜೆಂಟರಾದವು. ಬಹುತರವಾಗಿ ಮತಗಳು ಜೀವನದ ಮೇಲೆ ವೈರಾಗ್ಯವನ್ನೂ ಅತೃಪ್ತಿಯನ್ನೂ ಬೋಧಿಸಿ ಮಾನವನ ಆಂತರಿಕ ಶೂನ್ಯತೆಯ ಹಾಗೂ ನಾಗರಿಕತೆಯ ದಿಗ್ಗೇಡಿತನದ ಪ್ರತೀಕವಾಗಿ ಬಂದವೆನಿಸುತ್ತದೆ. ಬದುಕನ್ನು ಒಂದು ಕೀಳು ಸ್ಥಿತಿಯೆಂದು ಭಾವಿಸುವ ಯಾವ ವ್ಯಕ್ತಿ ವಸ್ತುಸ್ಥಿತಿಗೆ ನ್ಯಾಯವನ್ನು ಮಾಡಿಯಾನು? ಮನುಷ್ಯ ತನ್ನ ಬದುಕಿನ ಬಗ್ಗೆ ಮತ್ತು ತನ್ನ ಬಗ್ಗೆ [illegible] ಮತ್ತು [illegible] ಸಂಧಾನವನ್ನು ಬಿಟ್ಟುಕೊಡುವವರೆಗೆ

ಸತ್ಯವನ್ನು ಕಾಣುವುದು ದುಸ್ಸಾಧ್ಯವೆಂದು ತೋರುತ್ತದೆ.

ಹುಟ್ಟಿದ್ದು ಬದುಕಲೆಂದೇ ಹೊರತು ಬದುಕಲು ಸಿದ್ಧತೆ ನಡೆಸಲಲ್ಲ ಎಂದು ಪ್ರಸಿದ್ಧ ರಶಿಯನ್ ಸಾಹಿತಿ ಬೋರಿಸ್ ಪಾಸ್ಟರ್‌ನಾಕ್ ಹೇಳುತ್ತಾನೆ. ಆದ್ದರಿಂದ ನಮ್ಮ ಜೀವನಕ್ಕೊಂದು ಗುರಿಯನ್ನು ರೂಪಿಸಿಕೊಳ್ಳುವುದು ಎಂದರೆ ಪ್ರಾಪಂಚಿಕ ಯಶಸ್ಸು ಪಡೆಯುವ ನೇರದಲ್ಲಿ ಸೂಕ್ತ ಪ್ರಯತ್ನಗಳನ್ನು ಮಾಡುವುದೇ ಆಗಿದೆ. ಇದರರ್ಥ ನಾವು ಸಮಾಜಕ್ಕೆ ಎಷ್ಟರ ಮಟ್ಟಿಗೆ ಉಪಯೋಗಕ್ಕೆ ಬರುವೆವೋ ಅಷ್ಟಕ್ಕೆ ಅಣಿಯಾಗುವುದಾಗಿದೆ. ಆದರೆ ಬದುಕಿಗೆ ಒಂದು ಆಧ್ಯಾತ್ಮಿಕ "ಗುರಿ" ಇರಬಲ್ಲದೇ? ಆಧ್ಯಾತ್ಮವೆಂಬುದು ವ್ಯಕ್ತಿಯಲ್ಲಿ ನಿಜತ್ವವನ್ನು ಪ್ರಚೋದಿಸುವ ಒಂದು ಶಕ್ತಿಯಾದರೆ ಅದು ಗುರಿಯೆನಿಸಲು ಸಾಧ್ಯವಿಲ್ಲ; ಅದು ಅವನ ಬದುಕಿನುದ್ದಕ್ಕೂ ಸಾಗುವ ಒಂದು ಪ್ರವಾಹವಾಗುತ್ತದೆ. ಒಬ್ಬ ವ್ಯಕ್ತಿ ತನ್ನ ಜನ್ಮದ ಬಗ್ಗೆ ಕನಿಕರವನ್ನೂ ಪಶ್ಚಾತ್ತಾಪವನ್ನೂ ಹೊಂದುತ್ತ ಮೋಕ್ಷಕ್ಕಾಗಿ ಹಂಬಲಿಸುವಾಗ, ಜೀವನ ನಿರರ್ಥಕ ಎಂದು ತಿಳಿದುಕೊಳ್ಳುತ್ತಿರುವಾಗ, ಆತ ಬದುಕನ್ನು ನೋಡುವ ದೃಷ್ಟಿ ಪೂರ್ವಗ್ರಹದಿಂದ ಕೂಡಿರುತ್ತದೆ. ಒಬ್ಬ ವ್ಯಕ್ತಿಗೆ ತನ್ನ ಪ್ರಸ್ತುತದ ಇರವೇ ಬೇಡವಾಗಿರುವಾಗ ಆತ ಇದನ್ನೂ ಒಳಗೊಂಡ ಮೋಕ್ಷದಾಯಕವಾದ ಬ್ರಹ್ಮವನ್ನು ಮೆಚ್ಚುವುದು ಹೇಗೆ? ಮೋಕ್ಷವೆಂದರೆ ವಿಶ್ವವ್ಯಾಪಿಯಾದ ಬ್ರಹ್ಮಚೇತನದೊಂದಿಗೆ ವಿಲೀನ ಹೊಂದುವುದು ಎಂದಾದರೆ ಆತ ಪ್ರಸ್ತುತ ಈ ವಿಶ್ವವ್ಯಾಪಿಯಾದ ಬ್ರಹ್ಮಚೇತನದಿಂದ ಹೇಗೆ ಹೊರಗೆ ಬಿದ್ದ? ಆದ್ದರಿಂದ ಮೋಕ್ಷ ಶಬ್ದದಲ್ಲಿ ವ್ಯಕ್ತಿ ಅಹಂಕಾರವನ್ನು ತ್ಯಜಿಸುವುದಷ್ಟೇ ಧ್ವನಿತವಾಗುತ್ತದೆ.

ಒಬ್ಬ ವ್ಯಕ್ತಿಗೂ ಇತರರಿಗೂ ಇರುವ ಸಂಬಂಧವನ್ನು ವಿವೇಚಿಸಿದರೆ ಗೋಚರವಾಗುವುದಿಷ್ಟು: ವ್ಯಕ್ತಿ ಪ್ರಪಂಚವನ್ನಲ್ಲ, ತನ್ನ ಅಹಮಿಕೆಯನ್ನು ತೊರೆಯಬೇಕು. ಎಂದರೇನೆ ಆತ ಇಡೀ ಸೃಷ್ಟಿಯಲ್ಲಿ ಒಂದು ಸ್ವಯಮೇವ ಘಟಕವಾಗಿ ಉಳಿದೂ ಇತರರೊಂದಿಗೆ ತಾದಾತ್ಮ್ಯವನ್ನು ಹಾಗೂ ಸ್ವಂತಿಕೆಯನ್ನು ಸಾಧಿಸಿಕೊಳ್ಳಬಹುದು. ಬುದ್ಧ ಅಹಮಿಕೆಯೇ ದುಃಖಕ್ಕೆ ಕಾರಣ ಎನ್ನುತ್ತಾನೆ. ಅಹಮಿಕೆಯನ್ನೂ, ಅದರ ಮೇಲಿನ ಅವಲಂಬನವನ್ನು, ಮಾನಸಿಕ ಶರಣಾಗತಿಯನ್ನು, ತೊರೆಯಬೇಕೆಂಬುದು ಅದರ ತಾತ್ಪರ್ಯ. ಆದ್ದರಿಂದ ಜೀವನದಲ್ಲಿ ಸುಖಪಡುವುದು, ಸುಖವನ್ನರಸುವುದು ಹಾಗೂ ಸೌಂದರ್ಯವನ್ನು ಆಸ್ವಾದಿಸುವುದು ಆಧ್ಯಾತ್ಮಿಕವಾಗಿಯೂ ಬಾಹಿರವಾಗುವುದಿಲ್ಲ. ವ್ಯಕ್ತಿ ವಿಶ್ವದೊಂದಿಗೆ ತನ್ನ ಸಂಪರ್ಕ ಹೇಗಿರಬೇಕೆಂದು ಚಿಂತಿಸುವುದು ಕೂಡ ಅನವಶ್ಯಕವಾಗಬಹುದು. ಯಾಕೆಂದರೆ ಆತ ಈಗಾಗಲೇ ವಿಶ್ವದ ಒಂದು ಭಾಗವಾಗಿದ್ದಾನೆ. ಮಾನವನಿಗಿಂತ ಕೀಳು ಹುಟ್ಟಿದ ಪ್ರಾಣಿಗಳಲ್ಲಿ ಈ ಬಗೆಯ ಚಿಂತನೆ ಇಲ್ಲದಿರುವುದು ಖಚಿತವಾದರೂ ಅವು ತಮ್ಮ ಜೀವನದ ಬಗ್ಗೆ ಸಂಪೂರ್ಣ ನಿಷ್ಠೆಯನ್ನು ಪ್ರದರ್ಶಿಸುವುದನ್ನು ಕಂಡು ಬೆರಗಾಗುತ್ತೇವೆ. ಅವುಗಳಿಗೆ ಇದು ಹೇಗೆ ಸಾಧ್ಯವಾಯಿತು? ಅವು ಸೃಷ್ಟಿಯೊಂದಿಗೆ ಯಾವುದೇ ಪೂರ್ವಗ್ರಹವಿಲ್ಲದೆ ವಿಲೀನವಾಗುವುದನ್ನು ಜಾಯಮಾನದಲ್ಲೇ ಪಡೆದಿರುತ್ತವೆ. ಇದು ನಮಗೇಕೆ ಸಾಧ್ಯವಿಲ್ಲ? ಇಲ್ಲಿ ನಮ್ಮ ವಿಶ್ವಕಲ್ಪನೆಯು, ಅರಿವಿನ ಮಿತಿ, ನಮ್ಮ ಮಾನಸಿಕ ಶಕ್ತಿಯು ಮತ್ತು ವಿಚಾರ ಶಕ್ತಿಯ ಮಿತಿಯೇ ಆಗಿರುತ್ತದೆ ಎಂಬುದನ್ನೂ ಗಮನಿಸಬೇಕು.

ಆದ್ದರಿಂದಲೇ ವಿಶ್ವದ ಬಗ್ಗೆ ನಮ್ಮ ಪೂರ್ವಗ್ರಹಪೀಡಿತವಾದ "ಅರಿತುಕೊಳ್ಳುವ" ಹಾಗೂ ನಮ್ಮ ಮೂಗಿನ ನೇರದ ಚಿಂತನೆ ಅಸಮರ್ಪಕ ಎನಿಸುತ್ತದೆ. ನಮ್ಮ ಪ್ರಸ್ತುತದ ಎಲ್ಲ ವೈಚಾರಿಕ, ಸಾಹಿತ್ಯಿಕ, ವೈಜ್ಞಾನಿಕ ಹಾಗೂ ಜೈವಿಕ ಸಾಧನೆಗಳಿಗೆ ಉತ್ಕ್ರಾಂತಿಯಷ್ಟೇ ಅಹಂಕಾರವೂ ಕಾರಣವಾಗಿದೆ ಎಂಬ ಮಾತು ನಿಜವಾದರೂ—ಈ ಅಹಂಕಾರ ವಿಶ್ವದಲ್ಲಿ ನಮ್ಮನ್ನು ತಾದಾತ್ಮ್ಯಗೊಳಿಸುವಲ್ಲಿ ಪರ್ಯವಸಾನವಾಗಬೇಕೇ ಹೊರತು—ನಾವು ವಿಶ್ವವನ್ನು ನಮ್ಮ ಮೂಗಿನ ನೇರಕ್ಕೆ ತಿದ್ದುವ ಹವ್ಯಾಸಕ್ಕೆ ಬಿದ್ದರೆ ಅದು ಕ್ಲೇಶಕ್ಕೆ ಕಾರಣವಾಗುತ್ತದೆ. ಸೃಷ್ಟಿ [illegible] ನಿರುದ್ದೇಶಪೂರ್ವಕ [illegible] (ಅದು ಇದೆ) ನಮ್ಮ [illegible]

ಗಳು ಅವಕ್ಕೆ ಈ ವರೆಗೆ "ಇದ್ದಿರದ" ಅರ್ಥವನ್ನು ಕೊಡಲಾರವು. ಆದ್ದರಿಂದ ನಮ್ಮ ಜೀವನಕ್ಕೆ ಮರ್ಯಾದೆ ಬೇಕೆನ್ನುವಾಗ ಅನಿಸುವುದಿಷ್ಟೇ: ನಾವು ಅನಿಚ್ಛಿತವಾಗಿ ಹಾಗೂ ದಾಯವಾಗಿ ಪಡೆದಿರುವ ಈ ಬದುಕನ್ನು ತಿರಸ್ಕರಿಸದೆ ಅದರೊಂದಿಗೆ ವಿಲೀನಗೊಂಡು ಅದರಾಚೆಗಿನ ಅನಂತವನ್ನು ಅರಿತುಕೊಳ್ಳುವ ಪ್ರಯತ್ನವನ್ನು, ನಮ್ಮ ಮಿತಿಯಲ್ಲೇ ಆಗಲಿ, ಕೈಗೊಳ್ಳೋಣ. ಪರಿಸರಕ್ಕೆ, ಆನುವಂಶಿಕತೆಗೆ, ಸ್ವತಃಪ್ರಜ್ಞೆಯ ಮಿತಿಗೆ ಸೀಮಿತವಾದ ನಮ್ಮ ಮಿದುಳಿನಲ್ಲೇ ಈ ಅರಿವು ಮೂಡಬೇಕಷ್ಟೇ. ಈ ವಿಶ್ವವನ್ನು ವ್ಯಾಪಿಸಿ, ಅದನ್ನು ಒಳಗೊಂಡಿರುವ ಒಂದು ಅಂತ್ಯವಿಲ್ಲದ ಮಹಾ ಪ್ರಜ್ಞೆಯನ್ನು ಅರಿತುಕೊಳ್ಳುವ ನೇರದಲ್ಲಿ ನಮ್ಮ ಮಿದುಳು ಒಂದು ವಾಹಕ ಮತ್ತು ಈ ಪ್ರಜ್ಞೆಯ ಅರಿವು ನಮಗೆ ತಲುಪಲು ಮಿದುಳು ಸಹಕರಿಸುತ್ತದೆ. ಆದರೆ ಪ್ರಜ್ಞೆಯ ತಿಳುವಳಿಕೆಯ ಹುಟ್ಟು ಮಿದುಳಿನಲ್ಲಿ ಅಲ್ಲ ಎಂದೂ ಕೆಲವರು ಜಿಜ್ಞಾಸುಗಳು ವಾದಿಸುತ್ತಾರೆ. ಹೇಗಿದ್ದರೂ ಈ ಅನಂತ ಪ್ರಜ್ಞೆಯ ಅರಿವು ನಮಗೆ ನಮ್ಮ ಮಿದುಳಿನ ಮೂಲಕವೇ ಆಗಬೇಕಷ್ಟೇ. ಆದ್ದರಿಂದಲೇ ನಮ್ಮ ಇರವಿನ ಮಿತಿಯೇ ನಮ್ಮ ಅರಿವಿನ ಮಿತಿಯಾಗಿದೆ. ಇದರಾಚೆಗಿನ ಅನಂತವನ್ನು ನಾವು ಇಡಿಯಾಗಿ ಅನುಭವಿಸಲಾರೆವು. ಬಹಳವೆಂದರೆ ಅದರ ಒಂದು ಮುಖವನ್ನು, ಒಂದು ಸ್ಥಿತಿಯನ್ನು ಅನುಭವಿಸಬಲ್ಲೆವು.

ಹೀಗಾಗಿ ನಾವು ಇರವಿನ ಮಿತಿಯನ್ನು ವಿಸ್ತರಿಸಿಕೊಳ್ಳಲೆತ್ನಿಸುವಾಗ ಅದರ ಬಗ್ಗೆ ಅನನ್ಯವಾದ ಶ್ರದ್ಧೆಯನ್ನು ಹೊಂದಿರಬೇಕಾದ್ದು ಅನಿವಾರ್ಯ. ಆದ್ದರಿಂದ ಜೀವನದ ಬಗ್ಗೆ ವ್ಯಕ್ತಿ ತುಂಬ ನಿಷ್ಠೆಯನ್ನು, ಜವಾಬ್ದಾರಿಯನ್ನು ಹೊಂದಿರಬೇಕಾಗುತ್ತದೆ. ಬದುಕಿಗೆ ನಿಷ್ಠೆ ತೋರುವುದೆಂದರೆ ಅದರ ಬಗ್ಗೆ ಪೂರ್ವಗ್ರಹಗಳನ್ನು ತ್ಯಜಿಸುವುದೇ ಆಗಿದೆ; ಅದನ್ನು ಅಭಿಪ್ರಾಯಗಳ,— ತನ್ನದು ಮತ್ತು ಇತರರದು,— ಮಿತಿಗೆ ಸಿಲುಕಿಸದೆ ಅಖಂಡವಾಗಿ ನೋಡು[illegible]ದೆ. ತೀರ್ಪು ಕೊಡಲು ನಾವಾರು?

ಆದರೆ ಆದರ್ಶಗಳೂ ಉದ್ದೇಶಗಳೂ ಇಲ್ಲದ ಬದುಕನ್ನು ನಿರಪೇಕ್ಷವಾಗಿ ಬಾಳುವುದು ಕಷ್ಟವಾಗಿ ಕಾಣುತ್ತದೆ. ಗುರಿಯಿಲ್ಲದ ಬದುಕು ದಿಗ್ಗೇಡಿ, ಮಹತ್ವಾಕಾಂಕ್ಷೆಯಿಲ್ಲದ ವ್ಯಕ್ತಿ ನಿಷ್ಪ್ರಯೋಜಕ ಅಥವ ಬದುಕನ್ನು ವ್ಯರ್ಥವಾಗಿ ಕಳೆಯುವವನು ಎಂಬಿತ್ಯಾದಿ ಸ್ವತಃಸಿದ್ಧ ಅಭಿಪ್ರಾಯಗಳು ಕೇಳಿಬರುತ್ತವೆ. ಹೀಗೆ, ಬದುಕನ್ನು ಎದುರಿಸಹೋಗುವ ಒಬ್ಬ ವ್ಯಕ್ತಿಗೆ ತನ್ನ ಸ್ವತಃಸಿದ್ಧ ಅಥವ ಎರವಲು ಪಡೆದ ಆದರ್ಶಗಳು ಬದುಕುವ ಕ್ರಿಯೆಗಿಂತ ಮುಖ್ಯವಾಗಿವೆ. ಅವನ ಪಾಲಿಗೆ ಈ ಆದರ್ಶಗಳ ಸಾಧನೆಗಾಗಿ ಅಥವಾ ಗುರಿ ಮುಟ್ಟುವ ಸಲುವಾಗಿ ಬದುಕೆಂಬುದು ನಡುವಣ ಅನಿವಾರ್ಯವೂ, ಅಪರಿಹಾರ್ಯವೂ ಆದ ಒಂದು "ಹಾದಿ"ಯಾಗುತ್ತದೆ. ಸದಾ ದಿಗಂತದತ್ತ ಕಣ್ಣಿರಿಸಿ ನಡೆಯುವ ವ್ಯಕ್ತಿ ಇಂತು ತಾನು ಕಳೆಯುವ ದಾರಿಯ ಬಗ್ಗೆ ನಿರ್ಲಕ್ಷ್ಯ ತೋರುವನಲ್ಲದೆ ಅವನಿಗೂ ದಿಗಂತಕ್ಕೂ ಸದಾ ಅಂತರ ಉಳಿದೇ ಇರುತ್ತದೆ.

ತೊಂದರೆಯೆಂದರೆ ನಾವು ಬದುಕನ್ನು ಅದು ಇದ್ದಂತೆ ಸ್ವೀಕರಿಸಲು ಧೈರ್ಯ ತಾಳುವುದಿಲ್ಲ. ಒಂದು ಕಲ್ಪನೆಯ ಆದರ್ಶ, ಗುರಿಗಳು ನಮಗೇಕೆ ಬದುಕುವ ಕ್ರಿಯೆಗಿಂತ ಹೆಚ್ಚು ಆಕರ್ಷಕವಾಗಿ ಕಾಣಬೇಕು? ನಾವು ಅಂತರಿಕವಾಗಿ ಖಾಲಿಯಾಗಿರುವುದರಿಂದ ಅದನ್ನು ಈ ಆದರ್ಶಗಳಿಂದ ತುಂಬಿಕೊಳ್ಳಲು ಯತ್ನಿಸುತ್ತೇವೆಯೆ? ವ್ಯಕ್ತಿಯ ಅಹಂ ಸದಾ ಹಿಗ್ಗಲು ಹವಣಿಸುತ್ತದೆ. ಗೆಳೆಯ, ಸೋದರ, ಸೋದರಿ, ಹೆಂಡತಿ, ಮಕ್ಕಳು, ಮನೆ, ಆಸ್ತಿ, ಕೀರ್ತಿ ಇತ್ಯಾದಿಗಳನ್ನು ಪಡೆಯಲು ಒಬ್ಬ ವ್ಯಕ್ತಿ ಹಾತೊರೆಯುತ್ತಾನೆ. ಇಲ್ಲಿ ಹೇಳಲ್ಪಡ ಸಂಬಂಧಿಗಳ, ಮತ್ತಿತರ ಸಂಗತಿಗಳ ಬಗ್ಗೆ ವ್ಯಕ್ತಿಗಿರುವ ಪ್ರೇಮ ಅಥವ ಮೋಹ ಮೂಲತಃ ಸ್ವಮೋಹ ಹಾಗೂ ಸ್ವಾರ್ಥವೇ. ಜಗತ್ತಿನಲ್ಲಿ ಸ್ಥಾನ ಪಡೆದುಕೊಳ್ಳಲು, ಜನರಿಂದ ಹೊಗಳಿಸಿಕೊಳ್ಳಲು, ಜನನಾಯಕನಾಗಲು, ಬರಹಗಾರನಾಗಲು, ಕವಿಯಾಗಲು, ಮಹಾಪುರುಷರೆಂದು ಅನ್ನಿಸಿಕೊಳ್ಳಲು ನಮ್ಮಲ್ಲಿ ಅನೇಕರು ಹಾತೊರೆಯುತ್ತಾರೆ. ಇದರ ಹಿನ್ನೆಲೆಯಲ್ಲಿ ವ್ಯಕ್ತಿಯ ಒಳಗಿನ ಶೂನ್ಯವನ್ನು ತುಂಬಿ

ಕೊಳ್ಳುವ ಪ್ರಯತ್ನ ನಿರಂತರವಾಗಿ ಸಾಗಿರುವುದು ಕಂಡುಬರುತ್ತದೆ. ಆದರೆ ಈ ಶೂನ್ಯವನ್ನು ಹೀಗೆ ತುಂಬಿಕೊಳ್ಳಲು ಆಗದು. ವ್ಯಕ್ತಿಯ ಬಯಕೆಗಳು, ಆತ ಹೊಂದಿರುವ ವಸ್ತುಗಳು ಹೆಚ್ಚಿದಂತೆ ಆತನ ಖಾಲಿತನವೂ ಹೆಚ್ಚುತ್ತದೆ.

ನಮ್ಮ ಜೀವನದ ಒಂಟಿತನದಲ್ಲಿ ಮತ್ತು ಖಾಲಿತನದಲ್ಲಿ ನಮಗೆ ಬುದ್ಧಿವಂತಿಕೆ ಅತ್ಯಂತ ಮೋಹಕವೂ ಅನಿವಾರ್ಯವೂ ಆಗುತ್ತದೆ. ಇಲ್ಲಿ "ಬುದ್ಧಿವಂತಿಕೆ" ಎಂಬ ಪದವನ್ನು ಇಂಗ್ಲೀಷಿನ "ಇಂಟೆಲಿಜೆನ್ಸ್" ಪದದ ಸಂವಾದಿಯಾಗಿ ಬಳಸುತ್ತಿದ್ದೇನೆ. ಧನವನ್ನು ಕೆಲವರು ಸಂಗ್ರಹಿಸುವ ಹಾಗೆ ಇನ್ನು ಕೆಲವರು ಬುದ್ಧಿಸಂಗ್ರಹಣೆಗೆ, ಜ್ಞಾನಸಂಪಾದನೆಗೆ ಪ್ರಯತ್ನಿಸುತ್ತಾರೆ. ಬದುಕಿಗೆ ಜ್ಞಾನ ಮತ್ತು ಜ್ಞಾನಾರ್ಜನೆ ಅಗತ್ಯ ಎಂದು ಒಪ್ಪಿಕೊಳ್ಳೋಣ. ಆದರೆ ಅದನ್ನು ಸಂಗ್ರಹಿಸುವುದಕ್ಕೆ ಈ ಬಗೆಯ ಮೋಹವೇಕೆ? ಅದರ ಮೇಲೆ ಮಾನಸಿಕವಾದ ಅವಲಂಬನವೇಕೆ? ನಾನು ಟೊಳ್ಳು. ಈ ಟೊಳ್ಳನ್ನು ಜ್ಞಾನದಿಂದ, ಬುದ್ಧಿವಂತಿಕೆಯಿಂದ ತುಂಬಿಕೊಳ್ಳಲು ಯತ್ನಿಸುತ್ತಿದ್ದೇನೆ ಎಂಬುದನ್ನು ಈ ಸಂಗ್ರಹ ಮಾಡುವ ಪ್ರವೃತ್ತಿ ಸೂಚಿಸುತ್ತದೆ. ಇನ್ನು ಆಧ್ಯಾತ್ಮದ ಹಂಬಲವೂ ಇದಕ್ಕಿಂತ ಭಿನ್ನವಾದುದಲ್ಲ. ಪರಮ ಸತ್ಯವಾದ ದೇವರನ್ನು ಪಡೆಯಲು ವರ್ಷಗಟ್ಟಲೆ ಅನೇಕರು ಪ್ರಯತ್ನಿಸುತ್ತಾರೆ. ಅದನ್ನು ಕೆಲ ನಿಯಮಗಳು, ಸಂಪ್ರದಾಯಗಳಿಂದ ಪಡೆದುಕೊಳ್ಳಲು ಸಾಧ್ಯ ಎಂದು ಅನೇಕರು ಭಾವಿಸಿದಂತಿದೆ. ಇದರ ಹಿನ್ನೆಲೆಯೇನು? ದೇವರನ್ನು ಮತ್ತು ಗುರಿಯನ್ನು ಹೊಂದದೆ ಇರುವ ಒಂದು ಖಾಲಿ ಸ್ಥಿತಿಯಿಂದ ಹೊಂದುವ ಪೂರ್ಣ ಸ್ಥಿತಿಯನ್ನು ಪಡೆಯುವ ಆಸೆ. ಅಂದರೆ ಇಲ್ಲಿ ಕ್ರಿಯೆಗೂ ಯೋಜನೆಗೂ ಸ್ಥಿತಿಗೂ ಗತಿಗೂ ನಡುವೆ ಕಾಲಾವಕಾಶವಿದೆ. ಇಂಥ ಕಾಲಾವಕಾಶದಲ್ಲಿ ದೇವರನ್ನು ಅಥವ ಪರಿಪೂರ್ಣತೆಯನ್ನು ಪಡೆಯಲು ನಾವು ಯೋಜನಾಬದ್ಧ ಕಾರ್ಯಕ್ರಮ ಹಾಕುತ್ತೇವೆ. ಹೀಗೆ ಸ್ಥಿತಿಗೂ ಗತಿಗೂ ನಡುವೆ ಅಂತರ ಉಂಟಾದಾಗ ಕ್ಲೇಶ ಹುಟ್ಟುತ್ತದೆ. ಸ್ಥಿತಿಗೂ ಗತಿಗೂ ನಡುವೆ ಯಾವ ಅಂತರವೂ ವ್ಯತ್ಯಾಸವೂ ಇಲ್ಲದಾಗಲೇ ವ್ಯಕ್ತಿ ಅನಂತವನ್ನು ಅನುಭವಿಸಬಲ್ಲನೆಂದು ದಾರ್ಶನಿಕ ಜಿಡ್ಡು ಕೃಷ್ಣಮೂರ್ತಿ ಹೇಳುತ್ತಾರೆ. ಅಂದರೆ ದೇವರಿಗಾಗಿ ಕೈಕೊಳ್ಳುವ ಸಾಧನದ ಹುಡುಗಾಟವನ್ನು ನಾವು ಕೊನೆಗೊಳಿಸಬೇಕು. ಮುಖ್ಯವಾಗಿ ನಮ್ಮನ್ನು ನಾವು ಇರುವಂತೆ ಪ್ರಾಮಾಣಿಕವಾಗಿ ಒಪ್ಪಿಕೊಳ್ಳಬೇಕು. ಇರವನ್ನು ಅದು ಇರುವಂತೆ ಕಾಣಲು ಕಲಿಯಬೇಕು. ಇಂತಹ ಸ್ಥಿತಿಗೂ ಗತಿಗೂ ವ್ಯತ್ಯಾಸವಿಲ್ಲದ ಬದುಕಿನಲ್ಲಿ ವ್ಯಕ್ತಿ ಅನುಭವವನ್ನು ಅನುಭಾವಕ್ಕೆ ಒಯ್ಯಲು ಸಾಧ್ಯವೆಂದು ತೋರುತ್ತದೆ. ಸ್ಥಿತಿಗೂ ಗತಿಗೂ ನಡುವಣ ಅಂತರವನ್ನು ತೊಡೆಯುವುದೆಂದರೆ ಗತಿಗಾಗಿ ಹಂಬಲಿಸದ ಸಂಪೂರ್ಣ ನಿರಪೇಕ್ಷ ಪ್ರವೃತ್ತಿಯೇ. ಇಂಥ ನಿರಪೇಕ್ಷೆಯಲ್ಲಿ ವ್ಯಕ್ತಿ ಅವ್ಯಕ್ತವನ್ನು, ಅನಂತವನ್ನು ಅನುಭವಿಸಲು ಸಾಧ್ಯ.

ಮೂಲಭೂತವಾಗಿ ಒಬ್ಬ ವ್ಯಕ್ತಿ ಬದುಕಲು ಯಾವ ಆದರ್ಶವನ್ನೂ ಬೇರಿನ್ನಾವನನ್ನೂ ಅನುಸರಿಸುವ ಅವಶ್ಯಕತೆ ಇಲ್ಲ. ಸ್ವಾಮಿ ವಿವೇಕಾನಂದರು ಹೇಳಿದಂತೆ ಪ್ರತಿಯೊಬ್ಬರೂ ಇನ್ನೊಬ್ಬರನ್ನು ಅನುಸರಿಸಬೇಕೆಂದಿದ್ದರೆ ದೇವರೇಕೆ ಎಲ್ಲರಿಗೂ ಕಣ್ಣು ಕಿವಿ ಮೂಗುಗಳನ್ನು ಕೊಡುತ್ತಿದ್ದ? ಹೀಗೆ ವ್ಯಕ್ತಿ ಸರ್ವ ಪ್ರಭಾವಗಳಿಂದ ಮುಕ್ತನಾದಾಗಲೇ, ಮುಕ್ತಿಯ ಹಂಬಲವನ್ನು ಬಿಟ್ಟಾಗಲೇ, ಆತ ಜೀವನವನ್ನು ಸಮಗ್ರವಾಗಿ, ನಿರ್ಮೋಹವಾಗಿ ಕಾಣಲು ಸಾಧ್ಯ. ಇಲ್ಲಿ ಕಾಣುವ ಕ್ರಿಯೆ ನಿರ್ಮಮವಾಗಿರಬೇಕು. ಆದರೆ ಇಂದು ಕೆಲವರ ಆತ್ಮವಂಚನೆ ಎಷ್ಟು ದೂರ ಸಾಗಿದೆಯೆಂದರೆ, ಎಷ್ಟು ಸೂಕ್ಷ್ಮವಾಗಿದೆಯೆಂದರೆ ಅವರಿಗೆ ಐಹಿಕ ಭೋಗಗಳು ಬೇಕಿಲ್ಲ. ಅವರು "ಸತ್ಯ"ವನ್ನು ಹುಡುಕುತ್ತಿದ್ದಾರೆ. ಸತ್ಯ ಇಂದು ಅತ್ಯಂತ ದಿವಾಳಿಯೆದ್ದ ಟೊಳ್ಳು ಹಾಗೂ ಡಾಂಭಿಕ ಶಬ್ದವಾಗಿದೆ. ಈ ಹುಡುಕಾಟದ ಗೊತ್ತುಗುರಿಗಳು ಅವರಿಗೇ ಗೊತ್ತಿಲ್ಲ. ಉದಾಹರಣೆಗೆ ದೇವರು ಇದ್ದಾನೋ ಇಲ್ಲವೊ ಎಂಬ ಸಂದೇಹ ಇರುವವರು ದೇವರನ್ನು ಹುಡುಕಲು ಹೊರಡುತ್ತಾರೆ. ಸತ್ಯ ಸರ್ವಕಾಲಿಕ, ವಿಶ್ವವ್ಯಾಪಿ ಎಂದಾಗ ಅದನ್ನು ಹುಡುಕುವುದು

ಎಲ್ಲಿ? ಈ ಕ್ಷುಲ್ಲಕ ಹುಡುಕಾಟ ವಾಸ್ತವಿಕತೆಯಿಂದ ತಪ್ಪಿಸಿಕೊಳ್ಳುವ ಒಂದು ಹೂಟವಾಗಿದೆ. ಇದು ತಪ್ಪಿದಾಗಲೇ, ಸತ್ಯದರ್ಶನದ ಹಂಬಲ ಇಲ್ಲವಾಗಲೇ ವ್ಯಕ್ತಿ ಬದುಕನ್ನು ಅದು ಇದ್ದಂತೆ ಮತ್ತು ತನ್ನನ್ನು ತಾನಿದ್ದಂತೆ ಕಾಣಲು ಕಲಿಯುತ್ತಾನೆ. ಆಗ ಅನಂತರ ದರ್ಶನ ಆದರೂ ಆದೀತು. ತನ್ನನ್ನು ಹಾಗೂ ಪರಿಸರವನ್ನು ಯಥಾಸ್ಥಿತಿಯಲ್ಲಿ ನೋಡುವುದೆಂದರೆ ಸತ್ಯದ ಒಂದು ಮುಖವನ್ನು ಕಂಡಂತೆಯೇ ಅಲ್ಲವೇ? ಯಾಕೆಂದರೆ ಸತ್ಯ ಈ ಬದುಕಿನಿಂದ ಆಚೆಗೆ ಇಲ್ಲ. ಅದನ್ನು ಹುಡುಕಲು ಸಾಧ್ಯವಿಲ್ಲ. ಅದಕ್ಕೆ ಪಥವಿಲ್ಲ.

ಕಷ್ಟವೆಂದರೆ ನಾವೆಲ್ಲ ಒಂದು ಪರಿಸ್ಥಿತಿಯ, ಭಾಷೆಯ, ಚರಿತ್ರೆಯ, ಆನುವಂಶಿಕತೆಯ ದಾಸರು. ಒಂದು ಪಂಗಡಕ್ಕೆ, ಮತಕ್ಕೆ, ಗುಂಪಿಗೆ ಸೇರುವುದು ನಮಗೆ ಅತ್ಯಂತ ಪ್ರಿಯವಾಗುತ್ತದೆ. ಯಾಕೆಂದರೆ ಅದು ಸ್ವಂತ ಚಿಂತನೆಯ ಕಷ್ಟವನ್ನು, ಅನಿಶ್ಚಿತತೆಯನ್ನು ತಪ್ಪಿಸುತ್ತದೆ. ನಮ್ಮ ಬಗ್ಗೆಯೇ ನಮಗೆ ಸಂದೇಹಗಳಿವೆ, ಭಯವಿದೆ. ಇವುಗಳನ್ನು ಸದಾ ನಾವು ಮರೆಯಲು ಪ್ರಯತ್ನಿಸುತ್ತೇವಲ್ಲದೆ ಎದುರಿಸಲು ಧೈರ್ಯ ಹೊಂದುವುದಿಲ್ಲ. ನಮ್ಮ ಪರಿಸರದ ಪ್ರಭಾವದಿಂದಾಚೆ ಮುಕ್ತವಾಗಿ ನಿಂತು ಜೀವನವನ್ನು ಸಮಗ್ರವಾಗಿ ನೋಡುವ ದೃಷ್ಟಿ ನಮಗೆ ಬಂದಿಲ್ಲ. ಹಾಗೆ ಅದನ್ನು ಪಡೆಯುವ ಇಚ್ಛೆಯೂ ನಮ್ಮಲ್ಲಿ ಅನೇಕರಿಗಿಲ್ಲ. ನಮಗೆ ಒಂದು ಆಶ್ವಾಸನೆ, ಆಧಾರ, ಆವರ್ಣಗಳು ಜೀವನಕ್ಕಿಂತ ಹೆಚ್ಚು ಅಗತ್ಯವೂ ಅನಿವಾರ್ಯವೂ ಆಗಿರುವುದು ಇವಕ್ಕೆ ಕಾರಣ. ಹೀಗಾಗಿ ನಾವು ಸದಾ ಬದುಕಿನ ವಾಸ್ತವಿಕತೆಯಿಂದ ಪಾರಾಗುವ ಚಿಂತೆಯಲ್ಲಿದ್ದೇವೆಯೇ ಹೊರತು ಅದನ್ನು ಸಮಗ್ರವಾಗಿ ಅನುಭವಿಸುವ ಕಲೆಯನ್ನು ಕಲಿತಿಲ್ಲ.

ನಾವು ಬದುಕನ್ನು ಪರಂಪರಾಗತ ಭಾವದಿಂದ, ಶಾಸ್ತ್ರದಿಂದ, ಅಸಹಾಯಕತೆಯಿಂದ. ಅಹಂಕಾರ ನೋಟದಿಂದ, ಇಚ್ಛೆಯಿಂದ, ನಿರಾಶೆಯಿಂದ, ಸೋಗಿನಿಂದ ನೋಡಲು ಕಲಿಯುತ್ತೇವಲ್ಲದೆ ನಿರಪೇಕ್ಷವಾಗಿ ನೋಡುವುದಿಲ್ಲ. ನಿರಪೇಕ್ಷವಾಗಿ ನೋಡುವುದೆಂದರೆ ನಮ್ಮ ಇಷ್ಟಾನಿಷ್ಟಗಳ ಹೊರತ್ತ-

ಯೊಡೆದು ಬದುಕಿಗೆ ಮೈಯೊಡ್ಡುವುದೇ. ನಮ್ಮ ವ್ಯಕ್ತಿತ್ವವನ್ನು ಅಭಿಪ್ರಾಯರಹಿತವಾಗಿ, ಗೋಡೆಗಳನ್ನು ಕಟ್ಟದೆ, ಬದುಕಿನ ಅನಿಶ್ಚಿತತೆಗೆ ತೆರೆದಿಡಲು ನಮಗೆ ಭಯವಾಗುತ್ತದೆ. ಅಪರಿಚಿತತೆಯ ಬಗ್ಗೆ ನಮಗೆ ಭಯವಿದೆ. ಬದುಕಿನ ಸಮಗ್ರತೆ ಅಪರಿಚಿತವೇ. ಎಂತಲೇ ಹೇಡಿಗೆ ಬದುಕನ್ನು ಎದುರಿಸುವಾಗ ಮತದ ಊರುಗೋಲು ಬೇಕಾಗುತ್ತದೆ. ಆತ ಬದುಕನ್ನು ಬಾಳುವುದಿಲ್ಲ. ತನ್ನ ಅಭಿಪ್ರಾಯಗಳ, ಭಯಗಳ, ಆಕಾಂಕ್ಷೆಗಳ ಬಲೆಯಲ್ಲಿ ಆತ ಸಿಲುಕಿದ್ದಾನೆ. ಅದೇ ಆತನಿಗೆ ಹಿತವೆನಿಸುತ್ತದೆ. ಈ ಬಿಕ್ಷೆಯ ಪರಿಚಯ ಅವನಿಗಿದೆ. ಅವನ್ನಾತ ಬಲ್ಲ. ಆದರೆ ಬದುಕಿನ ಅನಿಶ್ಚಿತತೆಯನ್ನಾತ ಬಲ್ಲ. ಯಾಕೆಂದರೆ ಅದರ ಪರಿಚಯ ಆತನಿಗಿಲ್ಲ. ನಾವು ಸಂಪೂರ್ಣ ನಿರಪೇಕ್ಷರಾದಾಗಲೇ ಬದುಕಿನ ಸಮಗ್ರತೆಯಲ್ಲಿ, ಅನಿಶ್ಚಿತತೆಯಲ್ಲಿ, ತಾದಾತ್ಮ್ಯವನ್ನು ಹೊಂದಲು, ನಮ್ಮ ಅಹಂಕಾರದಾಚೆ ಹೋಗಿ, ಅತೀತರಾಗಲು ಸಾಧ್ಯವಾಗಬಹುದು. ಆದರೆ ನಮ್ಮ ಮತಕ್ಕಾಗಿ, ಆದರ್ಶಕ್ಕಾಗಿ, "ಗುರಿ"ಗಾಗಿ ಹೋರಾಡುವುದು ನಮಗೆ ಬದುಕಿಗಿಂತ ಹೆಚ್ಚು ಇಷ್ಟದ್ದಾಗುತ್ತದೆ. ಸತ್ಯವನ್ನು ಕಾಣಲು ನಾವು ಕಲ್ಪಿಸಿಕೊಳ್ಳುವ ಗುರಿ ಒಂದು ಮನೋರಂಜನ ಕಾರ್ಯಕ್ರಮವಾಗುತ್ತದಲ್ಲದೆ ನಮ್ಮ ಬದುಕಿನ ಬಗೆಗಿನ ಕಾಳಜಿಯನ್ನದು ತೋರುವುದಿಲ್ಲ. ಬದುಕಿನ ಬಗ್ಗೆ ತೀವ್ರ ಎಚ್ಚರವಾಗಿದ್ದು ಹೊರತು, ತೆರೆದ ಮನಸ್ಸಿರದೆ ಅದರ ಸಮಗ್ರತೆ ನಮಗೆ ದಕ್ಕಲಾರದು. ಬದುಕಿನ ನಿರಪೇಕ್ಷ ಇರವನ್ನು ಕಾಣಲು ನಮಗೆ ಬೇಕಾದ್ದು ನಿರಪೇಕ್ಷವೂ ಮುಕ್ತವೂ ಆದ ನೈಜ ಕುತೂಹಲ.

ಯಾವನೇ ವ್ಯಕ್ತಿ ಬದುಕನ್ನು ನೇರವಾಗಿ ನೋಡಬೇಕಾದರೆ ಆತ ಒಂಟಿಯಾಗಿ ನಿಲ್ಲಬೇಕು. ಒಂದು ಮತೀಯ ಗುಂಪು ಸಾಮೂಹಿಕವಾಗಿ ದೇವರನ್ನು, ಸತ್ಯವನ್ನು ಕಾಣಲು ಹೊರಡುವುದು ಕ್ಷುಲ್ಲಕವಾದ ಪ್ರಯತ್ನ. ವ್ಯಕ್ತಿ ತನ್ನ ಬಾಲಿಶತನವನ್ನು ಇತರರೊಂದಿಗಿಲ್ಲ, ತನ್ನೊಂದಿಗೇ ಪ್ರಾಮಾಣಿಕವಾಗಿ ಬಿಚ್ಚಿ ತೋರಬೇಕು. ಆತ ಬಾಲಿಶನಾಗಿದ್ದಾಗಲೇ ಅದನ್ನು ಅರಿತು ತಾನಾಗಿ ಬೆಳೆಯಲು ಅವಕಾಶವಾಗುತ್ತದೆ. ಇದು ನಿರ-

ಪೇಕ್ಷವೂ ಸೂಕ್ಷ್ಮಗ್ರಾಹಿಯೂ ಎಚ್ಚರವುಳ್ಳದ್ದೂ ಆದ ಮನಃಸ್ಥಿತಿಯಲ್ಲಿ ವ್ಯಕ್ತಿ ಬದುಕಿನ ಸಮಗ್ರತೆಯನ್ನು ಅನುಭವಿಸುವಾಗ ಆತ ಅನುಭವಕ್ಕಿಂತ ಹೊರಗಿನವನಾಗಲಾರ; ಇಲ್ಲಿ ಅನುಭವಿಸುವ ಕ್ರಿಯೆಯೂ, ಅನುಭವವೂ ಮತ್ತು ಅನುಭವಿಸುವವನೂ ಬೇರೆಬೇರೆಯಾಗಿರುವುದಿಲ್ಲ. ಅವೆಲ್ಲ ಒಂದು ಅಖಂಡ ಕ್ರಿಯೆಯಾಗುತ್ತವೆ. ಇದು ನಿರಪೇಕ್ಷ, ನಿರ್ನಿಮಿತ್ತ. ಇಂಥ ಅನುಭವಕ್ಕೆ ಬೇಕಾದ್ದು ಮುಗ್ಧತೆ (ಇನೊಸೆನ್ಸ್). ಮುಗ್ಧತೆಯನ್ನು ನಾವು ನಮ್ಮ ಸ್ವಭಾವದಲ್ಲಿ ರೂಢಿಸಿಕೊಳ್ಳಲು ಆಗದು. ಯಾಕೆಂದರೆ ಮನಸ್ಸಿನ ಮೂಲಪ್ರವೃತ್ತಿಯೇ ನಿಷ್ಕಲ್ಮಷವೂ, ಮುಗ್ಧವೂ ಆಗಿದೆ. ಆದರೆ ನಮ್ಮ ಆಕಾಂಕ್ಷೆ, ಬುದ್ಧಿವಂತಿಕೆ, ಮೋಹ ಇತ್ಯಾದಿಗಳು ನಮಗೆ ಹೆಚ್ಚು ಇಷ್ಟವಾದಾಗ ಈ ಮುಗ್ಧತೆ ಹಾಗೂ ನಿರಪೇಕ್ಷ ಅನುಭವ ಮರೆಯಾಗುತ್ತವೆ. ಮೇಲಿನ ಎಲ್ಲ ಸಿದ್ಧತೆಗಳನ್ನು ತೊರೆಯುವುದು ಮತ್ತೆ ಮುಗ್ಧತೆ ಮರಳಲು ಅವಕಾಶ ಮಾಡಿಕೊಡುತ್ತದೆ. ಇಲ್ಲಿ ನಾವು ಸಮಗ್ರತೆಯ, ಅಖಂಡದ ಅನುಭವದ ಬಗ್ಗೆ ಮಾತನಾಡುವಾಗ ವ್ಯಕ್ತಿಯೇ ಅನುಭವವಾಗಿರುತ್ತಾನೆ ಎಂಬುದನ್ನು ಗಮನಿಸಬೇಕು. ಹೀಗಾದಾಗ ಅದೊಂದು ಅನಂತ ಕ್ರಿಯೆಯಾಗುತ್ತದೆ. ಅನಂತಕ್ಕೆ ಯಾವ ಗುರಿಯೂ ಇಚ್ಛೆಯೂ ಕಾರಣವೂ ಇಲ್ಲ. ಅದು ಬರೇ "ಇದೆ". ಈ ಇರವಿನೊಂದಿಗೆ ವ್ಯಕ್ತಿ ಸಮಾವೇಶ ಹೊಂದುವುದೇ ಆತನ ಸ್ಥಿತಿಯಾಗುತ್ತದೆ. ಇಲ್ಲಿ ಗತಿ ಬರಲಾರದು. ಯಾಕೆಂದರೆ ಸ್ಥಿತಿಗೂ ಗತಿಗೂ ನಡುವೆ ಅಂತರವಿಲ್ಲ. ನಾವು ಸಮಗ್ರತೆಯನ್ನು ಬುದ್ಧಿಪೂರ್ವಕ ಪ್ರಯತ್ನದಿಂದ, ಸಾಧನೆಯಿಂದ ಪಡೆಯಲು ಸಾಧ್ಯವಿಲ್ಲ. ಅದೊಂದು ಅಖಂಡ ಸ್ಥಿತಿ. ನಮ್ಮ ಮಿತಿಯಲ್ಲಿ ಅನಂತವನ್ನು ಪಡೆಯಲು ಸಾಧ್ಯವೇ?

ಆದ್ದರಿಂದ ನಾವು [illegible], ಆದರ್ಶಗಳನ್ನು ತೊರೆದು ಸಂಪೂರ್ಣ ನಿಷ್ಕ್ರಿಯರಾಗಬೇಕು. ನಿಷ್ಕ್ರಿಯತೆಯೆಂದರೆ ಬದುಕಾಟದ ವಿಸರ್ಜನೆ ಮತ್ತು ನಿರಾಸಕ್ತಿಪೂರ್ಣ ಎಚ್ಚರ. ವ್ಯಕ್ತಿಯ ಅಂತರಾಳದ ಪ್ರೇಮ ಒಂದು ವ್ಯಕ್ತಿಗೆ, ಒಂದು ಅಭಿಪ್ರಾಯಕ್ಕೆ, ಆಕಾಂಕ್ಷೆಗೆ ಮೀಸಲಾಗದೆ ಅಸೀಮವಾಗಬೇಕು. ಅಸೀಮ ಪ್ರೇಮವೆಂದರೆ ನಿರಪೇಕ್ಷ ಪ್ರೇಮವೇ ಆಗಿದೆ. ಇಂಥ ಒಂದು ಅಸೀಮ ಪ್ರೇಮದಲ್ಲಿ ವ್ಯಕ್ತಿಯ ಮತ್ತು ಸಮಗ್ರತೆಗಳ ನಡುವೆ ಅಂತರವಿರದು. ಆದ್ದರಿಂದ ವ್ಯಕ್ತಿಯು ಇರವೇ ಅರಿವಾಗುತ್ತದೆ. ಇಂಥ ಅರಿವಿನಿಂದ ವ್ಯಕ್ತಿಯು ಅಹವಾಗಲಿ, ಇರವಾಗಲಿ ಹೊರಗಿರುವುದಿಲ್ಲ. ಇವಕ್ಕೆ ಬೇಕಾದ್ದು ವಿನಯ. ಹಾಗೆ ನೋಡಿದರೆ ಸದಾ ಎಚ್ಚರವೇ. ನಿಷ್ಕಾಮ ಪ್ರೇಮವೇ (ಪ್ರೇಮ ಅರಿಸಿಕೊಂಡಾಗ ಅಪೇಕ್ಷೆಯಾಗುತ್ತದೆ: ನಿರಪೇಕ್ಷೆ ಹೊಂದಿದಾಗ ನಿಷ್ಕಾಮವಾಗುತ್ತದೆ) ಸಮಗ್ರದ ಅರಿವಿನ ಸೂಚನೆಯಾಗಿದೆ. ಈ ಅರಿವಾದ ಮೇಲೆ ವ್ಯಕ್ತಿ ಸಮಗ್ರವನ್ನು ಕಾಣುವ ಒಂದು ಪ್ರತ್ಯೇಕ ಘಟಕವಾಗದೆ, ಪ್ರೇಕ್ಷಕನಾಗದೆ, ತಾನೇ ಸಮಗ್ರವಾಗುತ್ತಾನೆ. ಇದನ್ನೇ ಪ್ರಾಯಶಃ ನಮ್ಮ ಹಿರಿಯರು "ಸೋಽಹಂ" ಎಂದು ಕರೆದರು. ಆದ್ದರಿಂದ ನಿರಪೇಕ್ಷವೂ, ಅನಂತವೂ ಆದ ಸತ್ಯವನ್ನು ಕಾಣಲು ಮುಖ್ಯವಾಗಿ ನಾವು ಕಾಣುವ ಹಂಬಲವನ್ನು ಬಿಡೋಣ. ಸತ್ಯ ನಿರಪೇಕ್ಷ ಎಂದಾಗ ಅದನ್ನು ನಾವು ಅಪೇಕ್ಷಿಸಲು ಸಾಧ್ಯವಿಲ್ಲ. ಅಂಥ ನಿರಪೇಕ್ಷ ಸ್ಥಿತಿ ನಾವು ಮುಟ್ಟಿದಾಗ ಮಾತ್ರವೇ ಸತ್ಯವನ್ನು ಹೊಂದಲು ಸಾಧ್ಯವಾದೀತು. ಆದ್ದರಿಂದ ನಾವು ಬರೇ "ಇರುವುದನ್ನು" ಕಲಿಯಬೇಕು. ಇದೊಂದು ಅಮೋಘವಾದ ಕ್ರಿಯೆ. ಇಂಥ ನಿರಪೇಕ್ಷ ಇರವಿನ ಅಖಂಡ ಕ್ರಿಯೆ ಸತ್ಯದ ಹಾಗೂ ಸಮಗ್ರತೆಯ, ಅಖಂಡದ ಸಾಕ್ಷಿ: ಮತ್ತು ಒಂದು ಕನ್ನಡಿ ಇನ್ನೊಂದು ಕನ್ನಡಿಯನ್ನು ಕಾಣುವ ಅಂತ್ಯವಿರದ, ದ್ವಂದ್ವವಿರದ ಸ್ಥಿತಿ. ಕ್ರಿಯೆಗೂ ಇರವಿಗೂ ಇಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಅದೇ ಅನುಭವವೂ, ಅನುಭವಿಯೂ, ಅನುಭವಿಸಲ್ಪಡುವಂಥದ್ದೂ ಒಂದೇ ಆದ ಪ್ರಜ್ಞಾಸ್ಥಿತಿಯೂ. ಅಮಿತವೂ ಆದ ಒಂದು ಸಂಪೂರ್ಣ ಸ್ಥಿತಿ. ✲

---

**ಸಾವ ಹೊತ್ತು ಪೊಡವಿಯೊಡೆಯನ ದೊರೆಕಿ ಫಲವೇನು?** - ರಾಘವಾಂಕ

# ಗೌರೀಗಿಡ

ಶಾಂತಾರಾಮ ಸೋಮಯಾಜಿ

ಸರಿಯಾಗಿ ಎರಡು ವರುಷಗಳಷ್ಟು ಕಾಲ ಅವನು ಆ ಹುಚ್ಚಾಸ್ಪತ್ರೆಯಲ್ಲಿ ಕೊಳೆಯುತ್ತಾ ಜೀವನ ಕಳೆದಿದ್ದ. ಬಂದ ಆರಂಭದಲ್ಲಿ ಎಲ್ಲವೂ ಸುಗಮವಾಗಿತ್ತು. ಅವನ ತೋಳನ್ನು ಒತ್ತಿ ಹಿಡಿದುಕೊಂಡು, ಕಾರಲ್ಲಿ ಕುಳ್ಳಿರಿಸಿ ಅಲ್ಲಿಗೆ ಕರೆತಂದುಬಿಟ್ಟಿದ್ದ, ಅವನಣ್ಣ. ಕಾರಿನೊಳಗೂ ಅವನು ತನ್ನ ಕೈಹಿಡಿತವನ್ನು ಸಡಿಲುಗೊಳಿಸಿರಲಿಲ್ಲ. ಕಿಂಚಿತ್ತಾದರೂ. ಮತ್ತದು, ಕೈಯ ರಕ್ತ ಚಿಮ್ಮುವಷ್ಟು ನೋವೆಬ್ಬಿಸುತ್ತಿತ್ತು. ಆದರೆ ಬೇರೇನೂ ಉಪಾಯವಿರಲಿಲ್ಲ; ಅವನನ್ನು ತಡೆದುಕೊಳ್ಳಬೇಕಾಗಿತ್ತು. ಕಾರಲ್ಲಿ ಅವನ ಬದಿಯಲ್ಲಿ ಕುಳಿತು ಬಂದಿದ್ದರು, ಅವನಮ್ಮ, ಮತ್ತು ದಾರಿಯುದ್ದಕ್ಕೂ ಅವರು ಅಳುತ್ತಲೇ ಇದ್ದರು...

ಆಸ್ಪತ್ರೆಯಲ್ಲಿ ಯಾವ ರೀತಿಯ ತೊಂದರೆಯೂ ಇರಲಿಲ್ಲ. ಒಂದು ವರುಷ ಸುಲಭವಾಗಿ ಕಳೆದುಹೋಗಿತ್ತು, ಕುತ್ತಿಗೆಯಾಳದ ನೀರಲ್ಲಿ ಈಜಿದಂತೆ. ಕೆಲವೊಮ್ಮೆ, ಆಸ್ಪತ್ರೆಯ ಅಂಗಳದಲ್ಲಿ ಅವನ ಗೆಳೆಯರೊಂದಿಗೆ ನಡೆಯುತ್ತಿದ್ದ ಜಗಳದ ಹೊರತು, ಅವನು ಅಲ್ಲಿ ಗಂಭೀರವಾಗಿಯೇ ನೆಲಸಿದ್ದನೆನ್ನಬಹುದು... ಆದರೆ ಅನಂತರ ಪ್ರಾರಂಭ ಅವನ ದುಷ್ಟದೆಸೆ. ಅದೆಲ್ಲಾ ಅವನ ಜೀವನಕ್ಕೆ ಒಂದು ಹೊಸ ಹೊಸ ತಿರುವು ಮೂಡಿಸಿ ಹೋಗುತ್ತಿತ್ತು......

ಅನಂತರ ಬಂದ ಒಂದು ಕಾಗದದಲ್ಲಿ ಅವನಣ್ಣ ಅವನ ಅಮ್ಮ ಸತ್ತ ಸುದ್ದಿಯನ್ನು ಬರೆದಿದ್ದ. ಅದನ್ನು ಓದುತ್ತಿದ್ದಂತೆಯೇ ಅವನ ಕಣ್ಣಿಂದ ಒಂದೇ ಸವನೆ ನೀರು ಹರಿಯಿತು, ಪ್ರವಾಹದಂತೆ...ಅವನ ಕೈಸೇರುವ ಮೊದಲೇ ಆ ಕಾಗದ ಹರಿದು, ಹಿಡಿಸಿಕೊಂಡಿತ್ತು. ಮತ್ತು ಅದರ ಬಲಬದಿಯ ಒಂದು ಚೂರು ಹರಿದು ಮಾಯವಾಗಿತ್ತು. ಸ್ವಲ್ಪ ಹೊತ್ತಿನನಂತರ ಮೋಟಗಡ್ಡ ಹೊತ್ತ ಕುಳ್ಳ ದೇಹದ ಡಾಕ್ಟರನೊಬ್ಬ ಅವನ ಬಳಿಗೆ ಬಂದಾಗ ಅವನಿನ್ನೂ ಅಳು ನಿಲ್ಲಿಸಿರಲಿಲ್ಲ. ಆ ಕಾಗದವನ್ನವನು ಮುಖಕ್ಕೊತ್ತಿ ಹಿಡಿದು ಮುಖ ಮುಚ್ಚಿಕೊಂಡಿದ್ದ. ಡಾಕ್ಟರರು ಮಾತನಾಡಿದರು. ಅವರ ಸ್ವರ ತೀರಾ ಹೆಣ್ಣಿನ ಸ್ವರವಂತಿದೆಯೆಂದು ಅವನು ಭಾವಿಸಿಕೊಳ್ಳುತ್ತಿದ್ದ: 'ಏನೊ ಮುದ್ದು. ನಿಂಗೆ ಗೊತ್ತುಂಟಾ? ನಿನ್ನ ಅಮ್ಮ ಸತ್ತು-

ಹೋಗಿದ್ದಾಳಂತೆ, ಗೊತ್ತುಂಟಾ?' ಅವನು ಗೊತ್ತಿದೆಯೆಂದು ತಲೆಯಾಡಿಸಿದ; ಕಾಗದದಿಂದ ಮುಖ ತೆಗೆಯದೆ. ಡಾಕ್ಟರರು ರಬ್ಬರ್ ಬೂಟ್ಸಿನಿಂದ ಪಟಪಟ ಸದ್ದು ಹೊರಡಿಸುತ್ತಾ ನಡೆದು ಹೋದರು....

ಆ ದಿನ ಸಂಜೆ, ತನ್ನ ಅಮ್ಮ ಸತ್ತ ಸುದ್ದಿಯನ್ನು ಅವನು ತನ್ನ ಗೆಳೆಯರಿಗೆಲ್ಲಾ ಹೇಳಿದ, ಆಸ್ಪತ್ರೆಯ ಹಿಂಬದಿಯ ತೋಟದಲ್ಲಿ. ತನ್ನ ಕೈಸೇರುವ ಮೊದಲೇ ಆ ಕಾಗದ ಹರಿದಿದ್ದುದನ್ನು, ಓದಿದ ಕೂಡಲೇ ತನಗೆ ತಡೆಯಲಾರದ ಅಳು ಬಂದುದನ್ನು ಮತ್ತು ಆ ಹೋತದ ಗಡ್ಡ ಹೊತ್ತ ಡಾಕ್ಟರರು ಬಂದು ತನ್ನಲ್ಲಿ ವಿಚಾರಿಸಿ



ದುದನ್ನೆಲ್ಲಾ ಹೇಳಿದ. ಅದನ್ನು ನೆನೆಸಿಕೊಂಡರೇನೇ ತನಗೆ ಅಳು ಬರುತ್ತಿದೆ ಎಂದ. ಆದರೆಪಾಪ, ಅವನ ಮಾತನ್ನು ಅಲ್ಲಾರೂ ನಂಬಿದಂತಿರಲಿಲ್ಲ. ಕೊನೆಗೆ ಅವನೇ ಹೇಳಿದ:

'ಆಯಿತು, ಯಾರೂ ನನ್ನನ್ನು ನಂಬುವುದಿಲ್ಲ, ಅಲ್ವಾ? ಆಯಿತು...ಆ ಕಾಗದ ಕೊಟ್ಟರಾದರೂ ನಿಮಗೆ ನಂಬಿಕೆ ಬರುತ್ತದಾ ಇಲ್ವಾ ನೋಡುತ್ತೇನೆ...' ಎಂದು ತನ್ನ ಚಡ್ಡಿಯ ಕಿಸೆಗೆ ಕೈ ಹಾಕಿದ. ಅವನು ಕಿಸೆಯಿಂದ ಕೈಯೆಳೆದುಕೊಂಡಾಗ ಅವನ ಕೈಮುಷ್ಟಿಯಲ್ಲಿ ಆ ಕಾಗದ ಚಿಂದಿಚಿಂದಿಯಾಗಿ ಚೂರುಚೂರಾಗಿ ತುಂಬಿಕೊಂಡಿತ್ತು, ಡಸ್ಟ್‌ಬಿನ್‌ನೊಳಗಿನ ವಸ್ತುಗಳಂತೆ. ಅವನದನ್ನು ಮುಂದೆ ಮಾಡುತ್ತ ಹೇಳಿದ: 'ನೀವೇ ಓದಿನೋಡಿ ಬೇಕಿದ್ದರೆ...ಮತ್ತಾದರೂ ನಂಬುತ್ತೀರಾ ನೋಡುತ್ತೇನೆ...' ಆದರೆ ಅದನ್ನು ಓದುವುದು ಅಸಾಧ್ಯವೇ ಆಗಿತ್ತು. ಅದನ್ನು ಬಿಡಿಸಲು ಪ್ರಯತ್ನಪಡುತ್ತಿದ್ದಂತೆ, ಬೀಸಿಬಂದ ಗಾಳಿಗೆ ಅದರ ಕೆಲವು ಚೂರುಗಳು ಹಾರಿಹೋದವು. ಕೈಯಲ್ಲುಳಿದ ಭಾಗದಲ್ಲಿ ಕೆಲವು ಕಡೆ ಶಬ್ದಗಳೆಲ್ಲಾ ತೀರಾ ಮಸುಕು ಮಸುಕಾಗಿದ್ದವು. ಅವನ ಗೆಳೆಯನೊಬ್ಬ ಹೇಳಿದ:

'ನಾನು ಸುಳ್ಳು ಹೇಳುತ್ತಿಲ್ಲ, ಇವರಲ್ಲಿ ನನ್ನ ಅಮ್ಮ ಸತ್ತ ಸುದ್ದಿಯಿದೆ ಇಲ್ಲಿ. ...ನೀನೊಬ್ಬ ಮನುಷ್ಯ...'

ಅವನಿಗಾಗ ತೀರಾ ಸಿಟ್ಟು ಬಂತು, ಎಲ್ಲರೆದುರಿಗೂ ಅವನು ತನ್ನನ್ನು ಹುಚ್ಚನೆಂದು ಕರೆದುದರಿಂದ. ಅವನ ಉಳಿದುಕೊಂಡಿದ್ದ ತಾಳ್ಮೆಯೂ ಹಾರಿಹೋಯಿತು. ನೆಟ್ಟಗೆ ಜಿಗರೆಯಂತೆ ಹಾರಿಬಂದು ಗೆಳೆಯನ ಅಂಗಿಯ ಕುತ್ತಿಗೆ ಹಿಡಿದೆಳೆದು ಕೂಗಿದ: 'ಏನು ಹೇಳಿದಿ, ಏನು ಹೇಳಿದಿ, ಹೇಳು...' ಆ ಕೂಡಲೇ ಅಲ್ಲಿ ವಿಪರೀತ ಗಲಭೆ ಹರಡಿತು. ಅಲ್ಲೊಂದು ಚಿಕ್ಕ ಯುದ್ಧವೇ ನಡೆದುಹೋಯಿತು. ಒಂದೇ ನಿಮಿಷದಲ್ಲಿ ಅದೊಂದು ಯುದ್ಧಭೂಮಿಯಾಗಿ ಪರಿಣಮಿಸಿತು. ಅವರು ತಮ್ಮ ಕೈಗೆ ಸಿಕ್ಕಿದವರನ್ನೆಲ್ಲಾ ತಮಗೆ ತೋಚಿದಂತೆ ಬಡಿಯುತ್ತಿದ್ದರು... ಕೂಡಲೇ ಅವನ ತೊಡೆಗಳ ನಡುವೆ ಬಲವಾಗಿ ಹೊಡೆತ ಬಿದ್ದು, ಮುಖ ಕೆಳಗಾಗಿ ನೆಲಕ್ಕುರುಳಿ ಬಿದ್ದ. ಅವನ ದೇಹದ ಸುತ್ತಲಿಂದಲೂ ಪೆಟ್ಟುಗಳ ಸದ್ದು, ಅಳು, ಚೀರಾಟ, ಗಲಭೆ ಎಲ್ಲಾ ಕೇಳಿಬಂದು ಅವನ ದೇಹದ ಮೇಲೆಲ್ಲಾ ಹೆಜ್ಜೆಗಳು ಹಾದುಹೋದವು. ಬಿದ್ದಲ್ಲಿಂದಲೇ ಅವನಿಗೆ, ತನ್ನ ಬದಿಯಲ್ಲಿ ಯಾರೋ ದೊಪ್ಪನೆ ಬಿದ್ದ ಸದ್ದು, ಮತ್ತಾರದೋ ಅಂಗಿ ಹರಿದ ಸದ್ದು, ಅನಂತರ ಜವಾನರುಬ್ಬರ ಬೂಟ್ಸಿನ ಹೆಜ್ಜೆಗಳ ಸದ್ದೆಲ್ಲಾ ಕೇಳಿಬಂದವು. ಜವಾನರು ಬೊಬ್ಬಿಡುತ್ತಾ ಓಡಿಬಂದಾಗ ನೆಲದ ಮೇಲೆ ಬಿದ್ದ ಇಬ್ಬರ ಹೊರತು ಉಳಿದವರೆಲ್ಲಾ ಓಡುತ್ತಿದ್ದರು.

ಜವಾನನೊಬ್ಬ ಅವನ ಅಂಗಿಯನ್ನೆತ್ತಿ ಹಿಡಿದು ನಿಲ್ಲಿಸಿದಾಗ ನೋವಿನಿಂದ ಅವನ ಕಣ್ಣುಗಳು ಕೆಂಪಗಾಗಿದ್ದುವು. ಅವನ ದೇಹವೆಲ್ಲ ಬೆವರಿನಿಂದ ಒದ್ದೆಯಾಗಿತ್ತು. ಜವಾನ, ತನ್ನ ಕಣ್ಣುಗಳನ್ನು ಅಗಲಮಾಡಿಕೊಂಡು ತುಟಿಗಳನ್ನು ಕಚ್ಚಿ ಹಿಡಿದು ಅಬ್ಬರಿಸಿದ: 'ಥೂ ಕಳ್ಳ ಸೂಳೇಮಗ, [illegible] ಚಡ್ಡಿಯಲ್ಲಿ ಉಚ್ಚೆ ಹೊಯ್ದುಕೊಂಡಿದ್ದೀ... ಥೂ ಕಳ್ಳ ಸೂ...' ಅವನು ನೋವಿನ ಕಣ್ಣುಗಳನ್ನು ಅಗಲಿಸಿಕೊಂಡು, ತಲೆ ತಗ್ಗಿಸಿ ತೊಡೆಗಳ ಮೇಲೆ ಕಣ್ಣು ಹರಿಸಿದ... ಅವನ ಎರಡೂ ಕಾಲುಗಳು ಸಂಪೂರ್ಣ ಒದ್ದೆಯಾಗಿದ್ದುವು. ವಾಕರಿಕೆ ಬರಿಸುವಷ್ಟು ವಾಸನೆ ಇಡುಗುತ್ತಿತ್ತು.

ಅನಂತರ ಆ ಜವಾನನೊಂದಿಗೆ ತನ್ನ ಕೋಣೆಗೆ ನಡೆದು ಬಂದಾಗ ತಾನು ಆ ಕಾಗದವನ್ನು ಕಳೆದುಕೊಂಡುದು ಅವನಿಗೆ ತಿಳಿದುಬಂತು. ಅವನಿಗಾಗ ಬೆವರಿಳಿಸುವಷ್ಟು ದಿಗಿಲೆನಿಸಿತು. ಆ ಕೂಡಲೇ ಜವಾನನ ಅಂಗಿಯ ತೋಳು ಹಿಡಿದು ಹೇಳಿದ, '...ದಯವಿಟ್ಟು, ಕಾಗದ... ನನ್ನ ಕಾಗದ ಕೊಡು...ದಯವಿಟ್ಟು...' ಜವಾನ, ತುಟಿಗಳನ್ನು ಕಚ್ಚಿಕೊಂಡು ಅವನನ್ನು ಆಚೆ ತಳ್ಳಿ ಹೇಳಿದ. 'ನಡೆಯಾಚೆ, ನಾಯಿ... ಮಗುವಿನ ಹಾಗೆ ಚಡ್ಡಿಯಲ್ಲೆಲ್ಲಾ ಉಚ್ಚೆ ಹೊಯ್ದುಕೊಳ್ಳುತ್ತೀ; ಮತ್ತೀಗ ಕಾಗದ ವಂತೆ... ಹೋಗು ಹೋಗು. ನಿನ್ನ ಯಾವ ಸುಡುಗಾಡ ಕಾಗದವೂ ಇಲ್ಲ ನನ್ನತ್ರ...' ಆದರೆ ಅವನದನ್ನು ನಂಬಲಿಲ್ಲ. ಖಂಡಿತ ಜವಾನನ ಬಳಿಯೇ ಇರಬೇಕೆಂದು ಅವನ ಮನಸ್ಸು ಹೇಳುತ್ತಿತ್ತು. ಅವನು, ಇನ್ನೂ ಬೇಡುವ ಧಾಟಿಯಲ್ಲಿ ಕೇಳಿದ: '...ದಯವಿಟ್ಟು...ಅವರಲ್ಲಿ ನನ್ನ ಅಮ್ಮ ಸತ್ತ ಸುದ್ದಿಯಿದೆ. ದಯವಿಟ್ಟು ಕಾಗದ ಕೊಡು...' ಜವಾನ ಮಾತ್ರ ಅವನ್ನೆಲ್ಲಾ ಒಂದು ಚೂರೂ ನಂಬದವನಂತೆ ತಲೆಯಾಡಿಸಿ ಹೇಳಿದ: 'ಎಂತ ಹೇಳಿದಿ? ಅಮ್ಮ ಸತ್ತ ಸುದ್ದಿಯಾ? ಹೌದು, ಹೋಗು ಹೋಗು...ನಿಂಗೆ ಈ ಪ್ರಪಂಚದಲ್ಲಿ ಎಷ್ಟು ಮಂದಿ ಅಮ್ಮ ಇದ್ದಾರೆ, ಎಷ್ಟು ಅಪ್ಪ ಇದ್ದಾರೆ, ನೀನು ಹೇಳು ನೋಡಲು...?' ಅವನಿಗೆ ಸಿಟ್ಟೂ ಬಂತು, ತಡೆಯಲಾರದಷ್ಟು ದುಃಖವೂ ಆಯಿತು. ಅವನ ಕಣ್ಣುಗಳು ಕೆಂಪಾಗಾಗಿ ದೇಹ ಬಾವುಟದಂತೆ ಕಂಪಿಸತೊಡಗಿತು. ಥಕ್ಕನೆ ಮುಂದೆ ಬಾಗಿ ಅವನು ಜವಾನನ ಕೈಯನ್ನು ಚೆನ್ನಾಗಿ ಕಚ್ಚಿ

ಬಿಟ್ಟ. ಜವಾನನ ಕಿರಿಚಾಟ ಕೇಳಿ ಅವನು ಮುಖವೆಳೆದುಕೊಂಡಾಗ, ಕಚ್ಚಿದ ಕಡೆ ತೀರಾ ಆಳವಾದ ಗಾಯಗಳಾಗಿ ಅವುಗಳಿಂದೆಲ್ಲಾ ರಕ್ತ ಸೂಸುತ್ತಿತ್ತು. ಜವಾನನ ಮುಖ ಮಗುವಿನ ಮುಖದಂತೆ ಕೆಂಪಗಾಗಿತ್ತು. ಅವನು ಜೋರಾಗಿ ಅರಚುತ್ತಿದ್ದನಲ್ಲದೆ ಬಾಯಿಗೆ ಬಂದಂತೆ ಬೈಯುತ್ತಿದ್ದ. ಅನಂತರ ಜೋರಾಗಿ ಸದ್ದು ಮಾಡಿಕೊಂಡು ಕೋಣೆಯಿಂದ ಓಡಿಹೋದ.

ಸ್ವಲ್ಪ ಹೊತ್ತಿನಲ್ಲಿ ಹೋತ ಗಡ್ಡದ ಡಾಕ್ಟರರು ಬರಬಹುದೆಂದು ಅವನೆಣಿಕೆಯಾಗಿತ್ತು. ಆದರೆ ಅವರೂ ಬರಲಿಲ್ಲ, ಬೇರಾರೂ ಬರಲಿಲ್ಲ.

ಆದರೆ ಆ ರಾತ್ರೆ ಮಾತ್ರ ಅವನಿಗೆ ಊಟ ಸಿಗಲೇ ಇಲ್ಲ. ಇದ್ದ ಶಕ್ತಿಯನ್ನೆಲ್ಲಾ ಉಪಯೋಗಿಸಿಕೊಂಡು ಬೊಬ್ಬಿಡುತ್ತಾ ಜೋರಾಗಿ ಬಾಗಿಲು ಬಡಿದರೂ ಯಾರೂ ಅವನ ಕೋಣೆಯ ಬಾಗಿಲು ತೆರೆಯಲು ಬರಲಿಲ್ಲ. ಕೊನೆಗೆ ಹಸಿವು ತಡೆಯಲಾರದಾದಾಗ ಅವನಿಗೆ ಕೋಪ ಮಿತಿ ಮೀರಿ, ಧರಿಸಿದ್ದ ಅಂಗಿ ಚಡ್ಡಿಯನ್ನೆಲ್ಲಾ ಕಳಚಿ, ಅವನ್ನು ಕಿಟಕಿಯಿಂದ ಹೊರಗೆ ಎಸೆದುಬಿಟ್ಟ. ಅನಂತರ ಬತ್ತಲೆಯಾಗಿಯೇ ನೆಲದ ಮೇಲೆ ಮಲಗಿ ನಿದ್ದೆಹೋದ.

ಆದರೆ ಮರುದಿನ ಎದ್ದಾಗ, ಬಾಗಿಲ ಹಿಂದಿನಿಂದ ನಿನ್ನೆ ತನ್ನಿಂದ ಕಚ್ಚಿಸಿಕೊಂಡಿದ್ದ ಜವಾನನ ಮಾತುಗಳು ತಾರಕಸ್ವರದಲ್ಲಿ ಕೇಳಿ ಬಂದು ಅವನಿಗೆ ಭಯವೆನಿಸಿತು. ಅವನು ಹೇಳುತ್ತಿದ್ದ: 'ಬಾಗಿಲು ತೆಗೆಯೋ ಏ ನಾಯಿ, ಹಲ್ಲು ಉಜ್ಜಲಿಕ್ಕೆ ಬೇಗ ಬಂದೇ ಆಯ್ತು, ಇಲ್ಲಾ...' ಅವನು ನಾಚಿಕೊಂಡೇ ಬಾಗಿಲು ತೆರೆಯುತ್ತ ಅತಿ ಮೆಲುದನಿಯಲ್ಲಿ ಹೇಳಿದ: 'ನಿನ್ನೆ ರಾತ್ರಿ ಯಾರೋ ನನ್ನ ಚಡ್ಡಿ ಅಂಗಿ ಎರಡನ್ನೂ ಹಾರಿಸಿಕೊಂಡು ಹೋಗಿದ್ದಾರೆ...' ಒಂದು ಗಳಿಗೆ ಜವಾನನ ಕಣ್ಣುಗಳಲ್ಲಿ ತಿರಸ್ಕಾರ ಮಿಂಚಿತು, ಕೋಪದಿಂದ ಅವನ ಹಣೆಯಲ್ಲಿ ನಿರಿಗೆಗಳು ಹರಡಿದವು. ಆದರೆ ತನ್ನೆಣಿಕೆ ಮೀರಿ, ಅವನ ತನ್ನ ಬ್ಯಾಂಡೇಜು ಹಾಕಿದ ಕೈಯಿಂದ ಅವನನ್ನು ಹೊರಗೆಳೆದು ಅದೇ ಸ್ಥಿತಿಯಲ್ಲಿ ಆಸ್ಪತ್ರೆಯ ಜಗಲಿಯುದ್ದಕ್ಕೂ ಎಳೆದುಕೊಂಡು ನಡೆದಾಗ ನಾಚಿಕೊಳ್ಳದೆ ಬೇರೆ ಉಪಾಯವೇ ಇರಲಿಲ್ಲ, ಅವನಿಗೆ.

*

ಮತ್ತೆಂದೂ ಅವನಿಗೆ ತನ್ನ ಅಮ್ಮನ ನೆನಪು ಬರಲಿಲ್ಲ.

ಮತ್ತೆ ಹಲವು ದಿನಗಳ ನಂತರ ಆಸ್ಪತ್ರೆಗೆ ಅವನ ಅತ್ತಿಗೆ ಬಂದರು. ಅತ್ತಿಗೆಯನ್ನು ಕಾಣಲು ಅವನನ್ನು ಆಸ್ಪತ್ರೆಯ ಲೈಬ್ರರಿ ಕೋಣೆಗೆ ಕರೆದುಕೊಂಡು ಹೋದರು. ಅತ್ತಿಗೆ ಕುರ್ಚಿಯಲ್ಲಿ ಕುಳಿತುಕೊಂಡಿದ್ದರು. ಅವರು ತನ್ನ ಬಲಗೈಯಲ್ಲಿ ಒಂದು ಚಿಕ್ಕ ಮಗುವನ್ನು ಹಿಡಿದುಕೊಂಡಿದ್ದರು. ಮತ್ತು ಆ ಮಗುವಿನ ಕಣ್ಣುಗಳ ಹೊರತು, ದೇಹವೆಲ್ಲಾ ಸಂಪೂರ್ಣವಾಗಿ ಬಟ್ಟೆಯಿಂದ ಮುಚ್ಚಿಹೋಗಿತ್ತು. ಅವರ ಬದಿಯಲ್ಲಿ ಅವರ ಹಿರಿ ಮಗ ಕುಳಿತಿದ್ದ. ಅವನ ಮುಖದ ತುಂಬಾ ನಗು ಹರಡಿತ್ತು. ಆದರೆ ಮುದ್ದುವಿಗೆ ಅವನ ಹೆಸರಿನ ನೆನಪೇ ಬರಲಿಲ್ಲ.

ಅವನಿಗೆ ಅತ್ತಿಗೆಯೆದುರು ನಾಚಿಕೆಯೆನಿಸಿತು. ಅತ್ತಿಗೆ ಅವನನ್ನು, ತನ್ನ ಬಳಿ ಕುರ್ಚಿಯಲ್ಲಿ ಕೂಡಲು ಹೇಳಿದರು. ಅವರ ಕಣ್ಣುಗಳಲ್ಲಿ ನೀರಿತ್ತು. ಸ್ವಲ್ಪ ಹೊತ್ತಿನ ನಂತರ ಅವರು, ಮಗುವಿನ ಟೊಪ್ಪಿಗೆಯನ್ನು ಕೊಂಚ ಹಿಂದಕ್ಕೆ ಸರಿಸಿ, ಮಗುವನ್ನು ನೋಡಲು ಹೇಳಿದರು. ಅವನು ನಾಚಿಕೊಂಡೇ ನೋಡಿದ. ಅದರ ಮೈ ಬಣ್ಣ ಚಿತ್ರದಂತೆ ಹೊಳೆಯುತ್ತಿತ್ತು. ಅದರ ಮೈ ಮೇಲೆ ಕೈಯಾಡಿಸಬೇಕೆಂದೆನಿಸುತ್ತಿತ್ತು ಅವನಿಗೆ. ಕೊನೆಗೆ ಅತ್ತಿಗೆಯನ್ನು ಕೇಳಿ ಅದರ ಕೆನ್ನೆಯ ಮೇಲೆ ಕೈಯಿಟ್ಟಾಗಲೇ ಮಗು ಅಳಲಾರಂಭಿಸಿತು. ಅವನಿಗೆ ಭಯ ತುಂಬಿ, ತೀರಾ ನಾಚಿಕೆಯಿಂದ ಕೈಯೆಳೆದುಕೊಂಡ. ಹೆದರಿಕೆಯಿಂದ ಅವನ ಉಸಿರು ಜೋರಾಗಿ ಕಂಪಿಸುತ್ತಿತ್ತು...

ಆ ದಿನ ಅತ್ತಿಗೆ ಅವನೊಡನೆ ತುಂಬಾ ಮಾತನಾಡಿದರು. ಅವನ ಅಮ್ಮ ಸತ್ತ ಸುದ್ದಿ ಹೇಳಿದರು; ಮತ್ತು ಅವರ ಬೊಜ್ಜಕ್ಕಾಗಿ ನಾವೆಲ

ಸಾವಿರ ವಿಚಾರವುದೆಲ್ಲವನ್ನೂ ಹೇಳಿದರು. ಈಗ ಅಣ್ಣನ ಸಂಪಾದನೆ ತೀರಾ ಕಡಿಮೆಯಾಗಿದೆ-ಯೆಂದರು. ಅವನಿಲ್ಲಿ ಹೀಗೇ ಬಿಡುವುದು ತೀರಾ ಕಷ್ಟವಾಗುತ್ತದೆ; ಆದಷ್ಟು ಚೆನ್ನಾಗಿ ನಡೆದುಕೊಂಡು, ಆದಷ್ಟು ಬೇಗನೆ ಅವನು ಸರಿಯಾಗಿ ಮನೆಗೆ ಹಿಂತಿರುಗಿ ಬರಬೇಕೆಂದರು. ಅತ್ತಿಗೆಯ ಮಾತು ಕೇಳುತ್ತಾ ಅವನಿಗೆ ಅಳು ಬಂತು. ಅವನು ಮುಖ ಮುಚ್ಚಿಕೊಂಡು ಜೋರಾಗಿ ಅಳತೊಡಗಿದ...

ಅವನ ಅಳುವನ್ನು ಕೇಳಿ ಓಡಿಬಂದ ಜವಾನ ಅವನನ್ನು ದಬ್ಬಿಕೊಂಡೇ ಕೋಣೆಗೆ ಕರೆದುಕೊಂಡುಹೋದ. ಅಳುವೆಲ್ಲಾ ಮುಗಿದನಂತರ, ಅತ್ತಿಗೆ ಹೊರಟುಹೋದ ಸುದ್ದಿ ಕೇಳಿ ಅವನಿಗೆ ಬೇಸರವೆನಿಸಿತು. ಅತ್ತಿಗೆಯ ಬಳಿ ತುಂಬಾ ಮಾತನಾಡಲಿತ್ತು ಎಂದು ಭಾವನೆ ಬಂದು ತೀರಾ ದುಃಖವೆನಿಸಿತು. ಅತ್ತಿಗೆಗೊಂದು ಕಾಗದ ಬರೆಯಬೇಕೆಂದೂ ಅವನಿಗೆ ಅನಿಸದಿರಲಿಲ್ಲ. ಆದರೆ ರಾತ್ರಿಯಾದಂತೆ, ಅದೆಲ್ಲಾ ಅವನಿಗೆ ಮರೆತೇಹೋಯಿತು. ಅತ್ತಿಗೆ ಹೇಳಿದ ಮಾತುಗಳೂ ಅವನ ನೆನಪಿನಿಂದ ಸಂಪೂರ್ಣ ಮರೆ-ಯಾದವು.

*

ಸ್ವಲ್ಪ ದಿನಗಳ ನಂತರ ಅವನನ್ನು ಆ ಕೋಣೆಯಿಂದ ಕಿತ್ತು, ಚಿಕ್ಕದೊಂದು ಹಾಲಿಗೆ ಸ್ಥಳಾಂತರಿಸಿದರು. ಹೋತದ ಗಡ್ಡ ಹೊತ್ತ ಡಾಕ್ಟರರು ಹೇಳಿದರು : 'ಇನ್ನು ಕೆಲವು ತಿಂಗಳು ನೋಡುತ್ತೇವೆ. ಮತ್ತಾದರೂ ನೀನು ಸರಿಯಾಗಿ ನಡೆದುಕೊಳ್ಳಲು ಕಲಿತುಕೊಳ್ಳದಿದ್ದರೆ, ಮತ್ತೆ, ನಿನ್ನ ಮನೆಯಿಂದ ಸರಿಯಾಗಿ ಹಣ ಬಾರದೇ ಹೀಗೇ ನಡೆದರೆ...ಗೊತ್ತಿದೆಯಲ್ಲಾ, ನಿನ್ನನ್ನು ಹೊರಹಾಕಬೇಕಾಗುತ್ತದೆ...'

ಆ ಹಾಲಿನಲ್ಲಿ ಒಟ್ಟು ನಾಲ್ಕು ಮಂಚಗಳಿದ್ದು, ಅವೆಲ್ಲಾ ತುಂಬಿದ್ದುವು. ಅವನ ಬದಿಯ ಮಂಚ-ದವ, ಹೊಸದಾಗಿ ಇಲೆಕ್ಟ್ರಿಕ್ ಶಾಕ್ ಪಡೆದಿದ್ದವ ನೆನ್ನೆ, ದಿನವಿಡೀ ಅರಚುತ್ತಾ ಬಿದ್ದುಕೊಂಡಿ-ರುತ್ತಿದ್ದ.

ಅವನಿಗೆ ಆ ವಾತಾವರಣ ಏನೂ ಹಿಡಿಸುತ್ತಿರಲಿಲ್ಲ. ಅವನು ಯಾವಾಗಲೂ ಆ ತನ್ನ ಕೋಣೆಯ ಗೆಳೆಯರೊಂದಿಗೆ ಹೊಡೆದಾಡುತ್ತಿದ್ದ; ಯಾವಾಗಲೂ ಅವರ ಮರ್ಮಸ್ಥಾನಕ್ಕೇ ಚೆನ್ನಾಗಿ ಗುರಿಯಿಟ್ಟು ಹೊಡೆಯುತ್ತಿದ್ದ...ಹಾಗೆ ಹೊಡೆದಾಟ ನಡೆದ ದಿನಗಳಲ್ಲಿ ಅವನಿಗೆ ದಿನವಿಡೀ ಒಂದು ಗುಟುಕು ನೀರು ಸಹ ಸಿಗುತ್ತಿರಲಿಲ್ಲ. ಆ ಸಮಯದಲ್ಲಿ ಅವನ ಸಿಟ್ಟು ಮುಗಿಲು ಮುಟ್ಟುತ್ತಿತ್ತು. ಪ್ರತೀಕಾರದ ಭಾವನೆಯಿಂದ ಅವನು ಜೋರಾಗಿ ಅರಚುತ್ತಿದ್ದ. ತನ್ನ ಮಂಚದ ಮರಗಳೆಲ್ಲಾ ಪುಡಿಪುಡಿಯಾಗುವಂತೆ ತನ್ನ ಇದ್ದ ಶಕ್ತಿಯನ್ನು ಪ್ರಯೋಗಿಸಿ ಬಡಿಯುತ್ತಿದ್ದ. ಆದರೆ ಅವೆಲ್ಲಾ ಜಸಿದ್ದರೂ ಅವನು ಮಾತ್ರ ಉಪವಾಸ ಇರಲೇಬೇಕಾಗಿತ್ತು. ಕೊನೆಗೆ ಪ್ರತೀಕಾರದ ಅಂತ್ಯ ಹವಣಿಕೆಯಾಗಿ, ತನ್ನ ಬಟ್ಟೆಗಳನ್ನೆಲ್ಲಾ ಸಂಪೂರ್ಣ ಕಳಚಿ ಕಿಟಕಿಯಿಂದ ಹೊರ ಒಗೆದು, ತೀರಾ ಬತ್ತಲಾಗಿ ಮಲಗುತ್ತಿದ್ದ. ಆದರೆ ಬೆಳಿಗ್ಗೆ ಎದ್ದಾಗ, ಬತ್ತಲನ್ನು ಕಂಡು ತೀರಾ ನಾಚಿಕೆಯೆನಿಸಿ, ತೊಡೆಗಳ ನಡುವೆ ಕೈಗಳನ್ನು ಮುಚ್ಚಿ ಹಿಡಿದು, ಸಹಾಯಕ್ಕೆ ಬಂದ ಜವಾನನಿಗೆ ಪಿಸುಮಾತಿನಲ್ಲಿ ಹೇಳುತ್ತಿದ್ದ: '...ನನಗೊಂದು ಲಂಗೋಟಿ ಬಟ್ಟೆಯಾದರೂ ಕೊಡು: ನಿನ್ನೆ ರಾತ್ರೆ ಯಾರೋ ಬೇವಾರ್ಸಿಗಳು ನನ್ನ ಬಟ್ಟೆಯೆಲ್ಲವನ್ನೂ ಹಾರಿಸಿಕೊಂಡುಹೋಗಿದ್ದಾರೆ...' ಆದರೆ ಅವನ ಈ ಗುಟ್ಟನ್ನು ಚೆನ್ನಾಗಿ ಅರಿತಿದ್ದ ಜವಾನ ಮಾತ್ರ ಅವನನ್ನು ಅದೇ ಸ್ಥಿತಿಯಲ್ಲಿ ಹೊರಕ್ಕೆ ಕರೆದೊಯ್ಯುತ್ತ ಹೇಳುತ್ತಿದ್ದ: 'ನಿನಗೆ ಬಟ್ಟೆಯಿಲ್ಲ, ಯಾಕೆ ನಾಯಿ, ಉಚ್ಚೆಹೊಯ್ದುಕೊಳ್ಳಲಿಕ್ಕಾ?' ಆದರೆ ಅವನು ಮಾತ್ರ, ಪಾಪ, ನಾಚಿಕೆಯಿಂದ ಬೆವತು ಹೋಗುತ್ತಿದ್ದ...

*

ಮುಂದೆ ಹಲವು ದಿನಗಳ ನಂತರ ಬಂದ ಒಂದು ಕಾಗದದಲ್ಲಿ ಅವನ ಅತ್ತಿಗೆ ಒಂದು ದುಃಖ

ತರುವ ವಿಶೇಷ ಸುದ್ದಿಯನ್ನು ಬರೆದಿದ್ದರು, ರಾಮಣ್ಣ ಮಾಸ್ತರರ ಮಗಳು ಗೌರಿಗೆ ಮದುವೆಯಾಗಿ ಆಕೆ ಗಂಡನ ಮನೆಗೆ ಹೋಗಿದ್ದಾಳೆಂದು.

ತನ್ನ ಕೈಸೇರುವ ಮೊದಲೇ ಬಿಡಿಸಿಕೊಂಡಿದ್ದ ಆ ಕಾಗದವನ್ನು ಅಲ್ಲಿ ಅವನು ತನ್ನ ಗೆಳೆಯರಿಗೆಲ್ಲಾ ತೋರಿಸುತ್ತ ತೀರಾ ಅಳುವಿನ ದನಿಯಲ್ಲಿ ಹೇಳಿದ : 'ಗೌರಿಯ ಮೊಲೆಗಳು ತೀರಾ ದೊಡ್ಡದಾಗಿ ಬೆಟ್ಟದಷ್ಟಿವೆ: ಅದನ್ನು ನಾನೇ ನೋಡಿದ್ದೇನೆ...' ಅವನ ಮಾತಿಗೆ ನಕ್ಕವನೆಂದರೆ ಅವನ ನೆರೆಯ ಮಂಚದ ಅಳುಬುರುಕನೊಬ್ಬನೇ. ಮುಂದುವರಿಸುತ್ತಾ ಅವನು ಮತ್ತೂ ಹೇಳಿದ : 'ಗೌರಿಗೆ ಮಲ್ಲಿಗೆ ಹೂಗಳೆಂದರೆ ಇಷ್ಟ. ಅವಳದನ್ನು ತಲೆ ತುಂಬಾ ಮುಡಿದುಕೊಳ್ಳುತ್ತಾಳೆ...'

'...ಹಾಗಾದರೆ ನಿನ್ನನ್ನು ಅವಳು ಪ್ರೀತಿಸುತ್ತಿದ್ದಿರಬೇಕು...' ಅವನ ಗೆಳೆಯನೊಬ್ಬ ನುಡಿದ.

ಹೌದೆಂದು ಅವನು ತಲೆಯಾಡಿಸಿದ. '...ನಿಮಗೆ ಗೊತ್ತಿಲ್ಲ: ನಾನವಳ ಸೊಂಟದ ಮೇಲೆ, ಒಂದು ಬಾರಿ, ಕೆರೆಯ ಬದಿಯಲ್ಲಿ ಯಾರೂ ಇಲ್ಲದಾಗ, ಮುತ್ತು ಕೊಟ್ಟಿದ್ದೇನೆ...' ಗುಟ್ಟೊಂದನ್ನು ಬಯಲು ಮಾಡುವವನಂತೆ ಅವನು ತೀರ ಕುಗ್ಗಿದ ದನಿಯಲ್ಲಿ ಹೇಳಿದ.

'ಹಾಗಾದರೆ ನಾನು ನಾನು ಖಂಡಿತಾ ಹೇಳುತ್ತೇನೆ, ಅವಳೊಬ್ಬಳು ಸೂಳೆಯಾಗಿರಬೇಕು...' ಸ್ವಲ್ಪ ಹೊತ್ತಿನ ಹಿಂದೆ ಮಾತಾಡಿದ್ದ ಗೆಳೆಯನ ಪ್ರತಿಕ್ರಿಯೆ.

ಇದನ್ನು ಕೇಳಿ ಅವನಿಗೆ ತಡೆಯಲಾರದ ಸಿಟ್ಟು ಬಂತು. ಸಿಟ್ಟಿನಿಂದ ಅವನು, ತನ್ನ ತುಟಿಗಳನ್ನು ಕಚ್ಚಿ ಹಿಡಿದುಕೊಂಡು, ಒಂದೇ ಬಾರಿಗೆ ಅವನ ಮೇಲೆ ಹಾರಿ ಅವನನ್ನು ನೆಲದ ಮೇಲೆ ಕೆಡವಿದ. ಅನಂತರ ತನ್ನ ನಡುಗುತ್ತಿದ್ದ ಕೈಗಳಿಂದ ಅವನ ಕುತ್ತಿಗೆಯನ್ನು ಜೋರಾಗಿ ಒತ್ತಿ ಹಿಡಿದುಕೊಂಡ...ನಿಮಿಷದಲ್ಲೇ ಅದು ರಣರಂಗವಾಯಿತು...ಉಳಿದವರು ಅವನ ಮೈ ಮೇಲೆ ಹಾರಿ ಅವನ ಬೆನ್ನಿನ ಮೇಲೆ ಬಲವಾಗಿ ಹೊಡೆಯಲಾರಂಭಿಸಿದರು. ಅವನೀಗ ಗೆಳೆಯನ ಕುತ್ತಿಗೆಯಿಂದ ಕೈಯ ಹಿಡಿತವನ್ನು ಸಡಿಲಿಸಿ, ಫಕ್ಕನೆ ಹಿಂದೆ ಬಾಗಿ, ಮುಖಕ್ಕೆ ಅತಿ ಸಮೀಪದಲ್ಲಿದ್ದ ಯಾರದೋ ಕೈಯನ್ನು ಬಲವಾಗಿ ಕಚ್ಚಿ ಹಿಡಿದ. ಕೂಡಲೇ ಕಚ್ಚಿಸಿಕೊಂಡವನೆಬ್ಬಿಸಿದ ಬೊಬ್ಬೆಗೆ, ಆಸ್ಪತ್ರೆಯ ಜಗಲಿಯ ಸುತ್ತಲಿಂದಲೂ ಬೂಟ್ಸಿನ ಸಪ್ಪಳಗಳು ಕೇಳಿಬಂದು, ಅವನು ಭಯದಿಂದ ಮುಖವನ್ನು ಹಿಂದಕ್ಕೆಳೆದುಕೊಂಡ. ತನ್ನ ಸುತ್ತಲಿಂದಲೂ ದೃಷ್ಟಿಸುತ್ತಿದ್ದ ಕಣ್ಣುಗಳ ಸೆರೆಯಿಂದ ತಪ್ಪಿಸಿಕೊಳ್ಳಲು ತಲೆ ತಗ್ಗಿಸಿ, ನಡುಗುತ್ತಾ ಕುಳಿತುಕೊಂಡ.

ಡಾಕ್ಟರರು ಜವಾನನನ್ನು ಹತ್ತಿರ ಕರೆದು ಇಂಗ್ಲೀಷಿನಲ್ಲಿ ಗಟ್ಟಿಯಾಗಿ ಏನೋ ಹೇಳಿದರು. ಅವನಿಗದು ಅರ್ಥವಾಗಲಿಲ್ಲ. ಡಾಕ್ಟರರು ಬೂಟುಗಾಲುಗಳನ್ನು ಅಪ್ಪಳಿಸುತ್ತ ಅಲ್ಲಿಂದ ನಡೆದುಹೋದಾಗ ಅವನಿಗೆ ಭಯವೆನಿಸದಿರಲಿಲ್ಲ.

ಸ್ವಲ್ಪ ಹೊತ್ತಿನಲ್ಲಿ ಅದೇ ಜವಾನ ಬಂದು ಅವನ ಕೈಯೆತ್ತಿ ಹಿಡಿದು ನೆಟ್ಟಗೆ ನಿಲ್ಲಿಸಿದ. ಮತ್ತು ಅವನ ತೊಡೆಗಳ ಮೇಲೆ ತಿರಸ್ಕಾರದಿಂದ ಕಣ್ಣು ಹಾಯಿಸಿ ಹೇಳಿದ : 'ಹಾಳಾದವ...ಪ್ರಾಣ ಉಚ್ಚೆ ಹೊಯ್ದುಕೊಂಡಿದ್ದೀಯಲ್ಲಾ; ನಿಲ್ಲು, ನಿಲ್ಲು...ನಿನ್ನ ಈ ಬುದ್ಧಿಯನ್ನೆಲ್ಲಾ ನಿಲ್ಲಿಸದಿದ್ದರೆ...' ಅವನು ನಾಚಿಕೆಯಿಂದ ತನ್ನ ಒದ್ದೆಯಾದ ತೊಡೆಗಳ ಮೇಲೆ ಕಣ್ಣು ಹರಿಸಿದ.

*

ಆ ದಿನವೇ ಅವನನ್ನು ಬೇರೊಂದು ಕೋಣೆಯೊಳಗೆ ತುಂಬಿದರು. ಅದು ಎಲ್ಲಾ ಕೋಣೆಗಳಿಂದಲೂ ತೀರಾ ಪ್ರತ್ಯೇಕವಾಗಿತ್ತು. ಅದು ಲಾವೆಟರಿಗಳ ಪಕ್ಕಕ್ಕಿದ್ದುದರಿಂದ ದಿನವಿಡೀ ಮೂಗು ತುಂಬುವಂತೆ ಅಸಹ್ಯ ವಾಸನೆ ಹೊಡೆಯುತ್ತಿತ್ತು.

ಆ ಕೋಣೆಗೆ ಒಂದೇ ಒಂದು ವಿಶಾಲವಾದ ಕಿಟಿಕಿಯಿತ್ತು. ಅದರ ನೆಲ, ಗೋಡೆಗಳಿಗೆಲ್ಲಾ ಒಂದೇ ಬಣ್ಣ ಬಳಿಯಲಾಗಿತ್ತು. ಅಲ್ಲಿ ಮಲಗಲು

ಮಾಯವಾಗಲೀ ಜಾಪಯಾಗಲೀ ಇರಲಿಲ್ಲ. ಅವನನ್ನು ಎತ್ತಲೆಯಾಗಿಯೇ ಕೋಣೆಯೊಳಗೆ [illegible] ಮುಕ್ತ ಆಯಿತು.

ಆ ರಾತ್ರಿ ಪುನಃ ಅವನಿಗೆ ಉಪವಾಸ: ಆದರೆ ಅವನು ರಾತ್ರಿ ಯಾವ ಗದ್ದಲವನ್ನೂ ಮಾಡಲಿಲ್ಲ. [illegible] ನೆಲದ ಮೇಲೆ ಎತ್ತಲಾಗಿಯೇ ಮಲಗಿ ಬಿದ್ದುಕೊಂಡ. ಮಧ್ಯರಾತ್ರಿಗೆ ಅವನಿಗೆ ಎಚ್ಚರವಾದಾಗ ತೆರೆದ ಕಿಟಕಿಯಿಂದ ತೀರಾ ತಣ್ಣನೆ ಗಾಳಿ ಬಲವಾಗಿ ಬೀಸುತ್ತಿತ್ತು. ಅವನ ದೇಹವು ತರಗೆಲೆಯಂತೆ ಕಂಪಿಸುತ್ತಿತ್ತು. ನಡುಗುತ್ತಲೇ ಎದ್ದು ನಿಂತು ಬಾಗಿಲಿನೆಡೆ ನಡೆದು ಬಾಗಿಲನ್ನು ಬಲವಾಗಿ ಬಡಿಯುತ್ತಾ [illegible] ಕೂಗಾಡತೊಡಗಿದ. ಆದರೆ ಎಷ್ಟೊತ್ತಾದರೂ ಯಾರೂ ಬರದಿದ್ದಾಗ ಅವನಿಗೆ ಬೇಸರವೆನಿಸಿತು. ನಡುಗುತ್ತಲೇ ಕಿಟಕಿಯ ಬದಿಗೆ ಬಂದು ನಿಂತ.

ಸ್ವಲ್ಪ ಹೊತ್ತಿನ ನಂತರ ಏನೋ ಆಲೋಚನೆ ಬಂದವರಂತೆ, ಮೈಯಲ್ಲಿನ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿ ಕಿಟಕಿಯ ಸರಳುಗಳನ್ನು ಬಗ್ಗಿಸಲು ಪ್ರಯತ್ನಪಟ್ಟ. ಸ್ವಲ್ಪ ಹೊತ್ತಿನ ನಂತರ ಅವನ ಪ್ರಯತ್ನ ಫಲಕಾರಿಯಾಗುವಂತೆ ಕಂಡುಬಂತು. ಆ ಚಳಿಯಲ್ಲೂ ಅವನ ದೇಹ ಬೆವತುಹೋಗಿ ಏದುಸಿರು ಬಿಡುತ್ತಿದ್ದ. ಮತ್ತೆ ಕೆಲವು ಗಂಟೆಗಳ ಪ್ರಯತ್ನದ ನಂತರ ಕಿಟಕಿಯ ಸರಳನ್ನು ಬಗ್ಗಿಸಿದಾಗ ಪ್ರಯಾಸಪೂರ್ವಕ ಒಬ್ಬನು ಹೊರಬೀಳುವಷ್ಟು ದಾರಿಯಾಯಿತಾದರೂ ಅವನು ಶಕ್ತಿಗುಂದಿ ತೀರಾ ಬಳಲಿಕೆಯಿಂದ ಅಲ್ಲೇ ಕುಸಿದು ಕುಳಿತುಕೊಂಡ.

[illegible] ಆ ಕಂಡಿಯ [illegible]

[illegible] ಸುತ್ತಲೂ ಕಣ್ಣು ಹಾಯಿಸಿದ. ಅನಂತರ, [illegible] ಯಿಂದ ಮುದುಡಿಕೊಂಡು, ಸ್ವಲ್ಪ ಮುಂದೆ ನಡೆದು ಗಿಡದ ಬುಡದಲ್ಲಿ ಕುಳಿತುಕೊಂಡ. ಅವನ ಮನಸ್ಸಿಗೆ ಭಯವನ್ನು [illegible]. ಅವನು ಸದ್ದಾಗದಂತೆ ಅತಿ ನಿಧಾನವಾಗಿ ಉಸಿರು ಬಿಡುತ್ತಾ, ಕತ್ತಲಿನೊಳಗೆ [illegible] ಕಾಣುವಂತೆ ದೃಷ್ಟಿ ಹರಿಸತೊಡಗಿದ...ಸ್ವಲ್ಪ ಹೊತ್ತಿನ ನಂತರ ಅವನಲ್ಲಿಂದ ಎದ್ದು ನಿಂತು ತೀರಾ ನಿಧಾನವಾಗಿ, ಯಾವ ಸದ್ದೂ ಹೊರಡದಂತೆ ಹೆಜ್ಜೆಯಿಡುತ್ತಾ ಒಂದು ಚಿಕ್ಕ [illegible] ಗಿಡದ ಬುಡದಲ್ಲಿ ಬಂದು ನಿಂತುಕೊಂಡ. ಗಿಡದೆಲೆಗಳು ಗಾಳಿಗೆ ನಿಧಾನವಾಗಿ ಅಲುಗಾಡುತ್ತಿದ್ದುವು...ಅನಂತರ ಸಂಶಯದಿಂದಲೂ ಭಯದಿಂದಲೂ ಸುತ್ತಲೂ ದೃಷ್ಟಿ ಹರಿಸಿದ. ಕತ್ತಲಲ್ಲಿ, ಯಾವ ಸದ್ದೂ ಕೇಳದೆ ತುಸು ನೆಮ್ಮದಿಯೆನಿಸಿ, ನೇರವಾಗಿ ಗಿಡದ ಬುಡಕ್ಕೆ ಕೈ ಹಾಕಿ ಬಲವಾಗಿ ಎಳೆದುಬಿಟ್ಟ. ಗಿಡ, ಕಾಂಡದಲ್ಲಿ ತುಂಡಾಗಿ ಅವನ ಕೈಗೆ ಬಂತು.

ಅವನದನ್ನು, ಒಂದು ಬೆಲೆಬಾಳುವ ವಸ್ತುವಿನಂತೆ ತನ್ನೆದೆಗೆ ಒತ್ತಿ ಹಿಡಿದುಕೊಂಡು, ಬೆಕ್ಕಿನಂತೆ ಕಳ್ಳಹೆಜ್ಜೆಯಿಡುತ್ತ ಕಿಟಕಿಯ ಬದಿಗೆ ಬಂದು ನಿಂತುಕೊಂಡ. ಅನಂತರ ಸುತ್ತಲೂ ದೃಷ್ಟಿ ಹರಿಸಿ ಯಾರೂ ಇಲ್ಲದುದನ್ನು ಕಂಡು ನೆಮ್ಮದಿಪಟ್ಟು, ಬಂದಂತೆಯೇ ಕಿಟಕಿಯನ್ನೇರಿದ. ಕಿಟಕಿಯ ತೂತಿನಲ್ಲಿ ಕಷ್ಟಪಟ್ಟು ಒಳತೂರಿ, ಕೋಣೆಯಲ್ಲಿ ಜೋರಾಗಿ ಉಸಿರು ಬಿಡುತ್ತಾ ನಿಂತುಕೊಂಡ.

ಅನಂತರ ತಾನು ಬಗ್ಗಿಸಿದ ಸರಳನ್ನು ಪುನಃ ಒಂದಕ್ಕೆ ಬಗ್ಗಿಸಿ ಯಥಾಸ್ಥಾನದಲ್ಲಿ [illegible]

[illegible]

ನಡುಗುತ್ತಾ ಗಿಡದ ಬಳಿ ನಿಂತುಕೊಂಡು ಅದರ ಬುಡಕ್ಕೆ ಮೂತ್ರ ಹೊಯ್ದ. ಅನಂತರ ಅದರ ಬಳಿಯಲ್ಲೇ ಕುಳಿತುಕೊಂಡು, ಕಾಮವಿಕಾರಕ್ಕೊಳಪಟ್ಟವನಂತೆ ಆ ಸಾಯುವ ಗಿಡದ ಮೈಯನ್ನೆಲ್ಲಾ ಚುಂಬಿಸಲಾರಂಭಿಸಿದ.

ಆ ದಿನ ಪೂರ್ತಿ ಅವನು ಉಪವಾಸವಿದ್ದ. ತನ್ನ ಬತ್ತಲೆಯನ್ನು ಕಂಡು ಅವನಿಗೀಗ ತುಸುವೂ ನಾಚಿಕೆಯೆನಿಸಲಿಲ್ಲ. ಹಿಂದಿನಂತೆ ಅವನು ಬಾಗಿಲು ಬಡಿಯಲಿಲ್ಲ, ಕೂಗಾಡಲೂ ಇಲ್ಲ.

ಆ ರಾತ್ರಿಯೂ ಅವನು ಆ ಗಿಡದ ಬಳಿ ಚಳಿಯಿಂದ ಮುದುಡಿ ಮಲಗಿಕೊಂಡು ತನಗೆ ತೋಚಿದ ರೀತಿಯಲ್ಲಿ ಅದಕ್ಕೆ ಮುದ್ದುಗರೆಯುತ್ತಿದ್ದ.

ಮರುದಿನ ಅವನನ್ನು ಊಟಕ್ಕೆ ಕರೆದರು. ಬಾಗಿಲ ಹಿಂದಿನಿಂದ ಹೆಸರು ಕರೆದು, ಬಾಗಿಲು ತೆರೆದು ಬಟ್ಟೆ ಪಡೆಯಲು ಹೇಳಿದರು. ಆದರೆ ಅವನು ಮಾತ್ರ ಬಾಗಿಲು ತೆರೆಯಲೇ ಇಲ್ಲ ಮಾತ್ರವಲ್ಲ, ಯಾವ ಹುಚ್ಚು ವರ್ತನೆಯನ್ನೂ ಪ್ರದರ್ಶಿಸಲಿಲ್ಲ.

ಎರಡು ದಿನ ಪೂರ್ತಿ ಅವನು ಅದೇ ರೀತಿ ಕೋಣೆಯ ಬಾಗಿಲು ತೆರೆಯದೆ, ಬತ್ತಲಾಗಿ, ಉಪವಾಸ ಕುಳಿತುಕೊಂಡ. ಮೂರನೆಯ ದಿನ ಅವನಿಗೆ ಕಿಟಕಿಯಿಂದ ಕೆಲವು ಬ್ರೆಡ್ಡು ತುಂಡುಗಳನ್ನು ಕೊಡಲಾಯಿತು. ಅನಂತರ ಅದೇ ರೀತಿ ಬಿಳಿ ಬಣ್ಣದ ಅಂಗಿ ಚಡ್ಡಿಯನ್ನೂ ಹಾಸಲು ಬಟ್ಟೆಯನ್ನೂ ಕಿಟಕಿಯಿಂದ ಕೋಣೆಯೊಳಕ್ಕೆಸೆಯಲಾಯಿತು. ಯಾವ ಗಲಾಟೆ ಗದ್ದಲವಿಲ್ಲದೆ ಅವನು ತನ್ನ ಈ ಸೆರೆಯನ್ನು ಒಪ್ಪಿಕೊಂಡುದು, ಆಸ್ಪತ್ರೆಯಲ್ಲಿ ಹೊಸ ಸುದ್ದಿಯಾಗಿತ್ತು.

*

ಆದರೆ ಅವನು ಮಾತ್ರ ಹಾಗೆ ದೊರಕಿದ ಬಟ್ಟೆಗಳೊಂದನ್ನೂ ಸ್ವೀಕರಿಸಲಿಲ್ಲ. ಕಿಟಕಿಯಿಂದ ದೊರಕಿದ ಬ್ರೆಡ್ಡಿನ ಚೂರುಗಳನ್ನೆಲ್ಲಾ, ತಾನು ಕೊಯ್ದು ತಂದ ಗಿಡದ ಬುಡದಲ್ಲಿ ಪ್ರಸಾದವಾಗಿಟ್ಟ. ಆ ಗಿಡದೆಲೆಗಳೆಲ್ಲವೂ ಈಗಾಗಲೇ ಬಾಡಿಹೋಗಿದ್ದುವಲ್ಲದೆ ಅದರಿಂದ ಈಗ ದೊಡ್ಡಿಯ ವಾಸನೆ ಹೊರಡುತ್ತಿತ್ತು. ತನಗೆ ದೊರಕಿದ ಬಟ್ಟೆಯನ್ನೆಲ್ಲಾ ಆ ಗಿಡದ ಮೇಲೆ ಹಾಸಿ ಅವನು ದಿನವಿಡೀ ಬತ್ತಲೆಯಾಗಿರುತ್ತಿದ್ದನಾದರೆ, ರಾತ್ರಿಯಿಡೀ ಮುದುಡಿಕೊಂಡು ಮಲಗಿ ತೀರಾ ಬಲವಾಗಿ ಬೀಸುತ್ತಿದ್ದ ತಣ್ಣನೆ ಗಾಳಿಗೆ ಕೊಂಚ ನರಳುತ್ತಾ ಉರುಳಾಡುತ್ತಿದ್ದ.

ಆ ರಾತ್ರಿಯೇ ಅವನಿಗೆ ಜ್ವರ ಹಿಡಿಯಿತು. ಅವನ ದೇಹ ಒಮ್ಮೆಲೇ ಕೆಂಡವಾಯಿತು. ಅವನ ಕಣ್ಣುಗಳೆಲ್ಲಾ ಕೆಂಪಾದವು. ಅವನ ನಾಲಿಗೆಯ ತೇವವೆಲ್ಲಾ ಒಣಗಿಹೋಯಿತು... ಅವನು ಆ ಬಾಡಿಹೋದ, ಸಾಯುತ್ತಿದ್ದ ಗಿಡವನ್ನು ತಬ್ಬಿಕೊಂಡೇ ಮಲಗಿದ.

*

ಮತ್ತೆ ಮೂರು ದಿನಗಳ ನಂತರ ಅವನ ಕೋಣೆಯ ಬಾಗಿಲನ್ನು ಒಡೆಯಲಾಯಿತು. ಏಕೆಂದರೆ ಅಲ್ಲಿಂದ ಹೊಲಸು ವಾಸನೆ ಬರುತ್ತಿತ್ತು. ಬಾಗಿಲು ತೆರೆದು ಒಳಹೋದಾಗ ಅಲ್ಲಿ ಸುತ್ತಾಡುವ ಗಾಳಿಯು ಒಂದೊಂದು ಕಣದಲ್ಲೂ ದುರ್ನಾತವಡಗಿತ್ತು...

ತೀರಾ ಬಡಕಲಾಗಿ, ಬೆಂಕಿಯಂತೆ ಬಿಸಿಯೇರಿ, ತನ್ನ ಕೊನೆಯ ಕ್ಷಣಗಳಲ್ಲಿ ನರಳುತ್ತಿದ್ದ ಅವನ ದೇಹವನ್ನವರು ನೋಡಿದರು. ಕೋಣೆಯ ಒಂದು ಮೂಲೆಯಲ್ಲಿ, ಅದೇ ರೀತಿ ವಾಸನೆ ಹೊರಡಿಸುತ್ತಾ ತೀರಾ ಒದ್ದೆಯಾಗಿದ್ದ ಬ್ರೆಡ್ಡಿನ ಚೂರುಗಳು, ಮಲಗುವ ಬಟ್ಟೆಗಳು ಮತ್ತು ಒಂದು ಜೊತೆ ಬಿಳಿ ಬಣ್ಣದ ಅಂಗಿ ಚಡ್ಡಿಯನ್ನು ನೋಡಿದರು. ಬತ್ತಲಾಗಿದ್ದ ಅವನೆದೆಯ ಮೇಲೆ ಚೆನ್ನಾಗಿ ಅಪ್ಪಿಹಿಡಿದಿದ್ದ ಆ ಹೂಗಿಡದ ಕಾಂಡ, ಎಲೆಗಳೆಲ್ಲಾ ಸಂಪೂರ್ಣ ಒಣಗಿಕೊಂಡಿದ್ದುವು. ಅದೊಂದು ಗೌರೀಹೂಗಿಡದ ಕಾಂಡವಾಗಿದೆಯೆಂದು ಅವರಿಗಾಗಲೂ ಗುರುತಿಸಬಹುದಿತ್ತು.

# ಸತ್ತರೂ ಅವಳ ಶವಕ್ಕೆ ಸಾವಿಲ್ಲ

## ಈವಾ ಪೆರಾನಳ ಕಳೇವರದ ಅದ್ಭುತ ದೇಶಾಟನ

ರಾಧಾಕೃಷ್ಣ ರಾವ್



ಮಹಾಪುರುಷರ ಪ್ರೇಯಸಿಯರಿಗೆ ದೊರೆಯಬಹುದಾದ ಮರಣೋತ್ತರ ಪ್ರತಿಫಲ ಅಪರೂಪವಾಗಿರಬಲ್ಲದು. ಷಾಜಹಾನನ ಪ್ರಿಯ ಭಾರ್ಯೆ ಮುಮತಾಜಳು ಸತ್ತು ಜಗತ್ತಿನ ಅತಿ ಸುಂದರ ವಾಸ್ತುವೊಂದಕ್ಕೆ ಸ್ಫೂರ್ತಿ ಕೊಟ್ಟಳು. ಆದರೆ ಅರ್ಜೆಂಟಿನಾದ ಅಧ್ಯಕ್ಷ ಪೆರಾನನ ಹೆಂಡತಿ ಈವಾ ಪೆರಾನಳಿಗೆ ಒದಗಿದ ಮರಣೋತ್ತರ ಗತಿ ಇತಿಹಾಸದಲ್ಲೇ ಅದ್ವಿತೀಯವಾದದ್ದು. ಅವಳ ಕಳೇವರಕ್ಕೆ ಇಂದಿಗೂ ಶಾಂತವಾದ ದಫನ ದೊರೆತಿಲ್ಲ. ಅದನ್ನು ಅಪಹರಿಸಿದ್ದಾಗಿದೆ, ಬಚ್ಚಿಟ್ಟಿದ್ದಾಗಿದೆ, ದೇಶದಿಂದ ದೇಶಕ್ಕೆ ಸಾಗಿಸಿದ್ದಾಗಿದೆ: ಅದಕ್ಕೊಂದು ದೇವಾಲಯ ಕಟ್ಟಬೇಕೆಂದು ಯತ್ನಿಸಿದವರಿದ್ದಾರೆ; ಅದರ ಬಲದಿಂದ ಅಧಿಕಾರವನ್ನು ಕಸಿದುಕೊಳ್ಳುವ ಕನಸು ಕಾಣುವವರು ಇಂದಿಗೂ ಇದ್ದಾರೆ; ಬಡವರಿಗೆ ಅದು ಆಶಾಜ್ಯೋತಿಯಾಗಿದೆ; ಆಳುವವರಿಗೆ ಅದು ಸಿಂಹಸ್ವಪ್ನವಾಗಿದೆ. ಇಪ್ಪತ್ತು ವರ್ಷಗಳಿಂದ ಅದು ಲೆಕ್ಕವಿಲ್ಲದಷ್ಟು ಒಳಸಂಚುಗಳ ವಿಷಯವಾಗಿದೆ. ಆದ್ದರಿಂದ ಈವಾ ಪೆರಾನಳ ಕಳೇವರಕ್ಕೆ ಶಾಂತಿ ಇಲ್ಲ.

ಈವಾ ಪೆರಾನ್ ಹುಟ್ಟಿದ್ದು ಕೀಳು ಕುಲದಲ್ಲಿ, ವಿವಾಹಬಾಹ್ಯ ಸಂಬಂಧದಿಂದ. ಅವಳ ತಂದೆ ಹೊಲಗೆಲಸದ ಆಳು; ತಾಯಿ ಗಾಡಿ ಹೊಡೆಯುವವನ ಮಗಳು. ಅರ್ಜೆಂಟಿನಾದ ಬಡ ಹಳ್ಳಿ

ಲಾಸ್ ತೋಲ್ಡೋಸಿನಲ್ಲಿ ಅವಳ ತಾಯಿ ಒಂದು ಅಡಗೂಲಜ್ಜಿ ಮನೆಯನ್ನು ಇಟ್ಟುಕೊಂಡು ಕಾಲ ಹಾಕುತ್ತಿದ್ದಳು. ಆದರೆ ಹುಡುಗಿ ಈವಾ ಅನುಪಮ ಸುಂದರಿಯಾಗಿದ್ದಳು; ಅದಕ್ಕೂ ಮಿಗಿಲಾಗಿ ಅವಳ ಕಂಠಧ್ವನಿಯಲ್ಲಿ ಎಂಥವ-ರನ್ನೂ ಮರುಳುಮಾಡುವ ಮಾಧುರ್ಯವಿತ್ತು. ಈ ಬಂಡವಾಳ ಅವಳನ್ನು ಲ್ಯಾಟಿನ್ ಅಮೇರಿಕದ ಅತ್ಯಂತ ಪ್ರಬಲ ಮಹಿಳೆಯನ್ನಾಗಿ ಮಾಡಿತು.

ತನ್ನ ಸೌಂದರ್ಯದ ಅರಿವಿದ್ದ ಈವಾ ೧೫ ನೇ ವಯಸ್ಸಿನಲ್ಲೇ ರಾಜಧಾನಿ ಬ್ಯೂನೋಸ್ ಏರ್ಸ್‌ಗೆ ಓಡಿಬಂದು ಪ್ರಥಮ ವರ್ಗದ ಸಿನೆಮಾ ತಾರೆಯಾಗಲು ಹವಣಿಸಿದಳು. ಸೌಂದರ್ಯ ವೊಂದೇ ತಾರಾಪಟ್ಟ ದೊರಕಿಸಿಕೊಡಲಾರದೆಂದು ಅವಳಿಗೆ ತಿಳಿಯಲು ಕೆಲ ಕಾಲ ಬೇಕಾಯಿತು. ಅನಂತರ ಅಕಸ್ಮಾತ್ತಾಗಿ ಯಾವುದೋ ರೇಡಿಯೋ ನಾಟಕದಲ್ಲಿ ನಾಯಿಕೆಯ ಪಟ್ಟ ದೊರಕಿತು. ಅವಳ ಮಧುರ ಕಂಠ ಕೂಡಲೆ ಲಕ್ಷಾಂತರ ಶ್ರೋತೃಗಳನ್ನು ಮೋಹಿಸಿ ಅವಳು ರೇಡಿಯೋ ರಾಣಿ ಎನಿಸಿದಳು. ಅವಳ ಜನಪ್ರಿಯತೆ ಶಿಖರ ಸ್ಥಾನದಲ್ಲಿದ್ದಾಗ ಅವಳಿಗೆ ಜುವಾನ್ ಪೆರಾನನ ಪರಿಚಯವಾಯಿತು. ಇಪ್ಪತ್ತೈದರ ಈ ತರುಣಿಗೂ ಅದೇ ತಾನೇ ಆರ್ಜೆಂಟಿನಾದಲ್ಲಿ ಅಧ್ಯಕ್ಷನನ್ನು ಉರುಳಿಸುವ ಸೈನಿಕ ಒಳಸಂಚಿನಲ್ಲಿ ಪಾತ್ರವಹಿಸಿ ಪ್ರತಿಷ್ಠೆ ಸಂಪಾದಿಸಿದ್ದ ನಲವತ್ತಾರರ ಸೈನ್ಯಾಧಿಕಾರಿ ಕರ್ನಲ್ ಪೆರಾನಿಗೂ ಕೂಡಲೇ ಪ್ರೇಮ ಕೂಡಿ ಬಂತು. ೧೯೪೫ ರಲ್ಲಿ ಅವರು ಗುಟ್ಟಾಗಿ ಮದುವೆಯಾದರು.

ಪೆರಾನನಿಗೆ ಈವಾ ಭಾಗ್ಯವನ್ನು ತಂದಳು. ಕೆಲ ಕಾಲದಲ್ಲೇ ಜುವಾನ್ ಪೆರಾನ್ ಅರ್ಜೆಂ-ಟಿನಾದ ಸರ್ವಾಧಿಕಾರಿ ಅಧ್ಯಕ್ಷನಾದನು. ಅವನು ಅವಳನ್ನು ವಜ್ರಾಭರಣಗಳಿಂದ ಮುಚ್ಚಿಬಿಟ್ಟ ನೆಂಬುದು ಏನೇನೂ ಅತಿಶಯೋಕ್ತಿಯಾಗದು. ಆಶ್ಚರ್ಯವೆಂದರೆ ಈ ಅಲಂಕಾರಪ್ರಿಯ ತರುಣಿ ಅರ್ಜೆಂಟಿನಾದ ಬಡಬಗ್ಗರ, ಕೂಲಿಕಾರರ ಕಣ್ಮಣಿ ಯಾದದ್ದು. ಅವಳು ಸರ್ವಾಭರಣಭೂಷಿತ-ಳಾಗಿ ಭಾರಿ ಸಭೆಗಳಲ್ಲಿ "ಓ ನನ್ನ ದಿಸ್‌ಕಮಿಸ-ದೋಗಳೇ (ಅಂಗಿಯಿಲ್ಲದವರೇ)" ಎಂದು ಸಂಬೋಧಿಸಿ ಅವರ ಕಷ್ಟನಷ್ಟಗಳ ಬಗ್ಗೆ ಮರುಗಿ ಭಾಷಣ ಮಾಡತೊಡಗಿದರೆ ಬ್ಯೂನೋಸ್ ಏರ್ಸಿನ ಬಡವರು ಹುಚ್ಚೆದ್ದು ಜಯಘೋಷ ಮಾಡುತ್ತಿದ್ದರು. ಅವಳು ತೊಟ್ಟ ರೇಶ್ಮೆಗಳು, ಧರಿಸಿದ ಆಭರಣಗಳು ತಮ್ಮ ಅಂಗಿಯಿಲ್ಲದಿರುವಿಕೆ ಮುಂದುವರಿಯುವುದಕ್ಕೆ ಕಾರಣವಾಗಬಹು ದೆಂದು ಅವರಿಗೆ ಹೊಳೆಯುತ್ತಲೇ ಇರಲಿಲ್ಲ. (ತಮ್ಮ ಪ್ರಿಯ ಮುಂದಾಳು ಮುಂದಾಳುತನವು ಮಾಡುವ ಮೋಡಿ ಜನಸಾಮಾನ್ಯರನ್ನು ಎಳ್ಳಷ್ಟೂ ಚಿಂತಿತಗೊಳಿಸುವುದಿಲ್ಲವೆಂಬುದು ಅರ್ಜೆಂಟಿನಾದಲ್ಲಿ ಮಾತ್ರವಲ್ಲ, ಭಾರತದಲ್ಲಿಯೂ ಮನಗಂಡ ಮಾತು.)

ಅವಳ ಜನಪ್ರಿಯತೆಯನ್ನು ಹೆಚ್ಚಿಸಲು ಧಾರಾಳತನವೂ ಸಹಾಯ ಮಾಡಿತು. ಬಡವರ ಉದ್ಧಾರಕ್ಕೆಂದು ಲೆಕ್ಕವಿಲ್ಲದಷ್ಟು (ಅಕ್ಷರಶಃ ಲೆಕ್ಕವಿಲ್ಲದ್ದು—ಆ ಖರ್ಚಿನ ಸರಿಯಾದ ಲೆಕ್ಕ-ಪತ್ರವನ್ನು ಯಾರೂ ಕೇಳುತ್ತಿರಲಿಲ್ಲ.) ಸರಕಾರಿ ಹಣ ಅವಳ ಕೈಗೆ ಬರುತ್ತಿತ್ತು. ಅದರಿಂದ ಬಡಬಗ್ಗರಿಗೆ ಧರ್ಮ, ಆಸ್ಪತ್ರೆಗಳು, ಅವರ ಮಕ್ಕಳಿಗೆ ಆಟದ ಬಯಲುಗಳು, ನಿರಾಶ್ರಿತರಿಗೆ ಅನ್ನವಸ್ತ್ರ—ಇಂಥ ವಿನಿಯೋಗಗಳೆಲ್ಲ ಈವಾ ಪೆರಾನಳ ಉಸ್ತುವಾರಿಯಲ್ಲಿಯೇ ನಡೆಯು ತ್ತಿತ್ತು. ಹಬ್ಬದ ದಿನಗಳಲ್ಲಿ ಅವಳ ಹೆಸರಲ್ಲಿ ಬಡಬಗ್ಗರ ಮನೆಗಳಿಗೆ ಉಡುಗೊರೆಗಳು ಬರು ತ್ತಿದ್ದವು. ಅವರು ಸಹಜವಾಗಿಯೇ ಅವಳನ್ನು ದೇವಿಯಂತೆ ಆರಾಧಿಸತೊಡಗಿದರು. ಅವಳು ಅವರಿಗೆ ಪ್ರೀತಿಯ "ಈವಿತಾ" ಆದಳು. ಅವ-ಳಿಂದಾಗಿ ಪೆರಾನ್ ಸರ್ವಾಧಿಕಾರಕ್ಕೆ ಬಡಬಗ್ಗರ, ಶ್ರಮಜೀವಿಗಳ ಹೃತ್ಪೂರ್ವಕ ಬೆಂಬಲ ದೊರೆ-ಯುತ್ತಿತ್ತು.

ಪೆರಾನನ ಪ್ರೇಮದ ರಾಣಿಯಾಗಿ, ಜನತೆಯ ಹೃದಯೇಶ್ವರಿಯಾಗಿ ಅವಳು ಎಷ್ಟು ಕಾಲವೂ ಉಳಿಯಬಹುದಾಗಿತ್ತೇನೋ. ಆದರೆ ೧೯೫೦

ಅವನು ಅವಳ ಕಳೇವರವನ್ನು ಮಂಗಮಾಯ ಮಾಡಿಸಲು ಒಳಸಂಚು ಹೂಡಿ ಆ ಕೆಲಸಕ್ಕೆ ಪೆರಾನನ ಶತ್ರುವಾದ ಕರ್ನಲ್ ಮೂರ್ ಕೋನಿಗನನ್ನು ನೇಮಿಸಿದ. ಅವನು ನಟ್ಟಿರುಗಳಲ್ಲಿ ದಾಳಿ ಮಾಡಿ ಜನರಲ್ ಕಾನ್‌ಫೆಡರೇಶನ್ ಕಚೇರಿಯಿಂದ ಆ ಕಳೇವರದ ಪೆಟ್ಟಿಗೆಯನ್ನು ಅಪಹರಿಸಿ ಲಾರಿಯಲ್ಲಿ ಹಾಕಿಕೊಂಡು ಗುಪ್ತಚಾರ ಶಾಖೆಯ ಕಚೇರಿಗೆ ವರ್ಗಾಯಿಸಿದ. ಅಂದಿನಿಂದ ಈವಾ ಪೆರಾನಳ ಶವದ ಪರ್ಯಟನೆ ಪ್ರಾರಂಭವಾಯಿತು.

ತಮ್ಮ ದೇವತೆಯ ಕಳೇವರದ ಅಪಹಾರವಾದ ಸುದ್ದಿ ಕೇಳಿ 'ಅಂಗಿಗೇಡಿ'ಗಳು ರೊಚ್ಚಿಗೆದ್ದರು. ಅವರ ಕೈವಾರಿಗಳು ಹಗಲೂ ರಾತ್ರಿ ಸಶಸ್ತ್ರರಾಗಿ ಅದನ್ನು ಶೋಧಿಸಿದರು. ಗಾಬರಿಯಾಗಿ ಸರಕಾರ ಶವ ಪೆಟ್ಟಿಗೆಯನ್ನು ಮೇಜರ್ ಅರಂಡಿಯಾ ಎಂಬವನ ಮನೆಗೆ ವರ್ಗಾಯಿಸಿತು. ಅದನ್ನು ಅಪಹರಿಸಲು ಯಾರೋ ಬಂದಿದ್ದಾರೆಂಬ ಭ್ರಮೆಯಿಂದ ಪಾಪ, ಆ ಮೇಜರ್ ಕತ್ತಲೆಯಲ್ಲಿ ತನ್ನ ಹೆಂಡತಿಯನ್ನೇ ಗುಂಡು ಹಾಕಿ ಕೊಂದನಂತೆ. ಈವಾಳನ್ನು ಮತ್ತೆ ಅಲ್ಲಿಂದ ಸಾಗಿಸಿ ಗುಪ್ತಚಾರ ಕಚೇರಿಯ ಮಾಳಿಗೆಯಲ್ಲಿ ಬಚ್ಚಿಡಲಾಯಿತು.

ಜನರಲ್ ಅರಂಬುರುವಿಗೆ ಈ ಕಳೇವರವನ್ನು ಹೇಗಾದರೂ ದೇಶದಿಂದ ಹೊರಗೆ ಸಾಗಿಸಿ ಕೈ ತೊಳೆದುಕೊಂಡರೆ ಸಾಕೆನಿಸಿತು. ಅವಳ ತಾಯಿ ಚಿಲಿಯಲ್ಲಿ ವಾಸಿಸುತ್ತಿದ್ದಳು. ಅವಳ ಕಡೆ ಹೆಗ್ಗಡೆಗಳನ್ನು ಅಟ್ಟಿ ಕಳೇವರವನ್ನು ತೆಗೆದು ಕೊಳ್ಳಲು ಪಂಚಾಯತಿ ಮಾಡಲಾಯಿತು. ಅದು ವ್ಯರ್ಥವಾಯಿತು. ಅದನ್ನು ಅಜ್ಞಾತ ಸ್ಥಳದಲ್ಲಿ ದಫನ ಮಾಡಲಾಗಿದೆಯೆಂದು ಸರಕಾರ ಸಾರಿತು. ಆದರೆ ಅದರ ಬಗ್ಗೆ ಬಗೆಬಗೆಯ ಸುದ್ದಿಗಳು ಹಬ್ಬಿದವು. ಪೆರಾನ್‌ವಾದಿ ತಂಡಗಳು ಅದನ್ನು ಶೋಧಿಸುತ್ತಲೇ ಇದ್ದವು.

ಈವಾಳ ಕಳೇವರವನ್ನು ದೇಶಾಂತರ ಕಳಿಸಲು ಭಾರಿ ಗುಪ್ತ ಯೋಜನೆಯೇ ಆಯಿತು. ಏಕ ಕಾಲಕ್ಕೆ ಬಗೆಬಗೆಯ ಹಾರಿಕೆ ಸುದ್ದಿಗಳನ್ನು ಹಬ್ಬಿಸಿ ಶವ ಪೆಟ್ಟಿಗೆಯನ್ನು ಬ್ರುಸೆಲ್ಸ್, ಬಾನ್ ಮೂಲಕ ರೋಮಿಗೂ ಅಲ್ಲಿಂದ ಮಿಲಾನಿಗೂ ವಿಮಾನದಲ್ಲಿ ಸಾಗಿಸಿ ಅಲ್ಲಿ ಅರ್ಜೆಂಟಿನಾ ರಾಯಭಾರಗೃಹದ ನೆಲಮನೆಯಲ್ಲಿ ಕೆಲಸಕ್ಕೆ ಬಾರದ ಸರಕುಗಳ ರಾಶಿಯಲ್ಲಿ ಇಟ್ಟರು. ಕೆಲ ತಿಂಗಳುಗಳ ವರೆಗೆ ಅಲ್ಲೇ ಬಿದ್ದಿದ್ದ ಆ ಶವ ಪೆಟ್ಟಿಗೆಗೆ ಆ ಮೇಲೆ ಮಿಲಾನಿನ ಒಂದು ಸ್ಮಶಾನದಲ್ಲಿ ಯಾರಾವುದೋ ಹೆಸರಲ್ಲಿ ವಿಧಿವತ್ತಾದ ದಫನ ಕ್ರಿಯೆ ನಡೆಯಿತು. ಇದೆಲ್ಲವನ್ನೂ ಎಷ್ಟು ಗುಪ್ತವಾಗಿ ನೆರವೇರಿಸಲಾಯಿತೆಂದರೆ ಈ ಸಂಚಿನಲ್ಲಿ ಭಾಗಿಗಳಾದವರಿಗೂ ಅದರ ವಿವರಗಳ ಸರಿಯಾದ ಪತ್ತೆ ಇರಲಿಲ್ಲ.

ಇದು ೧೯೫೭ ರಲ್ಲಿ ನಡೆದದ್ದು. ಈವಾಳ ದುರ್ದೈವಿ ಕಳೇವರ ಆ ಸ್ಮಶಾನದಲ್ಲಿ ೧೯೭೧ ರ ವರೆಗೂ ಮರ್ಯಾದೆಯಿಂದಲ್ಲದಿದ್ದರೂ ಶಾಂತಿಯಿಂದ ಮಲಗಿತ್ತು. ಆದರೆ ಅವಳ ಹೆಸರಿನ ಮಾಯೆ ಇನ್ನೂ ಅಳಿದಿರಲಿಲ್ಲ. ಈ ನಡುವೆ ಪೆರಾನ್ ಪರಾಗ್ವೆಯಿಂದ ಪನಾಮಕ್ಕೆ ಹೋಗಿ ಅಲ್ಲಿ ಇಸಾಬೆಲ್ ಮಾರ್ಟಿನೆಜ್ ಎಂಬ ಸುಂದರ ನರ್ತಕಿಯನ್ನು ಮದುವೆ ಮಾಡಿಕೊಂಡಿದ್ದ. ಅಲ್ಲಿಂದ ಆತ ಸ್ಪೇನಿನ ರಾಜಧಾನಿ ಮಾಡ್ರಿಡ್‌ಗೆ ವಲಸೆ ಹೋಗಿ ಅಲ್ಲಿಯೇ ನೆಲಸಿದ್ದ. ಇತ್ತ ಅರ್ಜೆಂಟಿನಾದಲ್ಲಿ ಯಾರನ್ನೂ ಅಧಿಕಾರಲಕ್ಷ್ಮಿ ಗಟ್ಟಿಯಾಗಿ ವರಿಸಲಿಲ್ಲ. ಅಧ್ಯಕ್ಷ ಅರಂಬುರುವನ್ನು ಪೆರಾನ್ ಪಕ್ಷಪಾತಿಗಳು ಕೊಲೆಗೈದಿದ್ದರು. ಈಗ ಅಧಿಕಾರದಲ್ಲಿದ್ದ ಅಧ್ಯಕ್ಷ ಜನರಲ್ ಲ್ಯಾನೂಸನಿಗೆ ಈವಾಳ ಕಳೇವರವನ್ನು ಪೆರಾನನಿಗೆ ಒಪ್ಪಿಸುವ ಮನಸ್ಸಾಯಿತು. ಆದರೆ ಅವನಿಗಾಗಲಿ ಅವನ ಸಂಗಡದ ಮತ್ತೆ ಯಾರಿಗಾಗಲಿ ಕಳೇವರ ಎಲ್ಲಿದೆಯೆಂದು ಗೊತ್ತಿರಲಿಲ್ಲ. ತಿಂಗಳುಗಟ್ಟಲೆ ಗುಪ್ತ ಅನ್ವೇಷಣೆ ನಡೆಯಿತು. ಅಸಂಖ್ಯ ಜನರನ್ನು ಪ್ರಶ್ನಿಸಲಾಯಿತು. ಕೊನೆಗೆ ಪೆರಾನ್ ಮತ್ತು ಈವಾಳ ಆಪ್ತ ಪಾದ್ರಿಯಾಗಿದ್ದು ಶವದ ಸ್ಥಳಾಂತರದ ರಹಸ್ಯಗಳಲ್ಲಿ ಪಾಲುಗೊಂಡು ಮುಂದೆ ಪೆರಾನ್

ವಾದಿಗಳ ಭಯದಿಂದ ತಲೆಮರೆಸಿಕೊಂಡಿದ್ದ ಫಾದರ್ ರೋಟ್ಜರ್ ಎಂಬುವನ ಸಹಾಯದಿಂದ ಮಿಲಾನಿನಲ್ಲಿ ಕಳೇವರ ಇದ್ದದ್ದನ್ನು ಪತ್ತೆ ಹಚ್ಚಿದ್ದಾಯಿತು. ಇಟಲಿ, ಫ್ರಾನ್ಸ್ ಮತ್ತು ಸ್ಪೇನಿನ ಸರಕಾರಗಳ ಸಹಕಾರದಿಂದ ಗುಪ್ತವಾಗಿ ಆ ಕಳೇವರವನ್ನು ಸ್ಮಶಾನದಿಂದ ಕಿತ್ತು ಎತ್ತಿ ಸಶಸ್ತ್ರ ಮೋಟಾರಿನಲ್ಲಿ ಫ್ರಾನ್ಸಿನ ಮೂಲಕ ರಾತ್ರಿಯಲ್ಲಿ ಸ್ಪೇನಿಗೆ ಸಾಗಿಸಿದರು. ಮ್ಯಾಡ್ರಿಡ್‌ನಲ್ಲಿ ಅದನ್ನು ಪೆರಾನನಿಗೆ ಒಪ್ಪಿಸಲಾಯಿತು. ಶವಪೆಟ್ಟಿಗೆಯ ಮುಚ್ಚಳವನ್ನು ಸರಿಸಿ ತನ್ನ ಏಳು ವರ್ಷಗಳ ಸಹಜೀವಿಯ ಮುಖವನ್ನು ೧೭ ವರ್ಷಗಳ ನಂತರ ಗುರುತಿಸಿ ಜುವಾನ್ ಪೆರಾನನ ಕಣ್ಣುಗಳಲ್ಲಿ ನೀರು ತುಂಬಿತು. ಆ ಅವಧಿಯಲ್ಲಿ ಅದು ಕಂಡ ಅನೇಕ ದುರಭಿಸಂಧಿಗಳಲ್ಲಿ ಅದರ ಮೂಗು ಜಖಿದಿತ್ತು, ಅನೇಕ ಎಲುಬುಗಳು ಮುರಿದಿದ್ದವು. ಬಂಗಾರದ ನೀಳ ಕೂದಲುಗಳನ್ನು ಕೊರಳ ಮಟ್ಟಕ್ಕೆ ಕತ್ತರಿಸಲಾಗಿತ್ತು. ಆದರೂ ಅವಳ ಮುಖದಲ್ಲಿ ಇನ್ನೂ ಅದೇ ಜೀವಂತಕಳೆ, ಚರ್ಮದಲ್ಲಿ ಅದೇ ಹೊಳಪು ಉಳಿದುಕೊಂಡಿದ್ದವು. ಅದು ಈವಾಳ ಕಳೇವರ ಎಂಬುದರಲ್ಲಿ ಸಂದೇಹವೇನೂ ಇರಲಿಲ್ಲ.

ಈವಾಳನ್ನು ಸಾಗಿಸುವುದರಲ್ಲಿ ಸ್ಪೇನಿನ ಸರಕಾರ ಸಹಕರಿಸಿದ್ದಿತಾದರೂ ಸ್ಪೇನಿನಲ್ಲಿ ಯಾವ ಸ್ಮಶಾನದಲ್ಲಿಯೂ ಅದನ್ನು ದಫನ ಮಾಡಲು ಅನುಮತಿ ಕೊಡುವಂತಿರಲಿಲ್ಲ. ಈವಾ ತನ್ನ ಮರಣದಲ್ಲಿಯೂ ಅತ್ಯಂತ ಪ್ರಬಲ ಶಕ್ತಿಯಾಗಿದ್ದಳು. ಅವಳನ್ನು ಅಪಹರಿಸಲು ಪೆರಾನ್ ಪಕ್ಷಪಾತಿಗಳೂ ವಿರೋಧಿಗಳೂ ಘನಘೋರ ಯತ್ನಗಳನ್ನು ಮಾಡಬಹುದಿತ್ತು. ಈ ಕಾದಾಟದ ರಂಗವಾಗಲು ಸ್ಪೇನ್ ಬಯಸಲಿಲ್ಲ.

ಹೀಗೆ ೧೯೭೧ ಸೆಪ್ಟೆಂಬರಿನಿಂದ ಮಾಡ್ರಿಡ್‌ನಲ್ಲಿರುವ ಪೆರಾನನ ವೈಭವಪೂರ್ಣ ಭವನದ ಮೂರನೇ ಅಂತಸ್ತಿನಲ್ಲಿ ಜಗತ್ತಿನ ಅತ್ಯಂತ ಅಪ್ರತಿಮ ಮಹಿಳೆಯೊಬ್ಬಳು ಓಕ್ ಹಲಗೆಯಿಂದ ನಿರ್ಮಿಸಿದ ಸುಂದರ ಪೆಟ್ಟಿಗೆಯಲ್ಲಿ ತನ್ನ ಮುಂದಿನ ಯಾತ್ರೆಯನ್ನು ನಿರೀಕ್ಷಿಸುತ್ತ ಮಲಗಿದ್ದಾಳೆ. ಅವಳ ಕಳೇವರ ಮರಳಿ ದೊರೆತ ನಂತರ ಪೆರಾನನ ಅದೃಷ್ಟ ಮತ್ತೊಮ್ಮೆ ತಿರುಗಿದಂತೆ ತೋರಿತು. ಆತನಿಗೆ ಸ್ವದೇಶಕ್ಕೆ ಮರಳಲು ಅನುಮತಿ ದೊರೆಯಿತು. ಅಧ್ಯಕ್ಷ ಚುನಾವಣೆಗೆ ನಿಲ್ಲುವ ಪ್ರಯತ್ನವನ್ನೂ ಆತ ಮಾಡಿದ. ಆದರೆ ಅವನು ಹಲವು ವರ್ಷ ದೇಶಾಂತರ ಇದ್ದುದರಿಂದ ವಸತಿ ಕಾನೂನಿನ ಪ್ರಕಾರ ಅವನಿಗೆ ಸ್ಪರ್ಧಿಸಲು ಅವಕಾಶ ಸಿಕ್ಕಲಿಲ್ಲ.

ಆದರೆ ದಕ್ಷಿಣ ಅಮೇರಿಕದ ರಾಷ್ಟ್ರಗಳ ಬಗ್ಗೆ ಏನೂ ಹೇಳುವಂತಿಲ್ಲ. ಬಡಬಗ್ಗರು ಇನ್ನೂ ಪೆರಾನ್ ಪಕ್ಷಪಾತಿಗಳಾಗಿಯೇ ಇದ್ದಾರೆ. ಅವನು ಬ್ಯೂನೋಸ್ ಏರ್ಸ್ ವಿಮಾನ ನಿಲ್ದಾಣದಲ್ಲಿಳಿದಾಗ ಸರಕಾರ ಜನಜಂಗುಳಿಯನ್ನು ತಡೆಯುವ ವ್ಯವಸ್ಥೆ ಮಾಡಿದ್ದರೂ ಪೆರಾನನ ಪ್ರಭಾವ ಇನ್ನೂ ಬಲವಾಗಿರುವುದಕ್ಕೆ ಬೇಕಾದಷ್ಟು ಸಾಕ್ಷಿ ಸಿಕ್ಕಿತು. ಇನ್ನೊಂದು ಕ್ರಾಂತಿಯ ಮೂಲಕ ಆತ ಅಧಿಕಾರಕ್ಕೆ ಬಂದರೂ ಬರಬಹುದು. ಆಗ ಈವಾ ತಿರುಗಿ ತನ್ನ ಮಾತೃಭೂಮಿಗೆ ಮರಳಬಹುದು.

ಸದ್ಯಕ್ಕಂತೂ ಮ್ಯಾಡ್ರಿಡ್‌ನಲ್ಲಿ ಅವಳು ಪ್ರಬಲ ಸಶಸ್ತ್ರ ಕಾವಲಿನಲ್ಲಿ ಇದ್ದಾಳೆ. ಪೆರಾನನ ಸದ್ಯದ ಹೆಂಡತಿಯೊಬ್ಬಳೇ ತನ್ನ ಸವತಿಯ ಪ್ರಭಾವ ಇಷ್ಟು ವರ್ಷಗಳ ನಂತರವೂ ಉಳಿದಿರುವುದನ್ನು ಕಂಡು ಕರುಬುತ್ತಿರಬೇಕು. ✡



ಹಿಂದೀ ಕತೆ

# ಸ್ಮಗ್ಲರ್

ಮೂಲ : ಸರೋಜ

ಕನ್ನಡಕ್ಕೆ : ಬಿ. ಸುಬ್ರಾಯ ಅಡಿಗ

ಆ ಸುಂದರ ಯುವಕನ ಹೆಸರು ಬಾಲೀ. ಸಮಾಜದ ನೈತಿಕ ಮೂಲ್ಯಗಳನ್ನು ಚೆನ್ನಾಗಿ ಅರಿತಿದ್ದರೂ, ಅವನ್ನೆಂದೂ ಅವನು ಅನುಸರಿಸುತ್ತಿರಲಿಲ್ಲ. ಅವನ ಸುಂದರ ನೀಲಿ ಕಣ್ಣುಗಳು ನಿಷ್ಕಪಟವಾಗಿ ತೋರುತ್ತಿದ್ದವು. ಅವನ ಮುಗ್ಧ ಮುಖ ಎಂತಹರನ್ನೂ ಆಕರ್ಷಿಸುತ್ತಿತ್ತು. ಆದರೆ ಹೊರನೋಟಕ್ಕೆ ಅವನು ಕಾಣುವುದಕ್ಕೂ ನಿಜವಾಗಿ ಅವನಿರುವುದಕ್ಕೂ ಅಜಗಜಾಂತರವಿತ್ತು. ಅವನು ಹೆಸರಾಂತ ವಂಚಕನಾಗಿದ್ದು, ಹೃದಯದಲ್ಲಿ ಒಂದಿಷ್ಟೂ ಕರುಣೆಗೆ ಎಡೆಗೊಟ್ಟವನಲ್ಲ.

ಅಂದು ಗೋವಾದಿಂದ ಹಡಗಿನಲ್ಲಿ ಪ್ರಯಾಣ ಮಾಡುತ್ತ ಅವನು ಸಹಪ್ರವಾಸಿಯಾದ ಸುಂದರ ತರುಣಿಗೆ ನೈತಿಕತೆಯ ಉಪದೇಶ ನೀಡುತ್ತಿದ್ದ.

"ಸ್ಮಗ್ಲಿಂಗ್ ದೇಶದ್ರೋಹ, ಏಂಜಿಲಾ," ಎಂದ, ಬಾಲೀ.

"ಇರಬಹುದು."–ಸಂಕ್ಷಿಪ್ತವಾಗಿ ನುಡಿದಳು, ಏಂಜಿಲಾ.

"ನೀವು ಕಾನೂನು ಮುರಿಯುತ್ತಿದ್ದೀರಿ."

"ಇದರಲ್ಲೇನು ವಿಶೇಷ! ನಾನು ಬೊಂಬಾಯಿಯಲ್ಲಿ ಕಾರು ನಡೆಸುವಾಗ ಎಷ್ಟೋ ಸಲ ಸಂಚಾರ ನಿಯಮಗಳನ್ನು ಮುರಿದಿದ್ದೇನೆ. ನಾನು ಉಚ್ಛೃಂಖಲ ತರುಣಿಯೆಂದು ಮೊದಲೇ ಹೇಳಿರುವೆ. ಕಾನೂನಿನ ಬಗ್ಗೆ ನನಗೆ ಒಂದಿಷ್ಟೂ ಗೌರವವಿಲ್ಲ. ಕಾನೂನು ಮುರಿಯುವುದೇ ನಮ್ಮ ಧ್ಯೇಯವಾಕ್ಯ ಆಗಿರಬೇಕು. ಆಗ ಮಾತ್ರ ಸುಗಮವಾಗಿ ಬದುಕು ಸಾಗಿಸಬಹುದು."

"ನೀವು ತುಂಬಾ ಸಾಹಸಿಗಳು. ಆದರೆ ನಿಮ್ಮನ್ನು ಸುಂಕದ ಅಧಿಕಾರಿಗಳು ಈ ಹಾರದೊಂದಿಗೆ ಸೆರೆಹಿಡಿದರೆ...! ೨೦ ಸಾವಿರ ರೂಪಾಯಿಯ ಹಾರವನ್ನು ಗೋವೆಯಿಂದ ಬೊಂಬಾಯಿಗೆ ಸುಂಕ ಕೊಡದೆ ತರುವುದು ಮಹಾಪರಾಧ. ಸ್ಮಗ್ಲಿಂಗ್‌ಗಾಗಿ ಅವರು ನಿಮಗೆ ದಂಡ ವಿಧಿಸಿದರೆ ನಿಮ್ಮ ಮನೆಯೇ ಮಾರಿಹೋದೀತು. ಅವರೇನೂ ಸಾಮಾನ್ಯ ದಂಡ ವಿಧಿಸುವುದಿಲ್ಲ. ಬರೇ ೨೦ ಸಾವಿರ ರೂಪಾಯಿಗಾಗಿ ನೀವು ಇಂಥ ಗಂಡಾಂತರಕ್ಕೇಕೆ ಈಡಾಗುತ್ತೀರೆಂಬುದು ನನಗೆ ಅರ್ಥವಾಗುತ್ತಿಲ್ಲ."

"ಕೇವಲ ಹಣಕ್ಕಾಗಿ ನಾನಿದನ್ನು ಕೈಗೊಂಡಿಲ್ಲ. ಇದರಲ್ಲಿ ಸಾಹಸದ ಆನಂದವೂ ಇದೆ. ಬೊಂಬಾಯಿಗೆ ತಲುಪಿದಾಗ ನನಗೆ ಇಮ್ಮಡಿ

ಆನಂದ ಉಂಟಾಗುವುದು. ನಾನಿದನ್ನು ತೊಟ್ಟಾಗೆಲ್ಲ 'ಸುಂಕದ ಅಧಿಕಾರಿಗಳ ಕಣ್ಣಿಗೆ ಮಣ್ಣೆರಚಿದೆನಲ್ಲಾ' ಎಂದು ಅಭಿಮಾನವೆನಿಸುವುದು. ಕದ್ದು ತಿಂದ ತಿಂಡಿಗೇ ರುಚಿ ಹೆಚ್ಚೆಂದು ನಿಮಗೆ ತಿಳಿಯದೆ!" ಎಂದಳು ಎಂಜಿಲಾ.

"ನಿಮಗಿದರಲ್ಲಿ ಸಫಲತೆ ಸಿಕ್ಕೀತೆಂಬ ವಿಶ್ವಾಸವಾದರೂ ಏಕೆ? ನೀವು ಆ ಹಾರವನ್ನು ಸುರಕ್ಷಿತವಾಗಿರಿಸಿದ್ದೀರಾ?"

ಎಂಜಿಲಾ ಒಮ್ಮೆಲೇ ಬೆಚ್ಚಿ ಅವನನ್ನು ನೆಟ್ಟ ದೃಷ್ಟಿಯಿಂದ ನೋಡಿದಳು. ಮತ್ತೆ ಸಹಜವಾಗೆಂಬಂತೆ ಹೀಗೆಂದಳು: "ನನ್ನ ಶೃಂಗಾರ ಸಾಮಗ್ರಿಗಳ ಪೆಟ್ಟಿಗೆಯ ಕೆಳಗಿನ ವಿಶೇಷ ಪದರಿನೊಳಗೆ ಆ ಸರವಿದೆ. ಅದು ಯಾರ ಕಣ್ಣಿಗೂ ಥಕ್ಕನೆ ಬೀಳುವುದಿಲ್ಲ. ಅಲ್ಲದೆ ಹೆಂಗಸರ ಶೃಂಗಾರ ಸಾಮಗ್ರಿಗಳ ಪೆಟ್ಟಿಗೆಯನ್ನು ಅಷ್ಟಾಗಿ ಯಾರೂ ಪರೀಕ್ಷಿಸುವುದಿಲ್ಲ ಎಂಬುದು ನನ್ನ ಹಿಂದಿನ ಅನುಭವ."

"ಸರಿ...ನಿಮಗೆ ಅಷ್ಟೊಂದು ಆತ್ಮವಿಶ್ವಾಸವಿದ್ದರೆ ನಾನೇನೂ ಹೇಳಲಾರೆ. ಆದರೆ ನೀವು ತುಂಬಾ ಎಚ್ಚರಿಕೆಯಿಂದಿರುವುದು ಲೇಸು. ಸುಂಕದ ಅಧಿಕಾರಿಗಳೆದುರು ಹೋದಾಗ ನಿಮ್ಮ ಈ ಪೆಟ್ಟಿಗೆಯನ್ನೇ ನಿಟ್ಟಿಸಬೇಡಿ...ಅಲ್ಲದೆ ಅದನ್ನು ಕಂಕುಳಲ್ಲಿ ಹಿಡಿದೂ ಒಯ್ಯಬೇಡಿ. ಹಾಗೆಂದು ಅತ್ಯಧಿಕ ಉದಾಸೀನತೆಯೂ ತರವಲ್ಲ...ನಿಮ್ಮ ಮೋರೆಯ ಮೇಲೆ ಎಳ್ಳಷ್ಟಾದರೂ ಅಸಹಜತೆ ತೋರಿತೆಂದರೆ ನೀವು ಸಿಕ್ಕಿಬೀಳುವಿರಿ," ಎಂದ ಜಾಲೀ.

"ನೀವೆಷ್ಟು ಒಳ್ಳೆಯವರು! ಆದರೆ ನನ್ನ ಬಗ್ಗೆ ನೀವೇನೂ ಚಿಂತಿಸಬೇಕಿಲ್ಲ. ನಾನು ಬಹಳಷ್ಟು ಅನುಭವ ಪಡೆದಿದ್ದೇನೆ. ಈ ರೀತಿ ಎಷ್ಟೋ ಸಲ ಪ್ರವಾಸ ಮಾಡಿರುವೆ...ನನಗೆ ಹಾರದತ್ತ ಸ್ವಲ್ಪವೂ ಲಕ್ಷ್ಯವಿಲ್ಲ, ಮನೆ ಮುಟ್ಟಿದ ಮೇಲೆಯೇ ಆ ಬಗ್ಗೆ ಯೋಚಿಸುವೆ."

ಜಾಲೀ ಆಕೆಯ ಸುಂದರ ಕೈಯನ್ನು ಹಿಡಿದು, "ನೀನು ಕಾನೂನು ವಿರುದ್ಧವಾದ ಕೆಲಸ ಮಾಡುತ್ತಿರುವಿಯಾದರೂ, ಅದೇಕೋ ನನಗೆ ತುಂಬ ಮೆಚ್ಚುಗೆ. ನಿನ್ನನ್ನೆಂದೂ ನಾನು ಮರೆಯಲಾರೆ," ಎಂದ. ಈಗ ಬಹುವಚನದಿಂದ ಏಕವಚನಕ್ಕೆ ಇಳಿದಿದ್ದ.

"ನಾನು ಸಿಕ್ಕಿಬಿದ್ದರೆ ನೀವು ನನ್ನನ್ನು ಜೈಲಿನಲ್ಲಿ ಭೇಟಿಯಾಗುವಿರಾ?"

"ನಾನು ಜೈಲಿನ ವಾರ್ಡನ್ ಹುದ್ದೆಗೆ ಅರ್ಜಿ ಹಾಕುವೆ. ನಿನ್ನ ಜೊತೆ ಇರುವ ಸಂಯೋಗ ಎಂತಾದರೂ ನನಗೆ ಸಿಕ್ಕರೆ ಸಾಕು."– ಭಾವುಕನಾಗಿ ನುಡಿದ ಜಾಲೀ.

*

ಅಂದೇ ಸಂಜೆ ಹಡಗಿನ ಎಲ್ಲ ಪ್ರವಾಸಿಗರೂ ಒಂದೆಡೆ ಸೇರಿ ಸಂತೋಷಕೂಟದಲ್ಲಿ ಭಾಗವಹಿಸಿದರು. ಹಡಗು ರೇವಿಗೆ ತಲುಪಿದ್ದು ಆ ಇರುಳಿಡೀ ಅವರು ಅಲ್ಲೇ ಕಳೆಯಬೇಕಿತ್ತು.



ಕಾಂತಾ ವರ್ಮಾ



# ನನ್ನ ಲ್ಯಾಪ್ ಅಜ್ಜಿ

ನಾರ್ವೆಯ ಉತ್ತರಕ್ಕೆ ಫಿನ್‌ಮಾರ್ಕ್‌ವಿದಾ ಎಂಬ ಪ್ರದೇಶವಿದೆ. ಕೌತುಕೇನೊ ಅಲ್ಲಿನ ಎರಡು ಸಾವಿರ ಜನಸಂಖ್ಯೆಯ ಒಂದು ಹಳ್ಳಿ. ನಾರ್ವೇಜಿಯನ್ ಭಾಷೆಯಲ್ಲಿ ವಿದಾ ಎಂದರೆ ಪೀಠಭೂಮಿ ಎಂದರ್ಥ. ಫಿನ್‌ಮಾರ್ಕ್ ವಿದಾ ಸಮತಲ ಬೆಟ್ಟಗಳ ಪ್ರದೇಶ. ನಾರ್ವೆಯ ಲ್ಯಾಪ್‌ಲ್ಯಾಂಡ್ ಎಂದು ಹೆಸರಾದ ಈ ಪ್ರದೇಶದಲ್ಲಿ ಲ್ಯಾಪ್ ಜನರು ಹೆಚ್ಚಾಗಿ ವಾಸಿಸುವ ಸ್ಥಾನವೆಂದರೆ ಕೌತುಕೇನೊ.

ಕೌತುಕೇನೋದ ಇತಿಹಾಸ ನೂರಾರು ವರ್ಷಗಳಷ್ಟು ಹಳೆಯದು; ಲ್ಯಾಪ್ ಪರಂಪರೆಗಳಿಂದ ಸಮೃದ್ಧವಾದದ್ದು. ನನಗೆ ಎಪ್ಪತ್ತೈದು ವಯಸ್ಸಿನ ಆಖ್ಬೊಳ ಪರಿಚಯವಾದದ್ದು ಇಲ್ಲಿಯೆ. ಲ್ಯಾಪ್ ಭಾಷೆಯಲ್ಲಿ ಆಖ್ಬೊ ಎಂದರೆ ಅಜ್ಜಿ. ಭಾರತದಷ್ಟು ದೂರದಿಂದ ಬಂದಿರುವವರೆಲ್ಲರಿಗೂ ನನಗೆ ಸಿಕ್ಕಹಾಗೆ 'ಅಜ್ಜಿ' ಸಿಗುವುದು ಕಠಿಣವೆಂದೇ ಹೇಳಬೇಕು. ಅವಳ ಹೆಸರು ಎಲೆನ್ ಹೆತ್ತಾ ಸಾರಾ. ಎರಡು ಮೂರು ದಿನ ಇರಬೇಕೆಂದು ಬಂದ ನಾನು ಅವಳ ಸರಳ ಸ್ವಭಾವವನ್ನೂ ಅವಳು ನನಗೆ ತೋರಿಸುತ್ತಿದ್ದ ಮಮತೆಯನ್ನೂ ನೋಡಿ ಒಂದು ತಿಂಗಳ ವರೆಗೆ ಇದ್ದೆ. ಆಖ್ಬೊ ಪ್ರತಿದಿನ ಲ್ಯಾಪ್ ಭಾಷೆಯನ್ನು ನನಗೆ ಕಲಿಸುತ್ತಿದ್ದಳಲ್ಲದೆ ಐವತ್ತು ವರ್ಷಗಳ ಹಿಂದಿನ ಅನುಭವಗಳನ್ನೂ ಹೇಳುತ್ತಿದ್ದಳು.

ಅವಳ ಕುಟುಂಬ ವಿಶಾಲವಾಗಿತ್ತು. ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳನ್ನೊಳಗೊಂಡು ಅರುವತ್ತು ಜನರನ್ನು ಅದು ಒಳಗೊಂಡಿತ್ತು. ನಾನು ಅಲ್ಲಿ ಬರುವುದಕ್ಕಿಂತ ನಾಲ್ಕು ವರ್ಷ ಮೊದಲು ಆಖ್ಬೊಳ ಗಂಡ ತೀರಿಹೋಗಿದ್ದ. ಮಕ್ಕಳು ಮರಿಗಳಿಗಾಗಿಯೇ ಬೇರೆ ಮನೆ; ಆಖ್ಬೊಳಿಗಾಗಿಯೆ ಬೇರೆ ಮನೆ. ಹೀಗಿದ್ದೂ ಮಕ್ಕಳು ಅಲ್ಲಿಗೆ ಬಂದುಹೋಗುವುದು ನಡೆದೇ ಇರುತ್ತಿತ್ತು. ಯಾವನಿಗಾದರೂ ಹಸಿವೆಯಾಯಿತೆಂದರೆ ಸರಿ. ಆಖ್ಬೊಳ ಮನೆಗೆ ಬಂದವನೆ ರೆಫ್ರಿಜಿರೇಟರ್ ತೆರೆದು, ಅದರಲ್ಲಿದ್ದ ಖಾದ್ಯ ವಸ್ತುವನ್ನು ಹೊರತೆಗೆದು ಬಿಸಿ ಮಾಡಿ ತಿಂದು ಬಿಡುತ್ತಿದ್ದ. ಆಖ್ಬೊ ಮುಗುಳ್ನಗುತ್ತಾ ಅದನ್ನು ನೋಡುತ್ತಿದ್ದಳು. ಖಾದ್ಯ ಅವನಿಗೆ, ಖಾಲಿ ಪಾತ್ರೆ ಆಖ್ಬೊಳಿಗೆ.

ಸೋಜಿಗವೆಂದರೆ ಆಖ್ಬೊಳ ಮುಖದ ಮೇಲೆ ಒಂದೂ ನಿರಿಗೆ ಬಿದ್ದಿರಲಿಲ್ಲ. ಸಂಜೆಯ ಮುಂಚೆ ಅವಳು, "ಕಾಂತಾ, ಗೂದ್ ಲತ್ ಜಾರನಾ"

ಆಭಾರ: 'ನವನೀತ' ಹಿಂದೀ ಡೈಜೆಸ್ಟ್

ಎಂದು ಹೇಳುತ್ತಿದ್ದಳು. ಆದರೆ, ಕಾಂತಾ, ಇವರು ಭಗವಂತನ ಮಕ್ಕಳು, ಅವರ ಮೇಲೆಂದೂ ಸಿಟ್ಟಾಗಬಾರದು, ಎಂದು. ಅನಂತರ ಪಾತ್ರೆಗಳನ್ನು ಸ್ವಚ್ಛಗೊಳಿಸುವಲ್ಲಿ ಮಗ್ನಳಾಗುತ್ತಿದ್ದಳು. ದೇವರ ದಯೆಯಿಂದ ಎಪ್ಪತ್ತೈದರ ಇಳಿವಯಸ್ಸಿನಲ್ಲೂ ಅವಳು ಹೃಷ್ಟಪುಷ್ಟಳಾಗಿದ್ದಾಳೆ.

ಹತ್ತು ದಿನಗಳ ಮಟ್ಟಿಗೆ ಫಿನ್‌ಲೆಂಡಿಗೆ ಹೋಗಿ, ಎರಡೂವರೆ ಸಾವಿರ ಕಿಲೋಮಿಟರುಗಳ ಅಂತರ ಕ್ರಮಿಸಿ ತಿರುಗಿ ಬಂದ ದಿನ ಇನ್ನೂ ನೆನಪಿನಲ್ಲಿದೆ. ಬಾಗಿಲು ಬಡಿದೆ. ಏನೂ ಉತ್ತರ ಬಾರದಾಗ ಅಖ್ಖೊಳ ಒಂದು ಕಿವಿ ಸರಿಯಾಗಿ ಕೇಳುತ್ತಿಲ್ಲ, ಅದಕ್ಕೇ ಬಾಗಿಲು ತೆರೆಯಲಿಲ್ಲ ಅಂದುಕೊಂಡು ಬಾಗಿಲು ನೂಕಿ ಒಳಗೆ ಹೋದೆ. ಅಖ್ಖೊ ಹಾಸಿಗೆಯ ಮೇಲೆ ಮಲಗಿದ್ದಳು.

"ಏನಾಗಿದೆ ಅಖ್ಖೊ?" ಎಂದು ನಾನು ಕೇಳಿದಾಗ "ಊಂಟೀ ಮಾಗೆನ್" (ಬೆನ್ನು ಹಾಗೂ ಹೊಟ್ಟೆ ನೋಯುತ್ತದೆ) ಎಂದು ಉತ್ತರಿಸಿದಳು. ನಾನು ವಿಕ್ಸ್ ಬಾಟಲಿ ತೆಗೆದು ಮಾಲೀಸು ಮಾಡಿದಾಗ ಅವಳಿಗೆ ಸುಖವೆನಿಸಿತು. "ನೀನು ಡಾಕ್ಟರ್ ಏನು?" ಎಂದು ಕೇಳಿದಳು. "ಹೌದು, ಆದರೆ ಮನೆ ಡಾಕ್ಟರು," ಎಂದು ಹೇಳಿದೆ. ಕೇಳುವುದೇನು? ನನ್ನ ಕಾಂತಾ ಡಾಕ್ಟರು; ನಿಮಗೇನಾದರೂ ತೊಂದರೆಯಿದ್ದರೆ ಅವಳು ಗುಣಪಡಿಸುತ್ತಾಳೆ ಎಂದು ಎಲ್ಲರೆದುರು ಹೇಳುತ್ತಾ ಓಡಾಡತೊಡಗಿದಳು.

ಮನೆಯನ್ನು ಬೆಚ್ಚಗಿಡಲಿಕ್ಕೂ ಅಡುಗೆ ಮಾಡಲಿಕ್ಕೂ ಇಲ್ಲಿ ಶತಮಾನಗಳ ಕಾಲದಿಂದ ಕಟ್ಟಿಗೆಯನ್ನು ಉಪಯೋಗಿಸಲಾಗುತ್ತಿತ್ತು. ಆದರೆ ಈ ಹತ್ತು ವರ್ಷಗಳಲ್ಲಿ ಇಲ್ಲಿ ವಿದ್ಯುಚ್ಛಕ್ತಿ ಬಂದಿದ್ದರಿಂದ ಅದನ್ನೇ ಬಳಸುತ್ತಾರೆ. ಆದರೂ ಕಟ್ಟಿಗೆಯ ಭಟ್ಟಿಯನ್ನು ಸಾಮಾನ್ಯವಾಗಿ ಎಲ್ಲರ ಮನೆಯಲ್ಲೂ ಕಾಣಬಹುದು. ಯಾವಾಗ ಬಿರುಗಾಳಿ ಬೀಸಿ ವಿದ್ಯುತ್ಪೂರೈಕೆಯನ್ನು ಅಸ್ತವ್ಯಸ್ತಗೊಳಿಸುವುದೋ ಯಾರಿಗೆ ಗೊತ್ತು?

ಇಂತಹ ಪ್ರಸಂಗಕ್ಕೆಂದೇ ಅಖ್ಖೊ ತನ್ನ ಒಳ ಎಣ್ಣೆಯ ಹೀಟರನ್ನು ಇಟ್ಟುಕೊಂಡಿದ್ದಾಳೆ. ಒಮ್ಮೆ ಎಣ್ಣೆ ತೀರಿಹೋದಾಗ ಆಕೆ, ಸ್ಟೋರಿಗೆ ಹೋಗಿ ಕಟ್ಟಿಗೆ ತರಲು ಹೇಳಿದರು. ಸ್ಟೋರ್ ನೂರು ಮೀಟರುಗಳಷ್ಟು ದೂರ ಇತ್ತು. ಹೊರಗೆ ಬರ್ಫ್ ಬೀಳುತ್ತಿತ್ತು. ಆದರೂ ನಾನು ಅಲ್ಲಿಗೆ ಹೋಗಿ ಚಿಕ್ಕಪುಟ್ಟ ಕಟ್ಟಿಗೆ ತುಂಡುಗಳನ್ನು ಆರಿಸಿ ತಂದೆ.

ಅಖ್ಖೊ ಅದನ್ನು ನೋಡುತ್ತಲೇ, "ಅರೆ, ನಿನಗೆ ಕೊಡಲಿ ಸಿಗಲಿಲ್ಲವೇನು? ಇವುಗಳನ್ನೆಲ್ಲಾ ಮತ್ತೆ ಎರಡೆರಡು ತುಂಡುಗಳಾಗಿ ಮಾಡಬೇಕು," ಎಂದವಳೆ ಕೊಡಲಿಯನ್ನು ತಂದು, ಕಟ್ಟಿಗೆ ಕಡಿದು ಸಣ್ಣ ಸ್ಲೇಜ್ (ಹಿಮಪ್ರದೇಶದಲ್ಲಿ ಉಪಯೋಗಿಸುವ ಗಾಲಿಯಿಲ್ಲದ ಬಂಡಿ)ಯಲ್ಲಿ ಅವುಗಳನ್ನು ಹೇರಿ ತಂದಳು.

ಎರಡು ಮೂರು ಸಲ ನಾನೂ ಕಟ್ಟಿಗೆ ಕಡಿಯಲು ಪ್ರಯತ್ನಿಸಿದೆನಾದರೂ ಫಲಕಾರಿಯಾಗಲಿಲ್ಲ. ಆಗ ಅಖ್ಖೊಳೇ ಕಟ್ಟಿಗೆ ಕಡಿಯಲಾರಂಭಿಸಿದಳು. ಅವಶ್ಯಕತೆಯಿದ್ದಾಗ ಮಾತ್ರ ನಾನು ಕಡಿದ ಕಟ್ಟಿಗೆಗಳನ್ನು ಮನೆಗೆ ತರುತ್ತಿದ್ದೆ. ಇಂತಹ ಇಳಿವಯಸ್ಸಿನಲ್ಲೂ ಕಟ್ಟಿಗೆ ಕಡಿಯುವುದನ್ನು ನೋಡಿ ಆಕೆ ನನಗಿಂತಲೂ ಸಾಕಷ್ಟು ಗಟ್ಟಿಮುಟ್ಟಿಯಾಗಿದ್ದಾಳೆ ಎಂಬ ಭಾವನೆ ನನಗಾಗ ಬಂತು. "ಇಲ್ಲಿರಬೇಕಾದರೆ ಇದನ್ನೆಲ್ಲಾ ನೀನು ಕಲಿಯಲೇಬೇಕು. ಇಲ್ಲವಾದರೆ ಈ ೪೦° ಸೆಂಟಿಗ್ರೇಡಿನಷ್ಟು ವಾತಾವರಣದಲ್ಲಿ ರಕ್ತ ಹೆಪ್ಪುಗಟ್ಟೀತು ನೋಡು," ಎಂದು ಅಖ್ಖೊ ನನಗೆ ಮೇಲಿಂದ ಮೇಲೆ ಹೇಳುತ್ತಿದ್ದಳು.

ಕ್ರಮೇಣ ಹವೆ ಬದಲಾಗತೊಡಗಿತು. ಮೇ ತಿಂಗಳಿನಲ್ಲೂ ಬೆಚ್ಚಗಿನ ಬಟ್ಟೆ ತೊಟ್ಟು ಹೊರಬೀಳಬೇಕಾಗುತ್ತಿತ್ತು. ರಾತ್ರಿ ಹತ್ತು ಗಂಟೆಗೆ ಸೂರ್ಯಾಸ್ತ; ಬೆಳಗಿನ ಎರಡೂವರೆಗೆ ಸೂರ್ಯೋದಯ. ಆದರೂ ಇಲ್ಲಿ ಕತ್ತಲಾಗುತ್ತಲೇ ಇರಲಿಲ್ಲ. ಆದ್ದರಿಂದ ಮನೆಯಲ್ಲಿ ದೀಪ ಹಚ್ಚುವ ಪ್ರಸಂಗವೂ ಬರುತ್ತಿರಲಿಲ್ಲ. ಹಿಮ

ಕರಗತೊಡಗಿತು. ರಾತ್ರಿ ಹವೆ ಕೊಂಚ ತಂಪಾಗಿರುತ್ತಿದ್ದುದರಿಂದ ಕರಗಿದ ಹಿಮ ಮತ್ತೆ ಸ್ವಲ್ಪ ಗಟ್ಟಿಯಾಗುತ್ತಿತ್ತು. ಮುಂಜಾನೆ ಮನೆಯಿಂದ ಹೊರಗೆ ಬಹಿರ್ದೆಶೆಗೆ ಹೋಗುವಾಗ ಇದರಿಂದಾಗಿ ತೊಂದರೆಯೋ ತೊಂದರೆ. ಹಿಮದಲ್ಲಿ ನಡೆಯಲು ನಾನೇನೂ ಅಂಜುತ್ತಿರಲಿಲ್ಲ. ಆದರೆ ಹಿಮ ಪೂರ್ಣವಾಗಿ ಕರಗದ್ದರಿಂದ ಹೊರಗೆ ಕಾಲಿಟ್ಟೊಡನೆ ಅದು ಮೊಣಕಾಲ ವರೆಗೆ ಹಿಮದಲ್ಲಿ ಸಿಕ್ಕಿ ಬೀಳುತ್ತಿತ್ತು. ಆ ಕಾಲನ್ನೆತ್ತುವಷ್ಟರಲ್ಲಿ ಇನ್ನೊಂದು ಕಾಲೂ ಹಿಮದಲ್ಲಿ ಪೂರ್ತಿಯಾಗಿ ಸಿಕ್ಕಿಕೊಂಡಿರುತ್ತಿತ್ತು.

ಭಾರತದಲ್ಲಿ, ಮನಸ್ಸಿಗೆ ಬಂದೊಡನೆ ಸರಕ್ಕನೆ ಮನೆಬಿಟ್ಟು ಹೊರಗೆ ನಡೆದುಬಿಡಬಹುದು. ಆದರೆ ಇಲ್ಲಿಯ ಮಾತು ಹಾಗಲ್ಲ. ಮೇ ತಿಂಗಳಿನಲ್ಲೂ ಮೈತುಂಬಾ ಬೆಚ್ಚಗಿನ ಬಟ್ಟೆಗಳನ್ನು ಧರಿಸಿಯೇ ಹೊರಬೀಳಬೇಕು. ಇತ್ತಿತ್ತಲಾಗಿ, ಹೊಸ ಮನೆಗಳನ್ನು ಕಟ್ಟಿಸುವಾಗ ಮನೆಯಲ್ಲೇ ಶೌಚಕೂಪದ ವ್ಯವಸ್ಥೆಯನ್ನು ಮಾಡುತ್ತಿದ್ದಾರೆ. ಎಷ್ಟೋ ಜನರು ತಮ್ಮ ಹಳೆಯ ಮನೆಯಲ್ಲೂ ಶೌಚಾಲಯವನ್ನು ಹೊಸದಾಗಿ ಕಟ್ಟಿಸಿಕೊಳ್ಳುತ್ತಿದ್ದಾರೆ. ಆದರೂ ಆಮ್ಮೊ ಮಾತ್ರ ಇನ್ನೂ ಹಳೆಯ ಜಾಡಿನಲ್ಲೇ ಸಾಗಿದ್ದಾಳೆ.

ಅವಳು ಏಳನೇ ವರ್ಷದಿಂದ ಹದಿನೈದನೆಯ ವಯಸ್ಸಿನ ವರೆಗೂ ಶಾಲೆ ಕಲಿತಳು. ಆಗ ಕೇವಲ ನಾರ್ವೇಜಿಯನ್ ಭಾಷೆಯನ್ನು ಮಾತ್ರ ಶಾಲೆಗಳಲ್ಲಿ ಕಲಿಸಲಾಗುತ್ತಿದ್ದರೂ ಮುಂದೆ ಲ್ಯಾಪ್ ಜನರ ಆಡುಮಾತಾದ 'ಸಾಮಿ' ಭಾಷೆಯನ್ನೂ ಆಕೆ ಕಲಿತಳು. ಆದರೆ ಇಂದು ಈ ಭಾಷೆಯನ್ನು ಶಾಲೆಗಳಲ್ಲಿಯಷ್ಟೇ ಅಲ್ಲ, ವಿಶ್ವವಿದ್ಯಾಲಯದಲ್ಲೂ ಕಲಿಸುವ ವ್ಯವಸ್ಥೆಯಿದೆ.

ಆಮ್ಮೊಳ ತಂದೆ ಸಣ್ಣ ಅಂಗಡಿಯನ್ನು ಇಟ್ಟಿದ್ದ. ರೇನ್‌ಡಿಯರಿನ ಮಾಂಸ ಹಾಗೂ ಅದರ ಚರ್ಮದಿಂದ ಉತ್ಪಾದಿಸಲಾದ ವಸ್ತುಗಳನ್ನೇ ಅಲ್ಲಿ ವ್ಯವಹಾರದ ಮಾಧ್ಯಮವಾಗಿ ಬಳಸಲಾಗುತ್ತಿತ್ತು. ಲ್ಯಾಪ್ ಸ್ತ್ರೀಯರು ರೇನ್‌ಡಿಯರಿನ ಚರ್ಮದಿಂದ 'ಸ್ಕಾಲಾ' ಹಾಗೂ 'ಕುಮಾಗ್'ಗಳನ್ನು ತಯಾರಿಸುತ್ತಾರೆ. 'ಸ್ಕಾಲಾ' ಎಂದರೆ ಚಳಿಗಾಲದಲ್ಲಿ ಧರಿಸುವ ಬೂಟು ಹಾಗೂ 'ಕುಮಾಗ್' ಎಂದರೆ ಬೇಸಿಗೆಯಲ್ಲಿ ಹಿಮ ಕರಗುವ ಸಮಯದಲ್ಲಿ ಉಪಯೋಗಿಸುವ ಬೂಟು. ನಮ್ಮ ಹಾಗೆ ಇಲ್ಲಿನ ಜನ ಕಾಲುಚೀಲಗಳನ್ನು ಧರಿಸುವುದಿಲ್ಲ. ಬದಲು, ಕೊಂಚ ಒಣ ಹುಲ್ಲನ್ನು ಬೂಟಿನಲ್ಲಿಟ್ಟುಕೊಂಡು ನಡೆಯುತ್ತಾರೆ. ಅದು ಇಂತಹ ಶೀತ ಹವೆಯಲ್ಲೂ ಕಾಲುಗಳನ್ನು ಬೆಚ್ಚಗಾಗಿಡುತ್ತದೆ.

ಪ್ರತಿಯೊಂದು ಕುಟುಂಬದಲ್ಲೂ ಸಾಮಾನ್ಯವಾಗಿ ಎಂಟು ಹತ್ತು ಮಕ್ಕಳಿರುತ್ತವೆ. ಹೀಗಾಗಿ, ಮಕ್ಕಳುಮರಿಗಳನ್ನು ನೋಡಿಕೊಳ್ಳುವುದರಲ್ಲೂ ಮನೆಗೆಲಸ ಮಾಡುವುದರಲ್ಲೂ ಲ್ಯಾಪ್ ಸ್ತ್ರೀಯರ ಸಮಯವೆಲ್ಲಾ ವೆಚ್ಚವಾಗುತ್ತದೆ. ಮೊದಲು ಇಲ್ಲಿ ಮೋಟರುಗಳಾಗಲಿ ಸೈಕಲ್ಲುಗಳಾಗಲಿ, ಕೊನೆಗೆ, ಸರಿಯಾದ ರಸ್ತೆಗಳೂ ಇದ್ದಿಲ್ಲ. ಸ್ಕೀ ಹಾಗೂ ರೇನ್‌ಡಿಯರ್ ಕಟ್ಟಿದ ಸ್ಲೆಜ್‌ಗಳ ಮೂಲಕವೇ ಸಂಚಾರವಾಗಲಿ ಸರಕುಗಳ ಸಾಗಾಣಿಕೆಯಾಗಲಿ ನಡೆಯಬೇಕಿತ್ತು. ಕೌತುಕೇನೊದ ಜನ ಇನ್ನೂರಾಐವತ್ತು ಮೀಟರು ದೂರವಿರುವ ಆಲ್ಟಾಕ್ಕೆ ಹೋಗಿ, ರೇನ್‌ಡಿಯರ್ ಮಾಂಸ, ಚರ್ಮ, ಸ್ಕಾಲಾ, ಕುಮಾಗ್ ಮುಂತಾದವುಗಳನ್ನು ಅಲ್ಲಿನ ಸಾಗರ ತೀರದ ಲ್ಯಾಪ್ ಜನರಿಗೆ ಕೊಟ್ಟು, ಪ್ರತಿಯಾಗಿ ಮೀನು, ಹಿಟ್ಟು, ಉಣ್ಣೆಬಟ್ಟೆಗಳು ಮುಂತಾದ ಅತ್ಯಾವಶ್ಯಕ ಪದಾರ್ಥಗಳನ್ನು ಪಡೆಯುತ್ತಿದ್ದರು. ವರ್ಷದಲ್ಲಿ ಎರಡು ಬಾರಿ ಮಾತ್ರ ಅವರಿಗೆ ಆಲ್ಟಾಕ್ಕೆ ಹೋಗಲು ಸಾಧ್ಯವಾಗುತ್ತಿತ್ತು. ಬೇಸಿಗೆಯಲ್ಲಿ ಬರಹೋಗುವ ಸಾಧನವಿರಲಿಲ್ಲ. ಹೀಗಾಗಿ ಅವರು ರೇನ್‌ಡಿಯರ್‌ಗಳನ್ನು ಕಟ್ಟಿಕೊಂಡು ಚಳಿಗಾಲದಲ್ಲೂ ಬೇಸಿಗೆಗಾಲದಲ್ಲೂ ತಮ್ಮ ವಾಸಸ್ಥಳಗಳನ್ನು ಬದಲಿಸುತ್ತಿದ್ದರು.

ಆಮ್ಮೊ ರೇನ್ ಸಾಮಿ ಎಂಬಾತನನ್ನು

ಮದುವೆಯಾಗಿದ್ದಳು. ಆಗ ಇವರು ಗುಡ್ಡದ ಮೇಲೆ ಡೇರೆಗಳನ್ನು ಕಟ್ಟಿಕೊಂಡು ಇರುತ್ತಿದ್ದರು. ಹವೆಯನ್ನು ಬೆಚ್ಚಗಿಡಲು ಈ ಜನ ಡೇರೆಗಳಲ್ಲಿ ಕಟ್ಟಿಗೆ ಉರಿಸುತ್ತಾರೆ. ಮೇಲೆ ಡೇರೆಯ ಮಧ್ಯದಲ್ಲಿ ಸ್ವಲ್ಪ ಸ್ಥಳವನ್ನು ಖಾಲಿ ಬಿಟ್ಟಿರುವುದರಿಂದ ಹೊಗೆ ಹೊರಗೆ ಹೋಗುತ್ತದೆ. ಆಖ್ಸ್ಬಾಳ ಏಳು ಮಕ್ಕಳೂ ಹುಟ್ಟಿದ್ದು ಈ ತಂಬುಗಳಲ್ಲಿಯೆ. ಮಕ್ಕಳು ದೊಡ್ಡವರಾಗುವ ಹೊತ್ತಿಗೆ ಬೋರ್ಡಿಂಗ್ ಸ್ಕೂಲುಗಳಾಗಿದ್ದರಿಂದ ಅವರು ಸ್ಕೂಲಿಗೆ ಹೋಗತೊಡಗಿದರು. ಚಳಿಗಾಲದ ಆರು ತಿಂಗಳು ಮಾತ್ರ ಶಾಲೆ; ಹಿಮ ಕರಗತೊಡಗಿದ ಮೇಲೆ ಮಕ್ಕಳನ್ನು ಅವರ ತಂದೆ–ತಾಯಿಗಳಿದ್ದಲ್ಲಿಗೆ ತಲುಪಿಸುವುದು ಅಸಾಧ್ಯವಾದುದರಿಂದ ಅನಂತರ ಆರು ತಿಂಗಳು ಬೇಸಿಗೆಯ ರಜೆ.

ಕೂಡಲಿಕ್ಕೂ ಮಲಗಲಿಕ್ಕೂ ಇಲ್ಲಿ ರೇನ್‌ಡಿಯರ್‌ನ ಚರ್ಮವನ್ನು ಉಪಯೋಗಿಸಲಾಗುತ್ತದೆ. ಅನೇಕ ಲ್ಯಾಪ್ ಕುಟುಂಬಗಳಲ್ಲಿ ಇದನ್ನೇ ನನಗೆ ಮಲಗಲು ಕೊಡಲಾಯಿತು. ಕಟ್ಟಿಗೆಯ 'ನೆಲ'ದ ಮೇಲೆ ಇದನ್ನು ಹಾಸಿದರಾಯಿತು, ಹಾಸಿಗೆ ತಯಾರಾದಂತೆಯೇ! ಲ್ಯಾಪ್ ಜನರು ಪರ್ವತಾರೋಹಣ ಮಾಡುವಾಗ 'ಪೆಸ್ಕ' ಹಾಗೂ 'ಬೇಲಿಂಗ್ ಬುಕ್ಸೆ'ಗಳನ್ನು ಧರಿಸುತ್ತಿದ್ದರು. ಪೆಸ್ಕ ಕೋಟಿನಂತಿದ್ದರೆ ಬೇಲಿಂಗ್ ಬುಕ್ಸೆ ಚೂಡಿದಾರ್ ಪಾಯಜಾಮದಂತಿರುತ್ತದೆ. ಕಾಲಲ್ಲಿ ಸ್ಕಾಲಾವನ್ನು ತೊಟ್ಟುಕೊಳ್ಳುತ್ತಿದ್ದರು. ರೇನ್‌ಡಿಯರ್ ಚರ್ಮದಿಂದ ಮಾಡಿದ ಈ ಉಡುಪು ಲ್ಯಾಪ್ ಜನರನ್ನು ಭೀಕರವಾದ ಶೈತ್ಯ, ಬಿರುಗಾಳಿಗಳಿಂದ ರಕ್ಷಿಸುತ್ತವೆ.

ಇಂದಿಗೂ ಪರ್ವತಾರೋಹಣ ಮಾಡುವಾಗ ಅವರು ಈ ಉಡುಪನ್ನೇ ತೊಡುತ್ತಾರೆ. ಅದನ್ನು ಧರಿಸಿ ಅವರು ಬರ್ಫದ ಮೇಲೆ ಕುಳಿತರೂ ಸರಿ, ಮಲಗಿದರೂ ಸರಿ, ಏನೂ ಮುಪ್ಪರಿಣಾಮವಾಗುವುದಿಲ್ಲ. ಇವರು ಧರಿಸುವ ಟೊಪ್ಪಿಗೆ ಒಳಗೆ ಮೆತ್ತಗಿರುವುದರಿಂದ ಮಲಗಿದಾಗ ಲ್ಯಾಪ್‌ಜನ ಅದನ್ನು ತಲೆದಿಂಬಿನಂತೆ ಉಪಯೋಗಿಸುತ್ತಾರೆ. ಹಿಂದೆ, ಮಗು ಹುಟ್ಟಿದ ಕೂಡಲೇ ತಾಯಿ ಅದಕ್ಕಾಗಿ ಈ ಉಡುಪನ್ನು ತಯಾರಿಸುತ್ತಿದ್ದಳು. ಜೊಲ್ಲು ಹೀರಿಕೊಳ್ಳಲು ಬೇರೆಡೆಯ ಹಾಗೆ ನ್ಯಾಪ್‌ಕಿನ್ ತೊಡಿಸದೆ ಎಳೆ ಹುಲ್ಲನ್ನು ತೊಡಿಸುತ್ತಿದ್ದರು. ಆದರೆ ಇಂದು ಕೆಲವೆಡೆಗಳಲ್ಲಿ ಮಾತ್ರ ಈ ರೂಢಿ ಪ್ರಚಲಿತವಾಗಿದೆ.

ಚಳಿಗಾಲದಲ್ಲಿ ಆಖ್ಸ್ಬಾ ಕಾತುಕೇನೊಕ್ಕೆ ಸಮೀಪವಾದ ಗುಡ್ಡಗಳ ಮೇಲೆ ತಂಬು ಕಟ್ಟಿಕೊಂಡು ವಾಸಿಸುತ್ತಿದ್ದಳು ಹಾಗೂ ಬೇಸಿಗೆ ಬಂದೊಡನೆ ತನ್ನ ಸರಕು ಸರಂಜಾಮುಗಳನ್ನು ಕಟ್ಟಿಕೊಂಡು ರೇನ್‌ಡಿಯರ್ ಗುಂಪಿನ ಸಮೇತ ಸಮುದ್ರದ ಕೈಯ (Fiord) ಬಳಿ ಸಾಗಿ ಅಲ್ಲಿ ತುಂಬು ಹಾಕುತ್ತಿದ್ದಳು. ಒಮ್ಮೊಮ್ಮೆ ಮಾರ್ಗಮಧ್ಯೆ ಹಿಮವತ್ತಾದ ಬಿರುಗಾಳಿ ಬೀಸಲಾರಂಭಿಸುತ್ತಿದ್ದುದರಿಂದ ಗಮ್ಯಸ್ಥಾನ ತಲುಪಲು ನಾಲ್ಕೈದು ವಾರಗಳೇ ಹಿಡಿಯುತ್ತಿದ್ದವು. ಸುಮಾರಾಗಿ ಅವರೆಲ್ಲ ರಾತ್ರಿಕಾಲದಲ್ಲೇ ಪ್ರವಾಸ ಕೈಕೊಳ್ಳುತ್ತಿದ್ದರು. ಕತ್ತಲೆಯಂತೂ ಆಗುವುದೇ ಇಲ್ಲ. ಅಲ್ಲದೆ ಹವೆ ತಂಪಾಗಿ ಹಿಮ ಗಟ್ಟಿಯಾಗುವುದರಿಂದ ಸಂಚಾರವೂ ಆಗ ಸುಲಭವಾಗುತ್ತದೆ. ಅಕಸ್ಮಾತ್ತಾಗಿ ಬಿರುಗಾಳಿ ಏಳುವ ಲಕ್ಷಣ ಕಂಡೊಡನೆ ಕಟ್ಟಿಗೆ ಕಡಿದು, ತಂಬು ಹಾಕಿ ಒಳಸೇರಿಬಿಟ್ಟರಾಯಿತು. ಹೇಗೂ ಭೋಜನ ಸಾಮುಗ್ರಿ ಹತ್ತಿರವಿದ್ದೇ ಇರುತ್ತಿತ್ತು.

ಮಾರ್ಚ್–ಏಪ್ರಿಲ್ ತಿಂಗಳುಗಳಲ್ಲಿ ರೇನ್‌ಡಿಯರಿನ ಮಾಂಸ ಒಣಗಿಸಿ ಸಂಚಾರಕ್ಕೆ ಸಿದ್ಧರಾಗುತ್ತಿದ್ದರು. ಅದನ್ನವರು 'ಬಿರಖು' ಎನ್ನುತ್ತಾರೆ ಹಾಗೂ ಬಹು ಅಕ್ಕರೆಯಿಂದ ಸವಿಯುತ್ತಾರೆ. ಮೊದಲು ರೇನ್‌ಡಿಯರಿನ ಮಾಂಸ, ಬ್ರೆಡ್ಡು ಹಾಗೂ ಅಲ್ಪ ಪ್ರಮಾಣದಲ್ಲಿ ಬಟಾಟೆ ಇವು ಭೋಜನದ ಮುಖ್ಯ ಪದಾರ್ಥಗಳಾಗಿದ್ದವು. ಆಖ್ಸ್ಬಾ ೪೦ ವರ್ಷದವಳಾಗುವ ವರೆಗೆ ಅಲ್ಲಿ ಯಾರೂ ಗಜ್ಜರೆ, ಕಾಲಿಫ್ಲಾವರ್, ಬಾಳೆಹಣ್ಣು,

ಮೋಸುಂಬೆ ಮುಂತಾದವುಗಳ ಹೆಸರುಗಳನ್ನೂ ಕೇಳಿರಲಿಲ್ಲ.

ದ್ವಿತೀಯ ಮಹಾಯುದ್ಧ ಪ್ರಾರಂಭವಾಗುವುದಕ್ಕೆ ಸ್ವಲ್ಪ ಮೊದಲು ಆಖ್ಬೊ ಒಂದು ಮನೆ ಕಟ್ಟಿಸಿಕೊಂಡಿದ್ದಳು. ಮಹಾಯುದ್ಧ ಮುಗಿದ ಬಳಿಕ ಜರ್ಮನ್ ಸೈನಿಕರು ಇಡೀ ಕೌತುಕೇನೊವನ್ನು ಸುಟ್ಟುಹಾಕಿದ್ದರಿಂದ ಅವರು ಮತ್ತೆ ಹೊಸದಾಗಿ ಮನೆ ಕಟ್ಟಿಸಿಕೊಡಬೇಕಾಯಿತು. ವಾಶಿಂಗ್ ಮಶೀನ್, ಕುಕರ್, ವಿದ್ಯುತ್ತಿನ ಒಲೆಗಳಂತಹ ಗೃಹೋಪಕರಣಗಳನ್ನು ಕ್ರಮೇಣ ಆಖ್ಬೊ ಕೊಂಡುಕೊಂಡಿದ್ದಾಳೆ. ಆಕೆ "ನಾನೂ ಹಳಬಳು; ನನ್ನ ಮನೆಯೂ ಹಳೆಯದು," ಎಂದು ಮೇಲಿಂದ ಮೇಲೆ ಹೇಳುವುದಿದೆ.

ಸದಾ ಪ್ರತಿಕೂಲ ಪರಿಸ್ಥಿತಿಯನ್ನೆದುರಿಸುತ್ತಾ ಬಂದದ್ದರಿಂದ ಆಖ್ಬೊ ಪ್ರತಿಯೊಂದು ವಸ್ತುವನ್ನೂ ಬಹು ಕಾಳಜಿಪೂರ್ವಕವಾಗಿ ನೋಡಿಕೊಳ್ಳುತ್ತಾಳೆ. ಮೂವತ್ತು ವರ್ಷಗಳ ಹಿಂದಿನ ಹಾಗೆ ಸಂಚಾರಿ ಲ್ಯಾಪ್ ಜನರ ಜೀವನ ಇಂದು ಅಸ್ಥಿರವಾಗಿಲ್ಲ. ಗಟ್ಟಿಮುಟ್ಟಾದ, ಸಾಕಷ್ಟು ಸೌಕರ್ಯಗಳಿದ್ದ ಕಟ್ಟಡಗಳನ್ನು ಎಲ್ಲ ಕಡೆಗಳಲ್ಲೂ ಕಾಣಬಹುದು. ಕಾರ್, ಸ್ನೋ-ಸ್ಕೂಟರುಗಳು ಸಾಮಾನ್ಯವಾಗಿ ಎಲ್ಲರ ಬಳಿ ಇದ್ದೇ ಇವೆ. ರೇನ್‌ಡಿಯರ್ ಸ್ಲೆಜ್‌ಗಳನ್ನು ಕೇವಲ ಈಸ್ಟರ್ ಹಬ್ಬದ ಸಮಯದಲ್ಲಿ ಸ್ಪರ್ಧೆಗಾಗಿ ಹೊರತೆಗೆಯಲಾಗುತ್ತದೆ.

ಕ್ರಿಸ್‌ಮಸ್ ಹಾಗೂ ಈಸ್ಟರ್ ಹಬ್ಬಗಳ ಸುಮಾರಿಗೆ ಈ ಜನರ ವಿವಾಹಗಳಾಗುತ್ತವೆ. ಗುಡ್ಡಗಳ ಮೇಲೆ ವಾಸಿಸುತ್ತಿದ್ದ ಅವರು ಕೆಳಗಿಳಿದು ಬಂದು ವಿವಾಹಕ್ಕಾಗಿ ಚರ್ಚ್ ಸೇರಬೇಕೆಂದರೆ ಮೊದಲು ಹತ್ತಾರು ದಿನಗಳೇ ಹಿಡಿಯುತ್ತಿದ್ದವು. ಪ್ರಯಾಣ ದೀರ್ಘವಾಗಿತ್ತಾದ್ದರಿಂದ ಮಗುವನ್ನು 'ಬಾಪ್ಟೈಜ್'ಗೊಳಿಸುವುದನ್ನೊಳಗೊಂಡು ಎಲ್ಲಾ ಧಾರ್ಮಿಕ ವಿಧಿಗಳನ್ನು ಇದೇ ಸಮಯದಲ್ಲಿ ನೆರವೇರಿಸಲಾಗುತ್ತಿತ್ತು. ಇಂದಿಗೂ ಹೆಚ್ಚಾಗಿ ಧಾರ್ಮಿಕ ಕಾರ್ಯಗಳನ್ನು ನೆರವೇರಿಸುವುದು ಈ ಸಮಯದಲ್ಲೇ.

ಕಕ್ಕಕ್ಕನ ಮಕ್ಕಳಲ್ಲಿ, ಅಜಜಿಯ ಮಕ್ಕಳೊಡನೆ ವಿವಾಹವಾಗುವ ಸಂಪ್ರದಾಯ ಈ ಜನರಲ್ಲಿದೆ. ಮೊದಲು ತಂದೆತಾಯಿಗಳು ವಿವಾಹವನ್ನು ಗೊತ್ತುಪಡಿಸುತ್ತಿದ್ದರು. ಹುಡುಗನ ವತಿಯಿಂದ ವಧುವಿನ ತಾಯಿಗೆ ಪ್ರಸ್ತಾಪ ಹೋದಾಗ ಆಕೆ ಸಂಬಂಧವನ್ನು ಒಪ್ಪಿಕೊಳ್ಳಬೇಕೋ ಬೇಡವೋ ಎಂಬುದನ್ನು ನಿರ್ಧರಿಸುತ್ತಿದ್ದಳು. ಸಂಬಂಧ ಕುದುರಿದರೆ ತನ್ನ ಪಾಲಿನ ರೇನ್‌ಡಿಯರುಗಳನ್ನು ತನ್ನೊಂದಿಗೆ ತೆಗೆದುಕೊಂಡು ಹೋಗುವಳೆಂಬ ಭಯದಿಂದ ವಧುವಿನ ತಾಯಿ ಪ್ರಸ್ತಾಪವನ್ನು ನಿರಾಕರಿಸುತ್ತಿದ್ದುದೇ ಹೆಚ್ಚು. ಆದರೆ ಹಳೆಗಾಲದ ಈ ಪದ್ಧತಿ ಇಂದು ಹೆಸರಿಗೆ ಮಾತ್ರ ಉಳಿದುಕೊಂಡಿದೆ. ಈಗ ಹುಡುಗರೂ ಹುಡುಗಿಯರೂ ತಮಗೆ ಬೇಕಾದವರನ್ನು ತಾವೇ ಆರಿಸಿಕೊಳ್ಳುತ್ತಾರೆ. ವಿವಾಹಕ್ಕಿಂತ ಮೊದಲು ವಧು ಗರ್ಭವತಿಯಾಗುವುದು ಸಾಮಾನ್ಯವಾಗಿದೆ. ನಾನು ನೋಡಿದ ಮೂರು ವಿವಾಹಗಳಲ್ಲಿ ಒಬ್ಬ ವಧುವಿಗೆ ಮೂರು ಮಕ್ಕಳಾಗಿದ್ದರೆ ಇನ್ನೊಬ್ಬಳಿಗೆ ಇಬ್ಬರು ಮಕ್ಕಳಿದ್ದರು.

ಆಖ್ಬೊ ಧಾರ್ಮಿಕ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾಳೆ. ಪ್ರತಿ ರವಿವಾರ ಚರ್ಚಿಗೆ ಹೋಗುತ್ತಾಳೆ. ಹಾಗೂ ಬೈಬಲ್ ಓದುತ್ತಾಳೆ. ಅಷ್ಟೆ ಅಲ್ಲ, ಅವಳು ದಯಾಮಯಿಯೂ ಪ್ರೇಮಮಯಿಯೂ ಇತರರ ಬಗ್ಗೆ ಸಹಾನುಭೂತಿಯುಳ್ಳವಳೂ ಆಗಿದ್ದಾಳೆ. ಈಸ್ಟರ್ ಹಬ್ಬದ ದಿನ ನಾನು ಅವಳಲ್ಲಿಗೆ ಹೋಗಿದ್ದೆ. ಅಂದು ರವಿವಾರ ಆಖ್ಬೊ ಉಪಾಹಾರ ತಯಾರಿಸುತ್ತಿದ್ದಳು. ಸುಮ್ಮನೆ ಕುಳಿತೇನು ಮಾಡುವುದೆಂದು ನಾನು ಸ್ವೆಟರ್ ಹೆಣೆಯತೊಡಗಿದೆ. ಇದನ್ನು ಕಂಡ ಆಖ್ಬೊಗೆ ತುಂಬಾ ಸಿಟ್ಟು ಬಂತು. ಏಕೆಂದು ನನಗೆ ತಿಳಿಯಲಿಲ್ಲ. ಅವಳ ಮೊಮ್ಮಗಳಾದ ಎಲೆನ್ ರಾಂಗ್‌ಇನ್ ತಿಳಿಹೇಳಿದಳು: "ನೋಡು ಕಾಂತಾ, ರವಿವಾರದ ದಿನ ನಾವು ಯಾವ ಕೆಲಸವನ್ನೂ

ಮಾಡುವುದಿಲ್ಲ. ಈ ನಿಯಮವನ್ನು ಆಖ್ಬೊ ಬಹು ವಿಶ್ವಾಸದಿಂದ ಪಾಲಿಸುತ್ತಾಳೆ. ಆದ್ದರಿಂದ ಹೆಣೆಯುವುದನ್ನು ನಿಲ್ಲಿಸಿಬಿಡು." ನಾನು ಹಾಗೆಯೆ ಮಾಡಿದೆ.

ಇಲ್ಲಿ ಸಾಮಾನ್ಯವಾಗಿ ಪರಂಪರಾಪ್ರಿಯರಾದ ಲಿಸ್ತಾದಿಯನ್ ಕ್ರಿಶ್ಚಿಯನ್ನರ ಸಂಖ್ಯೆ ಹೆಚ್ಚು. ಜರ್ಮನಿಯ ಚಿಕ್ಕ ಪುಟ್ಟ ಹಳ್ಳಿಗಳಲ್ಲಿ ಸಾಕಷ್ಟು ಕಾಲವಿದ್ದ ನನ್ನ ತಂಗಿ, ಅಲ್ಲಿನ ಜನ ರವಿವಾರ ಯಾವ ಕೆಲಸವನ್ನೂ ಮಾಡುವುದಿಲ್ಲ; ಆ ದಿನ ಅವರು ಒಳ್ಳೊಳ್ಳೆ ಬಟ್ಟೆ ತೊಟ್ಟು ಒಬ್ಬರನ್ನೊಬ್ಬರು ಭೇಟಿಯಾಗುತ್ತಾರೆ. ಎಂದು ಹೇಳಿದ್ದು ಆಗ ನೆನಪಿಗೆ ಬಂತು. ಆಗ ಏಕೆಂದು ಅರ್ಥವಾಗಿರಲಿಲ್ಲ. ರೂಢಿಗ್ರಸ್ತ ಧಾರ್ಮಿಕ ವಿಚಾರಗಳ ಕ್ರಿಶ್ಚಿಯನ್ನರು ರವಿವಾರದ ದಿನ ಕೆಲಸ ಮಾಡುವುದು ಪಾಪಕರವೆಂದು ಭಾವಿಸುತ್ತಾರೆ ಎಂಬುದು ನನಗೆ ಇಲ್ಲಿಗೆ ಬಂದ ಮೇಲೆ ತಿಳಿಯಿತು.

ಇದರಲ್ಲಿ ಆಖ್ಬೊಳಿಗೆ ತುಂಬಾ ವಿಶ್ವಾಸವಿದೆ. ಮತ್ತೆ ಎರಡನೆಯವರ ಮನನೋಯಿಸದಂತೆ ನಡೆದುಕೊಳ್ಳುವುದು ಒಳ್ಳೆಯದೆಂಬುದರಲ್ಲಿ ನನಗೆ ವಿಶ್ವಾಸವಿದೆ. ನಾನು ಆಖ್ಬೊಳ ಬಳಿಯಿದ್ದಾಗ ಎಷ್ಟೋ ಹಬ್ಬಗಳು ಬಂದುಹೋದವು. ಆಕೆ ಹೇಳಿದ ರೀತಿಯಲ್ಲಿ ನಾನು ಅವುಗಳನ್ನು ಆಚರಿಸಿದೆ. ಎಷ್ಟೋ ಸಲ ನಾನು ಅವಳ ಮುಂದೆ ಹಿಂದಿಯಲ್ಲಿ ಭಜನೆ ಮಾಡಿದೆ. ಅರ್ಥ ತಿಳಿಯದಿದ್ದರೂ ದೇವರ ಹೆಸರು ಕಿವಿಗೆ ಬಿದ್ದಿತೆಂಬ ಕಾರಣದಿಂದ ಆಖ್ಬೊ ಸಂತೋಷಭರಿತಳಾಗುತ್ತಿದ್ದಳು. ಆಕೆ ಹೇಳುತ್ತಿದ್ದಳು: "ನೀನು 'ಗೂಡ್ ಚಾನ್' ಆಗಿದ್ದೀ ನೋಡು. ಇಂದಿನ ಮಕ್ಕಳಿಗೆ ದೇವರಲ್ಲಿ ವಿಶ್ವಾಸವೇ ಇಲ್ಲ. ನೀನು ನನಗೆ ಮಗಳೇ ಸರಿ. ನನಗೆ ಮೂವರು ಹೆಣ್ಣು ಮಕ್ಕಳು, ನೀನು ನಾಲ್ಕನೆಯವಳು."

ಅಣ್ಣ, ತಮ್ಮ, ಬಂಧು, ಬಳಗ ಹೀಗೆ ಹಳ್ಳಿಯ ತುಂಬಾ ಆಖ್ಬೊಳಿಗೆ ಬಳಗದವರಿದ್ದಾರೆ. ಯಾರು ಭೇಟಿಯಾದರೂ ಅವಳು ಬಹು ಪ್ರೀತಿಯಿಂದ, "ಈಕೆ ನನ್ನ ಇಂಡಿಯನ್ ನಯೀಪ್ (ಮಗಳು)," ಎಂದು ಪರಿಚಯ ಮಾಡಿ ಕೊಡುತ್ತಿದ್ದಳು. ಹೀಗಾಗಿ ಹಳ್ಳಿಯವರೆಲ್ಲ ನನ್ನನ್ನು ಆಖ್ಬೊ ನಯೀಪ್ (ಆಖ್ಬೊಳ ಮಗಳು) ಎಂದೇ ಕರೆಯುತ್ತಿದ್ದರು.

ಆಖ್ಬೊ ನನಗೆ ಹೊಸ ಹೊಸ ಭಕ್ಷಭೋಜ್ಯಗಳನ್ನು ಮಾಡಿ ಬಡಿಸುತ್ತಿದ್ದಳು. "ನಿನಗೆ ನನ್ನ ಮಾತ್ (ಅಡಿಗೆ) ಸೇರಲಿಕ್ಕಿಲ್ಲ. ಏಕೆಂದರೆ, ನೀನೋ ಹಣ್ಣುಹಂಪಲಗಳನ್ನೂ ತೊಪ್ಪಲುಪಲ್ಲೆಯನ್ನೂ ತಿನ್ನುವವಳು; ಆದರೆ ನಾನೋ ನಿನಗೆ ಕೇವಲ ರೇನ್‌ಡಿಯರ್ ಮಾಂಸದಿಂದ ಮಾಡಿದ ಅಡುಗೆಯನ್ನು ಬಡಿಸುವವಳು," ಎಂದು ಅವಳು ಹೇಳುತ್ತಿದ್ದಳು. ಆಖ್ಬೊ ಮಾಡಿದ ಬ್ರೆಡ್ಡು ಬಹು ರುಚಿಕರವಾಗಿರುತ್ತಿತ್ತು. ಹಿಟ್ಟಿನ ಪ್ರಮಾಣವನ್ನು ನಿರ್ಧರಿಸುವಲ್ಲಿ ಅವಳ ಕೈ ತಕ್ಕಡಿಯಷ್ಟೆ ನಿಖರವಾಗಿತ್ತು. ಊಟ ಮಾಡುವಾಗ ಇಂದಿಗೂ ಅವಳ ನೆನಪು ಬರುತ್ತದೆ.

ಒಂದು ತಿಂಗಳ ನಂತರ ಹೊರಟು ನಿಂತಾಗ ಅವಳ ಹೃದಯ ತುಂಬಿ ಬಂತು. ನನ್ನ ಕಣ್ಣಂಚಿನಲ್ಲೂ ನೀರು ಕಾಣಿಸಿಕೊಂಡಿತು. "ನೀನು ತಿರುಗಿ ಯಾವಾಗ ಬರುತ್ತೀ?" ಎಂದು ಆಖ್ಬೊ ಕೇಳಿದಾಗ, ನಾನು, "ನೀನೇ ನನ್ನ ಜೊತೆ ಭಾರತಕ್ಕೆ ಬಂದು ಬಿಡಲ್ಲ," ಎಂದು ಹೇಳಿದೆ. ಅದಕ್ಕೆ ಆಖ್ಬೊ ಹೇಳಿದಳು: "ನಾನು ಮುದುಕಿ; ಅಲ್ಲಿನ ಸೆಕೆ ನನಗೆ ಹೇಗೆ ತಡೆದೀತು? ನೀನೇ ತಿರುಗಿ ಇಲ್ಲಿಗೆ ಬಂದುಬಿಡು." ಆಖ್ಬೊಳಿಗೆ ಬಾಳೆಹಣ್ಣುಗಳೆಂದರೆ ಪಂಚಪ್ರಾಣ. ಎಲ್ಲಿಯಾದರೂ ನಾನು ಆ ಹಣ್ಣುಗಳನ್ನು ನೋಡಿದಾಗ, ಆ ವಾತ್ಸಲ್ಯಮಯಿಯ ರೂಪ ಕಣ್ಣಿಗೆ ಕಟ್ಟಿದಂತಾಗುತ್ತದೆ. ✡



# ಕುಟುಂಬದ ಎಲ್ಲರಿಗೂ ಆರೋಗ್ಯಕರ

# ಫಾಸ್ಫೋಮಿನ್






ವಿಟಮಿನ್ ಬಿ ಕಾಂಪ್ಲೆಕ್ಸ್ ಮತ್ತು ಮಲ್ಟಿಪಲ್ ಗ್ಲಿಸರೋ ಫಾಸ್ಫೇಟ್ಸ್ ಯುಕ್ತವಾದ ಫಾಸ್ಫೋಮಿನ್ ಸಮೃದ್ಧ ಟಾನಿಕ್ ಆಗಿದೆ. ಇದು ನಿಮ್ಮ ಕುಟುಂಬದ ಎಲ್ಲರನ್ನೂ ಉಲ್ಲಾಸಿತರಾಗಿಯೂ ಆರೋಗ್ಯವಂತರಾಗಿಯೂ ಇಡುತ್ತದೆ. ಮನೆಯಲ್ಲಿ ಫಾಸ್ಫೋಮಿನ್ ಇರುವಾಗ ಆಯಾಸ ಮತ್ತು ನಿರುತ್ಸಾಹದ ಮಾತೇ ಇಲ್ಲ. ಫಾಸ್ಫೋಮಿನ್ ಶಕ್ತಿಯನ್ನು ವೃದ್ಧಿಸುತ್ತದೆ. ಹಸಿವನ್ನು ಉದ್ದೀಪನಗೊಳಿಸುತ್ತದೆ, ಸಾಮರ್ಥ್ಯವನ್ನು ರಕ್ಷಿಸುತ್ತದೆ. ದೇಹದ ಪ್ರತಿರೋಧಕ ಶಕ್ತಿಯನ್ನು ಬಲಪಡಿಸುತ್ತದೆ. ಫಾಸ್ಫೋಮಿನ್‌ನಿಂದ ಕುಟುಂಬದ ಎಲ್ಲರೂ ಆರೋಗ್ಯವಂತರಾಗಿರುತ್ತಾರೆ.



ಫಾಸ್ಫೋಮಿನ್...
ಹಣ್ಣುಗಳ ರುಚಿಯಿರುವ
ಹಸುರು ಬಣ್ಣದ
ವಿಟಮಿನ್ ಟಾನಿಕ್

SQUIBB SARABHAI CHEMICALS

Shilpi HPMA-37A/72 Kan

# ಕನ್‌ಫ್ಯೂಷಿಯಸ್ ಉವಾಚ

**ಕನ್‌ಫ್ಯೂಷಿಯಸ್ ಚೀನದ ಮಹಾನ್ ದಾರ್ಶನಿಕ. ಇವನು ಕ್ರಿ. ಪೂ ೫೦೦-೬೦೦ ರ ಮಧ್ಯೆ ಬಾಳಿದವನು. ಇವನ ಅಮೃತವಾಣಿಯನ್ನು ಶಿಷ್ಯರಾದ ಸೆಂಕು, ಲುನ್‌ಯು ಯೆನ್‌ಹೂಯಿ ಮುಂತಾದವರು ಬರೆದಿಟ್ಟಿದ್ದಾರೆ. ಅವುಗಳಿಂದಾಯ್ದ ಆಣಿಮುತ್ತುಗಳಿವು.**

* ಇತರರು ನನ್ನನ್ನು ತಿಳಿಯಲಿಲ್ಲವಲ್ಲ ಎಂದು ನಾನು ದುಃಖಪಡುವುದಿಲ್ಲ. ಆದರೆ ಇತರರನ್ನು ನಾನು ತಿಳಿಯಲಿಲ್ಲವಲ್ಲ ಎಂದು ದುಃಖಪಡುತ್ತೇನೆ.

* ಆತ್ಮವು ವ್ಯಾಧಿಯನ್ನು ಸಹಿಸಬಲ್ಲದು; ಆದರೆ ಆತ್ಮವೇ ನೊಂದರೆ ಸಹನೆ ಎಲ್ಲಿಂದ ಬರಬೇಕು?

* ಸ್ತ್ರೀಯನ್ನು ಪ್ರೀತಿಸುವಷ್ಟೇ ಶೀಲವನ್ನು ಪ್ರೀತಿಸುವವನನ್ನು ನಾನಿದು ವರೆವಿಗೂ ಕಂಡಿಲ್ಲ.

* ಸ್ಥಾನ ಸಿಕ್ಕಲಿಲ್ಲವಲ್ಲ ಎಂದು ಪೇಚಾಡುವುದಕ್ಕಿಂತ ಸ್ಥಾನಕ್ಕೆ ತಕ್ಕ ಯೋಗ್ಯತೆಗಾಗಿ ಪೇಚಾಡಿರಿ.

* ಯೋಗ್ಯನನ್ನು ನೋಡಿದರೆ ಅವನ ಮಟ್ಟಕ್ಕೇರುವುದು ಹೇಗೆಂದು ಚಿಂತಿಸು. ಅಯೋಗ್ಯನನ್ನು ನೋಡಿದರೆ ಅಂತರ್ಮುಖಿಯಾಗಿ ಆತ್ಮಪರೀಕ್ಷೆ ಮಾಡಿಕೊ.

* ಸದ್ಗುಣಕ್ಕೆ ನೆರೆಹೊರೆಯಿದ್ದೇ ಇರುತ್ತದೆ.

* ಓದಿದುದರ ಭಾಷೆಯನ್ನರ್ಥ ಮಾಡಿಕೊಳ್ಳುವುದೇ ಬೇರೆ; ಅದರ ಅರ್ಥದ ಸೌಂದರ್ಯವನ್ನು ಅರಿತು ಆಸ್ವಾದನೆ ಮಾಡುವುದೇ ಬೇರೆ.

* ಮಹಾ ಮೇಧಾವಿಗಳು, ಕಡು ಮೂರ್ಖರು ಈ ಇಬ್ಬರು ಎಂದೂ ಬದಲಾಗುವುದಿಲ್ಲ.

* ತನ್ನ ಹಳೆಯ ಜ್ಞಾನವನ್ನು ವಿಮರ್ಶಿಸುತ್ತಾ ನವಜ್ಞಾನವನ್ನು ಸಂಪಾದಿಸುವವನು ಇತರರಿಗೆ ಕಲಿಸುವ ಗುರುವಾಗಬಲ್ಲನು.

* ಸಾಂಸಾರಿಕ ಜೀವನ ವ್ಯವಸ್ಥಿತವಾದಾಗ ರಾಷ್ಟ್ರಜೀವನ ಕ್ರಮಗೊಳ್ಳುತ್ತದೆ.

* ಪ್ರಾಚೀನರು ಆತ್ಮವ್ಯವಸಾಯಕ್ಕಾಗಿ ಅಧ್ಯಯನವನ್ನು ಮಾಡುತ್ತಿದ್ದರು; ಆಧುನಿಕರು ಇತರರ ಮೆಚ್ಚಿಕೆಗಾಗಿ ಅಧ್ಯಯನ ಮಾಡುತ್ತಾರೆ.

* ಬಡವನಾಗಿ ಗೊಣಗಾಡದಿರುವುದು ಕಷ್ಟ; ಶ್ರೀಮಂತನಾಗಿ ಅಹಂಕಾರ ಪಡದಿರುವುದು ಸುಲಭ.

* ಜೀವನದಲ್ಲಿ ಒಂದು ಸ್ಪಷ್ಟ ಉದ್ದೇಶವನ್ನು ಪಡೆದ ನಂತರವೇ ಮನಸ್ಸು ಪ್ರಸನ್ನವಾಗುವುದು.

* ಏನು ಮಾಡಲಿ ಎಂದುಕೊಳ್ಳದವನನ್ನು ಏನು ಮಾಡಬೇಕೋ ನಾ ಕಾಣೆ.

ಸಂಗ್ರಹ: ಡಾ. ಕೃ. ಪೊದುವಾಳ್

# ಶಿಕ್ಷಣವನ್ನು ಶಿಕ್ಷಕನಿಗೇ ಬಿಡಿ!

**ಸ್ವಾತಂತ್ರ್ಯೋತ್ತರದಲ್ಲಿ ನಮ್ಮ ಶಿಕ್ಷಣರಂಗದಲ್ಲಿ ಹಲವಾರು ಪ್ರಯೋಗಗಳು ನಡೆದಿದೆಯಾದರೂ ಸಾಮಾನ್ಯವಾಗಿ ಶಿಕ್ಷಣ ಮಟ್ಟ ಕೆಳಗಿಳಿದಿದೆಯೆಂಬ ಭಾವನೆ ಬಲವಾಗಿದೆ. ಒಂದು ಹಂತದಲ್ಲಿ ಈ ಅವನತಿಯನ್ನು ತಡೆಗಟ್ಟಲು ಮತ್ತು ಶಿಕ್ಷಣದ ಮಟ್ಟವನ್ನು ಎತ್ತರಿಸಲು ಸಹಾಯವಾಗಬಹುದಾದಂಥ ಯೋಜನೆಯ ಹೊಳಹೊಂದನ್ನು ಲೇಖಕರು* ಇಲ್ಲಿ ಹಾಕಿದ್ದಾರೆ. ಈ ಬಗ್ಗೆ ಪ್ರಾಜ್ಞ ಓದುಗರಿಂದ ಪ್ರತಿಕ್ರಿಯೆಯ ರೂಪದಲ್ಲಿ ಮೌಲಿಕ ವಿಚಾರಗಳು ಬಂದರೆ 'ಕಸ್ತೂರಿ' ಸ್ವಾಗತಿಸುತ್ತದೆ.**

ನರಸಿಂಹ ಗುಡಿ ಬಿ.ಎಸ್‌ಸಿ., ಎಮ್.ಎಡ್.

ಶಿಕ್ಷಣದ ಮಟ್ಟ ಇಳಿದಿದೆ ಎಂದು ಎಲ್ಲರೂ ಹೇಳುತ್ತಾರೆ. ಈ ಮಾತಿಗೆ ಸಾಧಾರಣ ಸರ್ವಸಮ್ಮತ ಅರ್ಥ ಹೀಗಿದೆ: ಸುಶಿಕ್ಷಿತನೆನ್ನಿಸಿಕೊಳ್ಳುವ ಇಂದಿನ ವ್ಯಕ್ತಿ ವಿಚಾರಶಕ್ತಿಯಲ್ಲಿ, ಜ್ಞಾನದಲ್ಲಿ ಮತ್ತು ನೈತಿಕ ಸಾಮರ್ಥ್ಯದಲ್ಲಿ ಅದೇ ಸಾಧನದ ಹಿಂದಿನ ವ್ಯಕ್ತಿಗಿಂತ ಕೀಳಾಗಿದ್ದಾನೆ. ಇದನ್ನು ಎತ್ತರಿಸುವ ಸುಸ್ಪಷ್ಟ ಉಪಾಯವೂ ಸುಸಂಗತವಿದೆ: ಪ್ರತಿ ವ್ಯಕ್ತಿಯ ಶಿಕ್ಷಣದಲ್ಲಿ ವಿವೇಕ, ಜ್ಞಾನ ಮತ್ತು ಶೀಲಗಳ ಬಲಸಂವರ್ಧನೆಗೆ ಸಾಕಷ್ಟು ಲಕ್ಷ್ಯ ಕೊಡುವುದು. ಶಿಕ್ಷಣದ ಮಟ್ಟಕ್ಕೆ ಕಾರಣವಾದ ಸಾಮಾಜಿಕ ಅಂಶವನ್ನು ಒಂದು ಕ್ಷಣ ಮರೆಯದಾಗಿ ಬಿಡಲಾಗುತ್ತದೆ.

ವಿವೇಕ-ಜ್ಞಾನ-ಶೀಲ ಸಂವರ್ಧನೆಗೆ ಸದ್ಯ ದೊರೆಯುತ್ತಿರುವುದಕ್ಕಿಂತ ಹೆಚ್ಚು ವೈಯಕ್ತಿಕ ಲಕ್ಷ್ಯ ಸಿಗುವಂತೆ, ಗುರು(ಶಿಕ್ಷಕ) ಕೇಂದ್ರಸ್ಥವಾಗುವಂತೆ ಶಾಲೆಗಳ ಮತ್ತು ವರ್ಗ(ಕಕ್ಷೆ)ಗಳ ಪುನರ್ಘಟನೆಯ ಒಂದು ಯೋಜನೆಯನ್ನು ಇಲ್ಲಿ ರೂಪಿಸಲಾಗಿದೆ.

## ಯೋಜನೆ

ಅರ್ಹತೆ ಇದ್ದ ಹಾಗೆ ಮಾತ್ರ ಗುರು ಒಂದು ವ್ಯಕ್ತಿನಿರತರಾಗಲು ಸನದುಗಳನ್ನು ಕೊಡಬೇಕು. ಇಂಥ ಒಬ್ಬ ಗುರುವಿನ ಶಿಷ್ಯರ ಸಂಖ್ಯೆಗೆ ಒಂದು ಗರಿಷ್ಠ ಮಿತಿ ಇರಬೇಕು (ಇಪ್ಪತ್ತು ಇರಲಿ).

* ಲೇಖಕರು ಕಳೆದ ಸುಮಾರು ಮೂರು ದಶಕಗಳಿಂದಲೂ ಶಿಕ್ಷಣ ಕ್ಷೇತ್ರದಲ್ಲಿದ್ದು ಸದ್ಯ ಉತ್ತರ ಕನ್ನಡದ ಮುರೂರು ಪ್ರಗತಿ ವಿದ್ಯಾಲಯದ ಮುಖ್ಯಾಧ್ಯಾಪಕರಾಗಿದ್ದಾರೆ.

ಇದರಂತೆಯೇ ಶಾಲೆಗಳಲ್ಲಿಯೂ ಪ್ರತಿಯೊಬ್ಬ ಗುರುವಿಗೆ ಇಪ್ಪತ್ತು ಶಿಷ್ಯರಿರಬೇಕು. ಹೀಗೆ ಮಾಡುವಾಗ್ಗೆ ಈಗಿನಂತೆ ಇಯತ್ತಾ-ಆಧಾರಿತ ವಾದ ಕಕ್ಷ್ಯಗಳನ್ನು ಇಟ್ಟುಕೊಳ್ಳಬಹುದು ಅಥವಾ ಬಿಟ್ಟುಬಿಡಬಹುದು. ಗುರು ಈ ಇಪ್ಪತ್ತು ಶಿಷ್ಯರ ಪೂರ್ಣ ಶಿಕ್ಷಣದ ಹೊಣೆ ಹೊರಬೇಕು. ಸಾಮಾನ್ಯವಾಗಿ ಒಬ್ಬ ಶಿಷ್ಯನು ಒಬ್ಬ ಗುರುವಿನ ಪ್ರಭಾವದಲ್ಲಿ ಮೂರು ಅಥವಾ ಹೆಚ್ಚು ವರ್ಷ ಇರಬೇಕು. ಈ ಶಿಷ್ಯದಶೆಯು ಪ್ರೌಢಶಾಲಾಂತ್ಯಕ್ಕೆ ಮುಗಿಯಬೇಕು. ಈ ಇಪ್ಪತ್ತು ಶಿಷ್ಯರು ಒಂದೇ ಇಯತ್ತೆಯವ- ರಾಗಲೀ, ಒಂದೇ ವಯಸ್ಸಿನವರಾಗಲೀ ಇರದೇ ಎರಡು ಅಥವಾ ಮೂರು ಮಟ್ಟದವರಿರಬೇಕು. ಶಾಲೆಯ ಗುರುಗಳ ಶಿಷ್ಯರು ಮತ್ತು ಸ್ವತಂತ್ರ ಗುರುಗಳ ಶಿಷ್ಯರು ಒಂದೇ ಬಗೆಯ ಮೌಲ್ಯ- ಮಾಪನಕ್ಕೆ ಒಳಪಡಬೇಕು. ಅದು ಒಂದೇ ಸಲ ಪ್ರೌಢಶಾಲಾಂತವಾಗಿಯಾಗಲೀ ಅಥವಾ ಎರಡು ಸಲವಾಗಲೀ—ಒಮ್ಮೆ ಪ್ರಾಥಮಿಕ ಶಾಲಾಂತಕ್ಕೆ ಮತ್ತೊಮ್ಮೆ ಪ್ರೌಢಶಾಲಾಂತಕ್ಕೆ— ನಡೆಯ ಬಹುದು. ಸ್ವತಂತ್ರ ಗುರುಗಳು ತಮ್ಮ ಶಿಷ್ಯರ ಅಧ್ಯಾಪನದ ಎಲ್ಲ ಅಂಗಗಳ ನಿರ್ವಹಣೆಯಲ್ಲಿ ಸ್ವತಂತ್ರರು.

## ಪ್ರಯೋಜನಗಳು

ಶಿಷ್ಯದಶೆಯು ದೀರ್ಘವಿದ್ದು, ಶಿಕ್ಷಕರು ಅರ್ಹರಿರುವುದರಿಂದ ಮತ್ತು ಅಧ್ಯಾಪನ ಸ್ವಾತಂತ್ರ್ಯವೂ ಹೆಚ್ಚಿಗೆ ಇರುವುದರಿಂದ ಗುರು-ಶಿಷ್ಯಸಂಬಂಧವು ಘನತರವಾಗುವುದು. ಶಿಷ್ಯನ ವಿಷಯಜ್ಞಾನವು ಅವನ ಯೋಗ್ಯತಾನುಸಾರ ವಾಗಿ ಹರವನ್ನೂ ಆಳವನ್ನೂ ಪಡೆಯುವುದು. ಇಷ್ಟು ಅವಧಿಯಲ್ಲಿ ಇಷ್ಟು ಕಲಿಸಬೇಕೆಂಬ ಕಾಲ ಮಿತಿ ಇಲ್ಲದ್ದರಿಂದ ಅಧ್ಯಯನವು ನಿರಾತಂಕ ವಾಗುವುದು. ವಾರ್ಷಿಕ ಪರೀಕ್ಷೆಗಳು ಇಲ್ಲದ್ದರಿಂದ ಅನಾವಶ್ಯಕ ಮಾನಸಿಕ ಒತ್ತಡಗಳು ಇಲ್ಲದಂತಾಗು ವವು.

ಮಂಡಲಿಯು ಚಿಕ್ಕದಿರುವುದರಿಂದ ಪ್ರತಿ- ಯೊಬ್ಬನಿಗೂ ತನ್ನ ಅಭಿವ್ಯಕ್ತಿಗೆ ಹೆಚ್ಚು ಅವಕಾಶ ಸಿಗುವುದು, ಅವನ ಗುಣಗಳಿಗೆ ಮನ್ನಣೆ ಸಿಗುವುದು, ಮತ್ತು ಅವುಗಳ ಮುನ್ನಡೆಗಳೂ ತಿಳಿಯುವವು. ಇದರಿಂದ ಅವು ಸಹಜವೆ, ವಿಕಾಸ ವಾಗಿ ಫಲಿಸುವವು. ಆತ್ಮಾಭಿವ್ಯಕ್ತಿಗೆ ಸಿಗುವ ವಿಪುಲಾವಕಾಶದ ಫಲವಾಗಿ ಕಲಿಯುವವನಿಗೆ ದಿನೇದಿನೇ ತನ್ನರಿವು ಹೆಚ್ಚುತ್ತ ಹೋಗುವುದು.

ವಿಚಾರಸಾಮರ್ಥ್ಯವು ಅಧ್ಯಾಪನ ವಿಧಾನದ ದಕ್ಷತೆಯನ್ನು ಅನುಸರಿಸಿ ಅಭಿವೃದ್ಧಿಯಾಗು ವುದು. ಮಂಡಲಿಯು ಸಣ್ಣದಿದ್ದಾಗ್ಗೆ ಶಿಷ್ಯನ ಚಟುವಟಿಕೆಗಳು ಹೆಚ್ಚಾಗುವುದರಿಂದ ಅವನ ಬುದ್ಧಿಬಲ ಬೆಳೆಯುವುದು.

ಶೀಲ ಮತ್ತು ಸ್ವಭಾವಗಳು ಅವರವರ ವಿಚಾರ ಹಾಗೂ ಅಭ್ಯಾಸಗಳ ಸಂಯುಕ್ತ ಫಲ. ತನ್ನ ಕ್ರಿಯೆಯ ದೂರದೂರದ ಪರಿಣಾಮ ಗಳನ್ನು ಕಾಣುವವನು ತನ್ನ ಸದ್ಯದ ನಡವಳಿಕೆ ಯನ್ನು ಹೆಚ್ಚು ಸುಸಮಯೋಚಿತವಾಗಿಟ್ಟುಕೊಳ್ಳು ವನು. ಆದರೂ ಒಮ್ಮೊಮ್ಮೆ ದುರ್ಯೋಧನ ನಂತೆ **ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿಃ ಜಾನಾಮಿ ಅಧರ್ಮಂ ನ ಚ ಮೇ ನಿವೃತ್ತಿಃ** ಎಂದಾಗುವುದುಂಟು. ತನಗೆ ಸರಿ ಎನಿಸಿದ್ದನ್ನು ಮಾಡಲು ಬಲ ಸಾಲದೇಹೋಗ- ಬಹುದು. ಆದ್ದರಿಂದ ಆಚಾರ ಮತ್ತು ವಿಚಾರ ಗಳ ಕೆಲವು ಒಳ್ಳೆಯ ರೂಢಿಗಳು ಪ್ರತಿಯೊಬ್ಬ ರಿಗೂ ಇರಬೇಕಾದದ್ದು ಅವಶ್ಯ. ದೀರ್ಘವಾದ ಶಿಷ್ಯದಶೆ, ಅರ್ಹ ಶಿಕ್ಷಕರು ಮತ್ತು ಚಿಕ್ಕ ಶಿಷ್ಯ ಮಂಡಲಿ ಇರುವುದರಿಂದ ಸದಾಚಾರ ಸದ್ವಿಚಾರ ಗಳ ಪ್ರವೃತ್ತಿಗಳು ಬಲಗೊಳ್ಳುವವು.

ಈ ಯೋಜನೆಯ ಅನುಷ್ಠಾನದಿಂದಾಗುವ ಇತರ ಅನುಷಂಗಿಕ ಪರಿಣಾಮಗಳನ್ನು ಹೀಗೆ ಹೇಳಬಹುದು.

ಶಾಲಾಪಾಲಕರೂ ಸ್ವತಂತ್ರ ಗುರುಗಳ ಶಿಷ್ಯ- ರಂತೆಯೇ ಸಂಘಟಿತರಾಗಿರುವುದರಿಂದ ಎರಡು- ತರದ ಗುರುಗಳ ಪ್ರಭಾವಗಳು ತೂಕಕ್ಕೆ ಸಿಗು

ದವು. ಇದರಿಂದ ಈ ಎರಡೂ ಪ್ರಕಾರದ ಶಿಕ್ಷಕರಲ್ಲಿ ಸ್ಪರ್ಧೆ ಏರ್ಪಡುವುದು. ಶಾಲಾಗುರುಗಳು ಬೇಕಾದಷ್ಟು ದಿನ (ನಿವೃತ್ತಿಯ ನಂತರ ಕೂಡ) ಸ್ವತಂತ್ರ ಅಧ್ಯಾಪಕರಾಗುವುದನ್ನು ಎದುರುನೋಡುತ್ತಿರುವರು. ಇದರಿಂದ ಸಾರ್ವಜನಿಕ ಶಾಲೆಯಲ್ಲಿಯ ಶಿಕ್ಷಣದ ಗುಣಮಟ್ಟವು ಹೆಚ್ಚುವುದು.

ಸ್ವತಂತ್ರ ಉಪಾಧ್ಯಾಯರು ತಮ್ಮ ಕಾರ್ಯಕ್ಷಮತೆಯನ್ನು ಹೆಚ್ಚಿಸಿಕೊಳ್ಳುವ ಅಪೇಕ್ಷೆಯಿಂದ ಇಬ್ಬರೋ ಮೂವರೋ ಕೂಡಿಕೊಂಡು ಸಾಂಘಿಕವಾಗಿ ಕಾರ್ಯ ಮಾಡಬಹುದು. ಆರ್ಥಿಕವಾಗಿ ಯಾವ ಕಷ್ಟನಷ್ಟಗಳೂ ಇಲ್ಲದಂತೆ ತಮ್ಮ ಪಾಲುಗಾರರನ್ನು ಬದಲು ಮಾಡಬಹುದು. ಯಾಕೆಂದರೆ ಈ ಬಗೆಯ ಸ್ವಾತಂತ್ರ್ಯಕ್ಕೆ ಬುನಾದಿಯಾಗಿರುವುದು ಅವರ ವೈಯಕ್ತಿಕ ಯೋಗ್ಯತೆ ಮಾತ್ರ.

ಈಗ ಹೊಸದಾಗಿ ಶಾಲೆಗಳನ್ನು ಆರಂಭಿಸುವುದು ಸುಲಭವಿಲ್ಲ. ಆದರೆ ಸಹಾಯಧನ ಕೊಟ್ಟು ಸ್ವತಂತ್ರ ಗುರುಗಳನ್ನು ಶಾಲೆಗಳ ಬೇಡಿಕೆ ಇರುವ ಸ್ಥಳಗಳಿಗೆ ಹೋಗಿ ನೆಲಸಲು ಪ್ರೋತ್ಸಾಹಿಸಬಹುದು.

ಖಾಸಗೀ ಪಾಠ ಹೇಳುವ ಪದ್ಧತಿಯು ಅಪಾಯಕಾರಿ ಎಂದು ತಿಳಿಯಲಾಗುತ್ತದೆ. ಯಾಕೆಂದರೆ, ಅವುಗಳ ಗುರಿಯು ಪರೀಕ್ಷೆ ಪಾಸು ಮಾಡಿಸುವುದು ಮಾತ್ರವಾಗಿದ್ದು ಕಲಿಸುವ ಪದ್ಧತಿಯು ಅದೇ ಗುರಿಗೆ ಅಣಿಗೊಳಿಸಲ್ಪಟ್ಟಿರುತ್ತದೆ. ಇಂಥ ಸ್ವತಂತ್ರ ಗುರುಗಳು ಹೆಚ್ಚಿದಂತೆ ಸಹಜವಾಗಿ ಪಾಲಕರ ಆಕರ್ಷಣೆ ಇಳಿಮುಖವಾಗುತ್ತದಲ್ಲದೆ, ಇಲ್ಲದಂತೆಯೂ ಆಗುತ್ತದೆ.

## ಯೋಜನೆಯ ಯಶಸ್ಸಿಗೆ ಇಷ್ಟವಾದ ಸನ್ನಿವೇಶ

ಶಿಷ್ಯರ ವಿದ್ಯಾರ್ಜನೆಯ ಮೌಲ್ಯಮಾಪನದ ವಿಧಾನಗಳನ್ನು ಮೇಲಿಂದ ಮೇಲೆ ಪರಿಶೀಲಿಸಬೇಕು. ಪಠ್ಯೇತರ ಸಾಧನೆಗಳಿಗೆ ಗುರು[illegible]ಬೇಕು. ಶಿಕ್ಷಣದ ಧ್ಯೇಯಗಳತ್ತ ಲಕ್ಷ್ಯವು ಮತ್ತೆ ಮತ್ತೆ ಕೇಂದ್ರೀಕೃತವಾಗುವಂತೆ ಮೌಲ್ಯಮಾಪನದ ವಿಧಾನಗಳು ಇಲ್ಲದಿದ್ದರೆ ಈ ಯೋಜನೆಯೊಂದೇ, ಯಾವ ಯೋಜನೆಯೂ ಯಶಸ್ವಿಯಾಗಲಾರದು.

ಶಿಕ್ಷಕರ ತರಬೇತಿ ಕಾಲೇಜುಗಳಲ್ಲಿರುವ ಶೈಕ್ಷಣಿಕ ವಿಸ್ತರಣ ಸೇವೆಯ ಸೌಕರ್ಯಗಳು ಈ ಸ್ವತಂತ್ರ ಗುರುಗಳಿಗೂ ಲಭ್ಯವಾಗಬೇಕು. ಇದರ ಫಲವಾಗಿ ಇವರ ಜ್ಞಾನವು ಸತತ ವೃದ್ಧಿಯಾಗುವುದು ಮತ್ತು ಇವರೂ ಪ್ರಯೋಗಶೀಲರಾಗುವರು. ಇವರು ಸ್ವತಂತ್ರರಿರುವುದರಿಂದ ವಿಸ್ತರಣ ಸೇವೆಯ ಅವಕಾಶವನ್ನು ಪಡೆಯುವರು; ಇಷ್ಟೇ ಅಲ್ಲ, ಅದರ ಮಟ್ಟವು ಏರಲು ಕಾರಣರಾಗುವರು. ಯಾಕೆಂದರೆ, ಅದರ ಗುಣದೋಷಗಳನ್ನು ನಿರ್ದಾಕ್ಷಿಣ್ಯವಾಗಿ ವಿಮರ್ಶಿಸಲು ಇವರಿಗೆ ಸಾಧ್ಯ.

## ಶಿಕ್ಷಣ ಮತ್ತು ಮೂಲಭೂತ ಹಕ್ಕುಗಳು

ಪ್ರಜಾಪ್ರಭುತ್ವದಲ್ಲಿ ನ್ಯಾಯಾಂಗದ ಸ್ವಾಧೀನತೆಯು ಸ್ವಾತಂತ್ರ್ಯದ ರಕ್ಷಕ ಎಂದು ಪರಿಗಣಿಸಲ್ಪಡುತ್ತದೆ. ಆದರೆ ಸರಕಾರದಿಂದ ನಿಯಂತ್ರಿತವಾದ ಶಿಕ್ಷಣದ ಅಪಾಯ ಮಾತ್ರ ಇನ್ನೂ ಅನೇಕರ ಲಕ್ಷ್ಯವನ್ನು ಸೆಳೆದಿಲ್ಲ. ಸರಕಾರವು ಶಿಕ್ಷಣವನ್ನು ತನ್ನ ಮತಪ್ರಚಾರದ ಸಾಧನವನ್ನಾಗಿ ಮಾಡಿಕೊಂಡು ಜನತೆಯನ್ನು ವಿಚಾರದಾಸ್ಯದಿಂದ ಪೂರ್ಣ ದಾಸ್ಯಕ್ಕೆ ಈಡುಮಾಡಬಹುದು. ಈ ಯೋಜನೆಯಲ್ಲಿ ಶಿಕ್ಷಕ-ಶಿಕ್ಷಣಸ್ವಾತಂತ್ರ್ಯವು ಸಹಜವಾಗಿ ಅಂತರ್ಗತವಾಗಿದೆ. ಇದರಿಂದ ಸ್ವತಂತ್ರ ವಿಚಾರಶಕ್ತಿಯು ಪೋಷಣೆ ಪಡೆಯುತ್ತದೆ. ನಮ್ಮ ಸಂವಿಧಾನದ ಹತ್ತೊಂಬತ್ತನೆಯ ವಿಧಿಯಲ್ಲಿ ಹೇಳಲಾದ ಮೂಲಭೂತ ಹಕ್ಕುಗಳಲ್ಲಿ ಅಗ್ರಸ್ಥಾನ ಪಡೆದ ವಾಕ್‌ಸ್ವಾತಂತ್ರ್ಯ, ಮೊದಲಾದವು ಸ್ವತಂತ್ರ ವಿಚಾರದ ಅಭ್ಯಾಸದಿಂದ ಮಾತ್ರ ಸಫಲವಾಗಬಲ್ಲವು.

# ಅನುಬಂಧ

ಈ ಪ್ರಬಂಧದಲ್ಲಿ ವ್ಯಕ್ತವಾದ ಕೆಲವು ಅಂಶಗಳಿಗೆ ವಿವರಣೆ ಬಯಸಿ ಸಂಪಾದಕರು ಕೇಳಿದ ಕೆಲವು ಪ್ರಶ್ನೆಗಳಿಗೆ ಲೇಖಕರು ಇಂತು ಉತ್ತರಿಸುತ್ತಾರೆ:

**ಪ್ರಶ್ನೆ:** ಗುರು-ಶಿಷ್ಯ ಪ್ರಮಾಣವು ೧:೨೦ ಎಂದು ಹೇಳುವುದರಿಂದ ಅರ್ಹ ಶಿಕ್ಷಕರ ಕೊರತೆಯುಂಟಾಗಲಿಕ್ಕಿಲ್ಲವೆ? ಸದ್ಯದ ವಿದ್ಯಾರ್ಥಿ ದಟ್ಟಣೆಗೆ ಇದೇ ಕಾರಣವಾಗಿಲ್ಲವೆ ?

**ಉತ್ತರ:** ಗುರು-ಶಿಷ್ಯ ಪ್ರಮಾಣವು ಕಟ್ಟುನಿಟ್ಟಾಗಿ ಪಾಲಿಸಬೇಕಾದದ್ದೇನಲ್ಲ. ಸಾಮಾನ್ಯರಾದ ಅರ್ಹ ಶಿಕ್ಷಕರ ಕೊರತೆಯಿಲ್ಲ. ನಿವೃತ್ತ ಶಿಕ್ಷಕರೂ ಈ ಕಾರ್ಯಕ್ಕೆ ಲಭ್ಯವಾಗುವರು. ಸುಶಿಕ್ಷಿತ ನಿರುದ್ಯೋಗಿಗಳಂತೂ ಇದ್ದೇ ಇದ್ದಾರೆ. ವಿದ್ಯಾರ್ಥಿ ದಟ್ಟಣೆಗೆ ಕಾರಣ ಶಾಲೆಗಳಲ್ಲಿ ನೆಲಕ್ಕೆ ಮತ್ತು ಇತರ ವೆಚ್ಚಕ್ಕೆ ಬೇಕಾಗುವ ಹಣದ ಕೊರತೆ.

**ಪ್ರಶ್ನೆ:** ಪಾಲಕರು ತಮ್ಮ ಮಕ್ಕಳ ಶಿಕ್ಷಣಕ್ಕಾಗಿ ಒಬ್ಬೊಬ್ಬರು ಶಿಕ್ಷಕರನ್ನೇ ಅವಲಂಬಿಸಬೇಕಾಗುತ್ತದೆ; ಇದರಿಂದ ಅನುಬಂಧ (Continuity) ತಪ್ಪಿಹೋಗಬಹುದಲ್ಲವೇ ?

**ಉತ್ತರ:** ಈ ಯೋಜನೆಯಂತೆ ಶಿಷ್ಯವರೆಯು ಕನಿಷ್ಠ ಮೂರು ವರ್ಷದ್ದಿದೆ. ಈ ಅವಧಿ ದೀರ್ಘವಾಗಿದ್ದಷ್ಟು ಒಳ್ಳೆಯದು. ಹಾಗೆ ಮಾಡುವುದಕ್ಕೆ ನಿಷೇಧವೇನಿಲ್ಲ. ಹೈಸ್ಕೂಲ್ ಶಿಕ್ಷಣದ ಅವಧಿ ಮೂರು ವರ್ಷದ್ದಿದೆ. ಸಾಧಾರಣ ಏಳು ಬರೆದ ಬಂದ ನಂತರ ಆರಂಭಿಸಿದರೂ ಪ್ರಾಥಮಿಕ ಶಿಕ್ಷಣವನ್ನು ಅನುಬಂಧವಿಚ್ಛಿತ್ತಿ ಇಲ್ಲದೆ ಮುಗಿಸಬಹುದು. ಮರಣ, ರೋಗ,' ಸ್ಥಳಾಂತರ ಮೊದಲಾದ ಅನಿವಾರ್ಯ ಕಾರಣಗಳಿಂದಾಗುವ ಅನುಬಂಧ ವಿಚ್ಛೇದ ಮಾತ್ರ ಅಪರಿಹಾರ್ಯ.

**ಪ್ರಶ್ನೆ:** ಈ ಯೋಜನೆಯು ಯಶಸ್ಸಿಗೆ ಅವಶ್ಯವಾದ ಹಣಕಾಸಿನ ವಿಚಾರ ?

**ಉತ್ತರ:** ಈ ಯೋಜನೆಯು ಪ್ರಾರಂಭವಿರುವುದು ಶಿಕ್ಷಣವನ್ನು ದಕ್ಷ ಮಾಡುವುದರಲ್ಲಿ. ಶಿಕ್ಷಕರಿಗೆ ಸಹಾಯಧನ ಕೊಡಬಹುದು ಎಂದು ಸೂಚಿಸಿದೆ. ಇದರಿಂದ ಶಾಲೆಗಳನ್ನು ಆರಂಭಿಸುವುದು ಈಗಿನದಕ್ಕಿಂತ ಕಡಿಮೆ ಖರ್ಚಿನಲ್ಲಾಗುವುದು. ಈ ಸಹಾಯಧನ ಉಪಜೀವನಕ್ಕೆ ಸಾಲದಿದ್ದರೆ ಪಾಲಕರು ಫೀ ಕೊಡಬೇಕಾಗುವುದು. ಸಹಾಯಧನ ನಿಯಮಗಳು ಅಥವಾ ನಿರ್ಬಂಧಗಳು ಶಿಕ್ಷಣ ಸ್ವಾತಂತ್ರ್ಯಕ್ಕೆ ಮಾರಕವಾಗದಂತಿರುವುದು ಮುಖ್ಯ. ಹಣಕಾಸಿನ ಸಮಸ್ಯೆಯು ದೊಡ್ಡದಾಗುವ ಕಾರಣವಿಲ್ಲ. ಯಾಕೆಂದರೆ, ಈ ಯೋಜನೆಯು ಸರಕಾರವಾಗಲಿ ಸಂಘಗಳಾಗಲಿ ಶಾಲೆಗಳನ್ನು ತೆರೆಯುವುದನ್ನು ನಿಷೇಧಿಸುವುದಿಲ್ಲ. ಖಾಸಗಿ ಶಿಕ್ಷಕರು ಖಾಸಗಿ ಡಾಕ್ಟರರಂತೆಯೂ ಸರಕಾರಿ ವ್ಯವಸ್ಥೆ ಇದ್ದಲ್ಲಿ ಮತ್ತು ಇಲ್ಲದಲ್ಲಿ, ಎಲ್ಲಿ ಬೇಕಾದಲ್ಲಿ ಇರಬಲ್ಲರು. ಆದರೆ ಒಂದೇ ವ್ಯತ್ಯಾಸವೆಂದರೆ ಡಾಕ್ಟರರ ವಿಷಯದಲ್ಲಿ ಅವರ ಸೇವೆಯನ್ನು ಪಡೆಯುವವರ ಸಂಖ್ಯೆಗೆ ನಿರ್ಬಂಧವಿಲ್ಲ; ಇಲ್ಲಿ ಮಾತ್ರ ಒಬ್ಬ ಶಿಕ್ಷಕ ಹೊಂದಬಹುದಾದ ಶಿಷ್ಯರ ಸಂಖ್ಯೆಗೆ ಗರಿಷ್ಠ ಮಿತಿಯೊಂದಿದೆ. ದಕ್ಷತೆಗೆ ಇದು ಅವಶ್ಯ. ✡

**(NCERT ಸೆಮಿನಾರ್ ರೀಡಿಂಗಿಗಾಗಿ ೧೯೭೧ ರ ಸಪ್ಟಂಬರ್ ೩೦ ರೊಳಗಾಗಿ ಬರೆದು ಸಾದರಪಡಿಸಲಾದ ಪ್ರಬಂಧವಿದು )**


ಎಡಿಸನ್
40 ಗಂಟೆ
ಉರಿಯುವ ಶುಭ್ರ
ಬೆಳಕಿನ ಬಲ್ಬ್
ಕಂಡುಹಿಡಿದನು
ಜಿಇಸಿ ಆಸ್ರಮ್ ಬಲ್ಬುಗಳು 1,360 ಗಂಟೆ
ಹೆಚ್ಚು ಕಾಲ ಉರಿಯುತ್ತವೆ!

# ನಗೆಮಲ್ಲಿಗೆ

ಗುರು– ಈಗ ಇರುವ, ಆದರೆ ಒಂದು ನೂರು ವರ್ಷಗಳ ಹಿಂದೆ ಈ ಜಗತ್ತಿನಲ್ಲಿ ಇದ್ದಿರದ ಆಶ್ಚರ್ಯಕರ ವಸ್ತು ಯಾವುದು!

ಶಿಷ್ಯ– ನೀವು ಸಾರ್!

—ಸಂಗ್ರಹ: ದಿನೇಶ ಪಾಟೀಲ

*

"ನಿನ್ನೆ ನಾನು ಅವಳನ್ನು ಧೈರ್ಯಮಾಡಿ ಕೇಳಿದೆ, ನನ್ನ ಮದುವೆ ಆಗ್ತಿಯಾ ಅಂತ."

"ಅಂತೂ ಧೈರ್ಯ ಮಾಡಿದೆ ಅನ್ನು. ಆದರೆ ನಾನು ಹೇಳಿಕೊಟ್ಟ ಹಾಗೆ 'ನಾನು ನಿನಗೆ ಯೋಗ್ಯನಲ್ಲ ಅಂತ ನನಗೆ ಗೊತ್ತಿದೆ' ಅಂತ ಹೇಳಿದಿಯೋ ಇಲ್ಲವೊ? ಹಾಗೆ ಹೇಳಿದರೆ ಹುಡುಗಿಯರ ಮೇಲೆ ಒಳ್ಳೆ ಪರಿಣಾಮವಾಗುತ್ತೆ."

"ಅದೇ ಈಗ. ನಾನು ಹೇಳುವ ಮೊದಲೇ ಅವಳೇ ಅದನ್ನ ಹೇಳಿಬಿಟ್ಟಳು," ಎಂದ ನಿರಾಶ ಪ್ರೇಮಿ.

*

ಪತ್ರಿಕೆಯಲ್ಲಿನ ಮುದ್ರಣ ದೋಷಗಳ ಬಗ್ಗೆ ಓದುಗನೊಬ್ಬನಿಂದ ಬಂದ ದೂರಿಗೆ ಸಂಪಾದಕ ಕೊಟ್ಟ ಉತ್ತರ:

"ಮಹನೀಯರೆ, ಈ ಮುದ್ರಣ ದೋಷಗಳು ಪ್ರಮಾದದಿಂದ ಆದವಲ್ಲ ಬುದ್ಧಿಪೂರ್ವಕವಾದವುಗಳು. ನಾವು ಪ್ರತಿಯೊಂದು ಅಭಿರುಚಿಯನ್ನೂ ಪೂರೈಸಲು ಯತ್ನಿಸುತ್ತೇವೆ. ಕೆಲ ಓದುಗರು ತಪ್ಪುಗಳನ್ನೇ ಹುಡುಕುತಾರೆಂದು ನಾವು ಬಲ್ಲೆವು. ಅಂಥವರನ್ನೂ ನಾವು ನಿರಾಶೆಗೊಳಿಸಲು ಅಪೇಕ್ಷಿಸುವುದಿಲ್ಲ."

*

ಒಬ್ಬನು ಒಂದು ಹೋಟಲಿಗೆ ನಿತ್ಯ ೧೦೦ ಕೋಳಿ ಮೊಟ್ಟೆಗಳನ್ನು ಪೂರಯಿಸುತ್ತಿದ್ದ. ಆ ದಿನ ಅವನು ತಂದ ಬುಟ್ಟಿಯಲ್ಲಿ ೧೦೧ ಮೊಟ್ಟೆಗಳಿದ್ದುದನ್ನು ಕಂಡು ಹೋಟಲ್ ಮೆನೇಜರ್ ಹೇಳಿದ: "ಒಂದು ಮೊಟ್ಟೆ ಹೆಚ್ಚಿದೆ. ಅದನ್ನು ತೆಗೆದುಕೊಂಡು ಬಿಡು."

"ಛೇ ಅದೊಂದರಿಂದ ನಾನೇನು ಶ್ರೀಮಂತನಾಗಬೇಕಾಗಿದೆ. ಇರಲಿಬಿಡಿ."

ಅವನ ವಿಶಾಲ ಮನಸ್ಸನ್ನು ಮೆಚ್ಚಿಕೊಂಡು ಮೆನೇಜರ್, "ಹಾಗಾದರೆ, ನೀನು ಹಾಗೆಯೆ ಹೋಗುವುದು ಸರಿಯಲ್ಲ, ಏನಾದರೂ ಕುಡಿದು ಹೋಗು," ಎಂದು ಹೇಳಿದ.

"ಆಗಲಿ," ಎನ್ನುತ್ತ ಇವನು ಮಾಣಿಯನ್ನು ಕರೆದು, "ನನಗೆ ಒಂದು ಗ್ಲಾಸ್ ಹಾಲು ತಂದು ಕೊಡು. ಅದರಲ್ಲಿ ಒಂದು ಮೊಟ್ಟೆಯನ್ನು ಒಡೆದು ಹಾಕು," ಎಂದು ಆಜ್ಞಾಪಿಸಿದ.




"ಒಳಗೆ ಪ್ರವೇಶವಿಲ್ಲ, ಏನು ಮಾಡುವುದು ?"

ಸಾಹಿತಿಯ ಪತ್ನಿಯೊಬ್ಬಳು ಪತ್ರಿಕೆಯಲ್ಲಿ ಈ ರೀತಿ ಜಾಹೀರಾತು ಕೊಟ್ಟಳು:

"ನನ್ನ ಪತಿಯ ೨೦೦ ಪುಸ್ತಕಗಳು ಕೇವಲ ೧೦೦ ರೂಪಾಯಿಗಳಿಗೆ ದೊರೆಯುತ್ತವೆ. ಆಸಕ್ತಿಯಿದ್ದವರು ನಂ. ೬೪೭ ಕ್ಕೆ ಫೋನ್ ಮಾಡಿ ವಿಚಾರಿಸಬಹುದು.

ವಿ. ಸೂ: ಒಂದು ವೇಳೆ ಫೋನಿನಲ್ಲಿ ಗಂಡು ಧ್ವನಿ ಕೇಳಿಬಂದರೆ ತಟ್ಟನೆ ಫೋನ್ ಕೆಳಗಿಟ್ಟುಬಿಡತಕ್ಕದ್ದು."

*

ಮಿತ್ರರಿಬ್ಬರು ಕುದುರೆ ಗಾಡಿಯಲ್ಲಿ ಬೇರೂರಿಗೆ ಹೊರಟಿದ್ದರು. ದಾರಿಯಲ್ಲಿ ಕಾಡಿನಲ್ಲಿ ಅವರ ಗಾಡಿ ಹೊರಟಿದ್ದಾಗ ಸುಮಾರು ನೂರು ಗಜಗಳ ಅಂತರದಲ್ಲಿ ಕೆಲವು ಶಸ್ತ್ರ ದರೋಡೆಕೋರರು ಮರಗಳ ಮರೆಯಿಂದ ಹೊರಬಿದ್ದರು. ಅದನ್ನು ಕಂಡವನೇ ಒಬ್ಬ ತನ್ನ ಜೇಬಿನಿಂದ ನೂರು ರೂಪಾಯಿಯ ಎರಡು ನೋಟುಗಳನ್ನು ಹೊರತೆಗೆದು ಇನ್ನೊಬ್ಬನ ಕೈಗಿಡುತ್ತ ಹೇಳಿದ: "ಇಗೋ, ನಿನಗೆ ನಾನು ಕೊಡಬೇಕಾಗಿದ್ದ ಸಾಲದ ಬಾಕಿ ಪೂರ್ತಿ ಮುಟ್ಟಿದಂತಾಯಿತು ನೋಡು."

*

ಕಂಪನಿಯ ಮೀಟಿಂಗಿನಲ್ಲಿ ಚೇರಮನ್ನನ ಭಾಷಣ ಭರ್ಜರಿಯಾಗಿ ನಡೆದಿತ್ತು "ಎಷ್ಟೋ ಕಂಪನಿಗಳಲ್ಲಿ ಅರ್ಧದಷ್ಟು ಜನರು ಕೆಲಸ ಮಾಡುತ್ತಿದ್ದರೆ ಇನ್ನರ್ಧದಷ್ಟು ಜನ ಏನೂ ಕೆಲಸ ಮಾಡದೆ ಆಲಸಿಗಳಾಗಿರುತ್ತಾರೆ. ಆದರೆ ಸಂತೋಷದ ಸಂಗತಿಯೆಂದರೆ ನಮ್ಮ ಕಂಪನಿಯಲ್ಲಿ ಪರಿಸ್ಥಿತಿ ತದ್ವಿರುದ್ಧವಾಗಿದೆ."

"ಏನ್ರೀ, ಹೀಗೆ ಕೊಡುವುದೇ ಪ್ಯಾಂಟನ್ನು," ಗಿರಾಕಿ ಲಾಂಡ್ರಿಯ ಮಾಲಕನೆದುರು ಸಿಟ್ಟಿನಿಂದ ಗರ್ಜಿಸುತ್ತಿದ್ದ. "ಏನಾಗಿದೆ ಅದಕ್ಕೆ? ನಿಮ್ಮ ಹಾಫ್ ಪ್ಯಾಂಟನ್ನು ಚೆನ್ನಾಗಿಯೇ ಒಗೆದಿದ್ದೇನಲ್ಲ," ಎಂದು ಮಾಲಕ ಸಮಾಧಾನದಿಂದ ಉತ್ತರಿಸಿದಾಗ ಗಿರಾಕಿಯ ಸಿಟ್ಟು ನೆತ್ತಿಗೇರಿತು. ಆತ ಕೌಂಟರನ್ನು ಗುದ್ದಿ ಕೂಗಿದ: "ಆಂ! ಏನಂದಿ? ಹಾಫ್ ಪ್ಯಾಂಟೇ? ನಿನಗೆ ಅದನ್ನು ಕೊಟ್ಟಾಗ ಅದು ಫುಲ್‌ಪ್ಯಾಂಟ್ ಆಗಿತ್ತು."

*

ಪೋಲೀಸ್ ಇನ್‌ಸ್ಪೆಕ್ಟರ್: ಆಕೆ ಗುಂಡು ಹೊಡೆದು ಗಂಡನನ್ನು ಕೊಂದು ಹಾಕಿದ್ದಾಳೆ.

ಅಧಿಕಾರಿ: ಹಾಗಾದರೆ ಅವನ ದೇಹದ ಮೇಲೆ ಪೌಡರಿನ ಗುರುತು ಇರಬೇಕಲ್ಲ.

ಇನ್‌ಸ್ಪೆಕ್ಟರ್: ಅದು ಇದ್ದದ್ದರಿಂದಲೇ ಆಕೆ ಅವನಿಗೆ ಗುಂಡು ಹಾಕಿದ್ದು.

*

"ರಾಮಣ್ಣ, ನಿನ್ನಂಥ ಸಣ್ಣ ಹುಡುಗರು ಹಾಗೆಲ್ಲಾ ಮೊಳೆ ಹೊಡೆಯಬಾರದಪ್ಪಾ. ಆಕಸ್ಮಾತ್ತಾಗಿ ಸುತ್ತಿಗೆ ಮೊಳೆಯ ಮೇಲೆ ಬೀಳದೆ ನಿನ್ನ ಬೊಟ್ಟುಗಳ ಮೇಲೆ ಬಿದ್ದರೆ ಅವು ಜಜ್ಜಿ ಬಜ್ಜಿಯಾಗಿ ಹೋದಾವು ನೋಡು?"

"ಅರೆ, ಅದಕ್ಕೆಲ್ಲಾ ನಿನಗೆ ಚಿಂತೆ ಬೇಡ. ನಾನು ಬರೇ ಸುತ್ತಿಗೆಯಿಂದ ಹೊಡೆಯುವವ, ಮೊಳೆ ಹಿಡಿಯುವ ರಾಮು."

"ನಾನು ಯಾವ ಕೆಲಸ ಪ್ರಾರಂಭಿಸಿದರೂ ಸರಿ, ಅದರಲ್ಲಿ ಮುಳುಗಿ ಹೋಗುತ್ತೇನೆ, ನೋಡಿ. ಹೀಗಾಗಿ ನೀವು ಬಂದದ್ದೇ ನನಗೆ ಗೊತ್ತಾಗಲಿಲ್ಲ."

"ಓಹೋ! ಹೀಗೇನು? ಹಾಗಾದರೆ ಒಂದು ಭಾವಿಯನ್ನು ತೋಡುವ ಕೆಲಸವನ್ನು ನೀವೇಕೆ ಪ್ರಾರಂಭಿಸಬಾರದು?"

ಜರ್ಮನ್ ಕಥೆ

# ಯಾಕೊ ಕಾಣೆ

● ಫ್ರೈಡ್ ಹಾನ್

ಅನಿತಾ ಫೋಟೋವನ್ನು ನೋಡಿಯೇ ನೋಡಿದಳು; ಮನದಣಿಯೆ ನೋಡಿದಳು. ನೋಡಿದ ಹಾಗೆಲ್ಲ ಅವಳ ಮುಖ ಪ್ರಫುಲ್ಲಿತವಾಗುತ್ತಾ ಹೋಯಿತು. ಅದು ಒಬ್ಬ ಯುವಕನ ಫೋಟೋ. ಸುಂದರವಾದ ಮುಖ, ಚೂಪಾದ ಮೂಗು. ಗ್ರೀಕ್ ಶಿಲ್ಪಗಳಲ್ಲಿ ಕಂಡುಬರುವಂತಹ ಕಟ್ಟುಮಸ್ತಾದ ಶರೀರ, ವಿಶಾಲವಾದ ಹಣೆ. ಆ ಯುವಕ ಸಂವೇದನಶೀಲನಾಗಿದ್ದಾನೆಂಬುದನ್ನು ಫೋಟೋ ನೋಡಿಯೆ ಅರಿಯಬಹುದಾಗಿತ್ತು. ಸಂಗಾತಿಗಾಗಿ ಹಾತೊರೆಯುವ ಆ ನೀಲಿ ಕಣ್ಣುಗಳಲ್ಲಿ ಎಂಥಾ ತೃಷೆ!

ಅನಿತಾ. ಛೆ, ಭಾಗ್ಯವೆಂದರೆ ಇದಕ್ಕೇ ಅನ್ನಬೇಕು ಎಂದು ತನ್ನ ಬೆನ್ನು ತಾನೆ ಚಪ್ಪರಿಸಿಕೊಂಡಳು. ಬಹು ಆಳವಾಗಿ ವಿಚಾರಿಸಿದ ನಂತರವೇ ಆಕೆ ತನ್ನಲ್ಲಿದ್ದ ಧೈರ್ಯವನ್ನೆಲ್ಲಾ ಒಟ್ಟುಗೂಡಿಸಿ 'ವಧು ಬೇಕು' ಎಂದು ಪೇಪರಿನಲ್ಲಿ ಬಂದ ಜಾಹೀರಾತಿಗೆ ಉತ್ತರ ಕಳಿಸಿದ್ದಳು. ಇದ್ದರಿಂದಲೇ ವಿವಾಹೇಚ್ಛುವಾದ ಆ ವಿಧುರ ಆಕೆಯ ಹಾಗೆಯೇ ತಾನೂ ಫೋಟೋ ಕಳಿಸಿ ಕೊಟ್ಟಿದ್ದ.

ಚಿತ್ರ ನೋಡುತ್ತಿದ್ದ ಹಾಗೆ, ಆತನ ಚಿತ್ರ ತನ್ನನ್ನು ಆಕರ್ಷಿಸಿದಂತೆಯೆ ತನ್ನ ಚಿತ್ರವೂ ಆತನನ್ನು ಆಕರ್ಷಿಸಿರಬಹುದು ಎಂಬ ಭಾವನೆ ಅನಿತಾಳಿಗೆ ಬಂತು. ಆದರೆ ಆ ಫೋಟೋ ಎಷ್ಟೋ ವರ್ಷಗಳ ಹಿಂದೆ ತೆಗೆದದ್ದಲ್ಲ! ಹಿಂದೆ ಇದ್ದ ಲಾವಣ್ಯ ಇಂದಿಗೂ ಉಳಿದಿದ್ದೀತೆ? ರೂಪ–ಲಾವಣ್ಯಗಳ ಮೇಲೆ ಕಾಲ ಪ್ರಹಾರ ಮಾಡದೆ ಬಿಟ್ಟಿದ್ದಾನೆಯೆ ಎಂದು ಒಂದು ಕ್ಷಣ ಚಿಂತಿತನಾಗಿ ಕನ್ನಡಿಯನ್ನೊಮ್ಮೆ ನೋಡಿಕೊಂಡಾಗ ತನ್ನ ಚಿಂತೆ ತಳ ಬುಡ ಇಲ್ಲದ್ದು ಎಂದು ಅವಳಿಗೆ ಖಾತ್ರಿಯಾಗಿಹೋಯಿತು.

ಅನಿತಾ ಹದಿನೇಳಕ್ಕೇ ಮದುವೆಯಾಗಿದ್ದಳು. ಮದುವೆಯಾಗಿ ಒಂದು ವರ್ಷ ಕಳೆಯುವಷ್ಟರಲ್ಲಿ ತಾಯಿಯೂ ಆಗಿದ್ದಳು. ವಿವಾಹದ ಆರನೆ ವರ್ಷವನ್ನು ಸಂಭ್ರಮದಿಂದ ಆಚರಿಸಬೇಕೆನ್ನುವಷ್ಟರಲ್ಲಿ ವೈಧವ್ಯ ಬಂತು. ಅವಳು ವಿಧವೆಯಾಗಿ ಎಷ್ಟೆಲ್ಲಾ ವರ್ಷಗಳು ಕಳೆದುಹೋಗಿದ್ದವು! ಅವಳಿಗಾಗಲೆ ಮೂವತ್ತೇಳರಷ್ಟು ವಯಸ್ಸಾಗಿತ್ತು. ಇಂಥಾ ವಯಸ್ಸಿನಲ್ಲೂ ವೈಧವ್ಯ. ಅವಳಿಗೆ ದೊರೆಯಬಹುದಾದ ಸುಖಗಳಿಗೆಲ್ಲಾ ಕಲ್ಲುಹಾಕಬಹುದೇ? ಹಾಗೆ ನೋಡಿದರೆ ವಾಸ್ತವಿಕ ಪ್ರಪಂಚದಲ್ಲಿ ಸತ್ಯವಾಗಬಹುದಾದಂಥ ಕನಸುಗಳನ್ನು ಕಾಣುವಷ್ಟು ಸಾಮರ್ಥ್ಯ ಕೂಡ ಅವಳಲ್ಲಿ ಉಳಿದಿರಲಿಲ್ಲ.

ಯುದ್ಧದಿಂದಾಗಿ ತಾನು ವಿಧವೆಯಾಗಬೇಕಾಗಿ ಬಂತೆಂಬ ನೆನಪು ಸಹ ಅನಿತಾಳಿಗೆ ಇಪ್ಪತ್ತೈದಕ್ಕೆ ಮಾಸಿಹೋಗಿತ್ತು. ಈಗಂತೂ ಅವಳ ಮಗಳು ಸಹ ಹದಿನಾರರ ಗಡಿ ದಾಟಿದ್ದಳು. ಹೆಣ್ಣಾಗಿ ಹುಟ್ಟಿ ಜೀವನದಲ್ಲಿ ಏನು ಸಾಧಿಸಬೇಕೆಂಬುದು ಅವಳಿಗೆ ತಿಳಿದುಹೋಗಿತ್ತು. ಯಾವಾಗಲೂ ತಾಯಿಯ ನೆರವು ಬೇಕೆನ್ನುವುದಕ್ಕೆ ಅವಳೀಗ ಮಗುವಾಗಿರಲಿಲ್ಲವಲ್ಲ. ಇಂಥಾದ್ದರಲ್ಲಿ ತಾನು ಡಾಕ್ಟರ್ ವರ್ನರನನ್ನು ಮದುವೆಯಾಗಿ ಹಾಯಾಗಿ ಜೀವಿಸಿದರೆ ಅವಳಿಗೇನು ನಷ್ಟ? ಎಂಬ ವಿಚಾರ ಅನಿತಾಳಿಗೆ ಬಂತು. ಈ ವಿಚಾರದಿಂದಲೆ ಧೈರ್ಯ ತಂದುಕೊಂಡು ಆಕೆ ಪತ್ರಿಕೆಯಲ್ಲಿನ ಜಾಹಿರಾತಿಗೆ ಉತ್ತರ ಕಳಿಸಿದ್ದು. ಪತ್ರಿಕೆಗಳಲ್ಲಿ 'ವಧು ಬೇಕು' ಎಂಬ ಶೀರ್ಷಿಕೆಯ ಅಡಿಯಲ್ಲಿ ಪ್ರಕಟವಾಗುವ ಜಾಹಿರಾತುಗಳನ್ನು ಅನಿತಾ ಅನೇಕ ವರ್ಷಗಳಿಂದ ಓದುತ್ತ ಬಂದಿದ್ದರೂ ಆ ಬಗ್ಗೆ ಆಳವಾಗಿ ಯೋಚಿಸಿರಲಿಲ್ಲ. ಒಂದು ಜಾಹಿರಾತಿಗೆ ಉತ್ತರವಾಗಿ ಪತ್ರವನ್ನೂ ಫೋಟೋವನ್ನೂ ಅನಿತಾ ಹಾಗೆಯೆ ಕಳಿಸಿದಾಗ ಡಾಕ್ಟರ್ ವರ್ನರನು ಅದಕ್ಕುತ್ತರವಾಗಿ ತನ್ನ ಫೋಟೋ ಕಳಿಸಿದ್ದ. ಆ ಫೋಟೋ ನೋಡಿದ ಕೂಡಲೇ ಅನಿತಾಳಿಗೆ, ಈ ಸಂಬಂಧ ಕುದುರುವುದು ತಮ್ಮ ದೈವದಲ್ಲೆ ಬರೆದಿದೆ ಎನ್ನುವ ಮಟ್ಟಿಗೆ ವಿಶ್ವಾಸ ಬಂದುಬಿಟ್ಟಿತ್ತು.

ಡಾ. ವರ್ನರ್ ಫೋಟೋದೊಟ್ಟಿಗೆ ಒಂದು ಪತ್ರವನ್ನು ಇಟ್ಟಿದ್ದ. ಅದರಲ್ಲಿ ತನ್ನನ್ನು ಆಕೆ ಭೇಟಿಯಾಗಬೇಕಾದ ವೇಳೆಯನ್ನೂ ಸ್ಥಳವನ್ನೂ ತಿಳಿಸಿದ್ದ. ತನ್ನ ತಾಯಿಯೂ ಉಳಿದ ಹೆಂಗಸರ



ಹಾಗೆ ಸಾಧಾರಣ ವರ್ಜಿಯ ಗಂಡಸರೊಂದಿಗೆ ಪ್ರಾರಂಭಿಸಿದ ಸಂಗತಿ ತನ್ನ ಮಗಳು ಲಿಲ್ಯಾನಳಿಗೆ ಗೊತ್ತಾಗಿಬಿಟ್ಟರೆ ಹೇಗೆ? ಎಂದು ಅನಿತಾ ಚಿಂತಿಸತೊಡಗಿದಳು.

ತಾಯಿ ಮಗಳಾದರೂ ಅವರಿಬ್ಬರೂ ಅನ್ಯೋನ್ಯವಾಗಿ ಗೆಳತಿಯರ ಹಾಗೆ ಜೀವಿಸುತ್ತಿದ್ದರು. ಆದರೂ ಬಹಳ ಯೋಚಿಸಿದ ಮೇಲೆ, ಡಾ. ವರ್ನರನ ವಿಷಯವನ್ನು ಗೌಪ್ಯವಾಗಿಡುವುದೇ ಲೇಸು ಎಂಬ ನಿರ್ಧಾರಕ್ಕೆ ಅನಿತಾ ಬಂದಳು. ಮೇಲಾಗಿ, ನಾವಿಬ್ಬರು ಭೇಟಿಯಾದರೇನಂತೆ? ಅಷ್ಟು ಮಾತ್ರದಿಂದ ನಿಶ್ಚಿತಾರ್ಥವೇ ಆದಂತೆಯೇ? ನನ್ನ ಹಳೆಯ ಫೋಟೋ ನೋಡಿ ಭ್ರಮನಿರಸನಗೊಂಡು ಡಾ. ವರ್ನರ್ ಹಿಂದೆ ಸರಿಯುವ ಸಂಭವವೂ ಇಲ್ಲದಿಲ್ಲ. ಮತ್ತು ನಾನಾದರೂ ಕೊನೆ ಗಳಿಗೆಯಲ್ಲಿ ಹಿಂದೆ ಸರಿಯಬಹುದು. ಯಾರಿಗೆ ಗೊತ್ತು? ಆದ್ದರಿಂದ ಸಂಬಂಧ ಕುದುರುವ ವರೆಗೆ ಲಿಲ್ಯಾನಳಿಗೆ ಈ ಸುದ್ದಿ ಹೇಳುವುದೇ ಬೇಡ ಎಂದಾಕೆ ಅಂದುಕೊಂಡಳು.

ವರ್ನರ್ ತನ್ನ ಪತ್ರದಲ್ಲಿ ಅನಿತಾಳನ್ನು ಕುಮಾರಿ ಅನಿತಾ ಎಂದು ಸಂಬೋಧಿಸಿದ್ದ. ನಾನು ವಿಧವೆಯಷ್ಟೆ ಅಲ್ಲ, ಓರ್ವ ಯುವತಿಯ ತಾಯಿಯೂ ಆಗಿದ್ದೇನೆಂಬುದು ಆತನಿಗೆ ಗೊತ್ತಾದರೆ ನನ್ನ ಬಗ್ಗೆ ಆತ ಏನೆಂದುಕೊಳ್ಳಲಿಕ್ಕಿಲ್ಲ? ನನ್ನನ್ನೂ ನನ್ನ ಫೋಟೋವನ್ನೂ ತುಲನೆ ಮಾಡಿದ ಮೇಲೂ ಅವನು ನನ್ನನ್ನು ಒಪ್ಪಬಹುದೆ? ಡಾಕ್ಟರರು, ವಕೀಲರು, ಇಂಜಿನಿಯರರಂಥವರನ್ನು ಬುಟ್ಟಿಗೆ ಹಾಕಿಕೊಳ್ಳುವ ಬೇಡಿ ಹೆಂಗಸು ನಾನು ಎಂದವನು ಅಂದುಕೊಳ್ಳಲಿಕ್ಕಿಲ್ಲವಷ್ಟೆ? ಮತ್ತೆ ನನ್ನನ್ನು ನೋಡಿ ಅವನು ನಿರಾಶನೂ ಆಗಲಿಲ್ಲವಷ್ಟೆ ಎಂದು ಅಂದುಕೊಂಡಳು, ಅನಿತಾ.

ಗಡಿಯಾರವನ್ನಾಕೆ ನೋಡಿಕೊಂಡಳು. ಕಾಲ ಎಷ್ಟು ನಿಧಾನವಾಗಿ ಸರಿಯುತ್ತಿದೆಯಲ್ಲಾ [illegible] ತಾಸಿಗೆ – [illegible] [illegible] – [illegible]. ವರ್ನರ್ ಗೊತ್ತುಪಡಿಸಿದ್ದ ಸ್ಥಳಕ್ಕೆ ಹೋಗಲು ಇನ್ನು ಒಂದು ತಾಸನ್ನು–ಅರವತ್ತು ನಿಮಿಷಗಳಷ್ಟು ದೀರ್ಘ(!) ಕಾಲವನ್ನು–ಕಳೆಯಬೇಕಿತ್ತು. ಮಧ್ಯಾಹ್ನದ ಊಟ ತೀರಿಸಿಕೊಂಡು ಲಿಲ್ಯಾನ್ ತನ್ನ ಗೆಳತಿಯ ಸಂಗಡ ಹೊರಗೆ ಹೋದದ್ದು ಒಳ್ಳೆಯದೇ ಆಯಿತು. ಆಕೆ ಇಲ್ಲಿ ಇದ್ದಿದ್ದರೆ ಹೊರಗೆ ಹೋಗಲು ಧೈರ್ಯ ತಂದುಕೊಳ್ಳಲು ತನಗಾಗುತ್ತಿತ್ತೆ? ಅಲ್ಲದೆ ಆಸೆ ಆಕಾಂಕ್ಷೆಗಳ ಭಾವನೆಗಳು ಮೂಡಿದ ಮೇಲೆ ಕಣ್ಣುಮುಚ್ಚಾಲೆಯಾಡುವುದು ಆ ಹುಡುಗಿಗೆ ಗೊತ್ತಾಗದೆ ಇರುತ್ತಿತ್ತೆ? ನಲವತ್ತು ವರ್ಷದ ವಿಧವೆ ಹದಿನಾರರ ತರುಣಿಯ ಹಾಗೆ ಡ್ರೆಸ್ ಮಾಡಿಕೊಂಡು... ಎಂದು ನಾಲ್ಕು ಜನ ಕುಚೇಷ್ಟೆ ಮಾಡಬಹುದು; ಆದರೆ ಅವರು ಅನಿತಾಳ ಹೃದಯವನ್ನೊಮ್ಮೆ ಹೊಕ್ಕು ನೋಡಿದರೆ...ಆಕೆ ದೀರ್ಘಕಾಲದ ನಂತರ ಪುರುಷನೊಬ್ಬ ಗೊತ್ತುಪಡಿಸಿದ ವೇಳೆಗೆ ಆತ ಹೇಳಿದ ಸ್ಥಳದತ್ತ ಹೊರಟಿದ್ದಳು. ಅಷ್ಟೇ ಅಲ್ಲ, ಆತ ಅನಿತಾಳನ್ನು ತನ್ನ ಪತ್ನಿಯನ್ನಾಗಿ ಸ್ವೀಕರಿಸುವವನಿದ್ದ. (ಅನಿತಾಳಿಗೆ ಸಹ ಆತ ಮನಸ್ಸಿಗೆ ಬಂದಿದ್ದಾನೆಂಬುದು ಯಾರಿಗೂ ತಿಳಿದಿರಲಿಕ್ಕೆ ಸಾಧ್ಯವಿಲ್ಲ–ತಿಳಿಯುವುದೂ ಸಾಧ್ಯವಿಲ್ಲ ಎಂಬ ಭಾವನೆ ಅವಳಿಗೆ ಬಂತು.)

ಅನಿತಾ ಗಡಿಯಾರದತ್ತ ಕಣ್ಣು ಹಾಯಿಸಿದ್ದೇ ತಡ, ಅವಳಲ್ಲಿದ್ದ ಅನ್ಯಮನಸ್ಕತೆಯೆಲ್ಲಾ ಕ್ಷಣಮಾತ್ರದಲ್ಲಿ ಮಾಯವಾಯಿತು. ಸುಂದರ ಕನಸು ಕಣ್ಣು ಮುಂದೆಯೆ ಕಟ್ಟಿದಂತಾಯಿತು. ಆಗವಳು ಭಾವಪರವಶಳಾಗಿ ಏನೆಲ್ಲ ಯೋಚಿಸತೊಡಗಿದಳು!

ಸರಿಯಾಗಿ ಆರು ಗಂಟೆಗೆ ಕಲ್ಪಿಯಾಕ್ಕೆ ನಿಕಟವಾಗಿರುವ ಅಂಗಡಿಯ ಬಳಿ ಅತ್ಯಾತುರತೆಯಿಂದ ನಿನಗಾಗಿ ದಾರಿ ಕಾಯುತ್ತಿರುತ್ತೇನೆ ಎಂದು ಡಾ. ವರ್ನರ್ ಅನಿತಾಳಿಗೆ ಪತ್ರ ಬರೆದಿದ್ದ.

ಅವಳು ಸರಿಯಾಗಿ ಆರು ಗಂಟೆಗೆ ಆತ ಹೇಳಿದಲ್ಲಿ ಹೋಗಿ ರಸ್ತೆಯ ಮೂಲೆಯಲ್ಲಿ ನಿಂತುಕೊಂಡಳು. ವರ್ನರನಿಗೆ ಕಾಣದ ಹಾಗೆ ನಿಂತು

ಅವನನ್ನು ಮನಸಾರೆ ನೋಡಬೇಕೆಂಬುದು ಅವಳ ಮನೀಷೆಯಾಗಿತ್ತು.

ಡಾ. ವರ್ನರ್ ಅಂಗಡಿಯ ವರಾಂಡದಲ್ಲಿ ಒಂದೇ ಸಮನೆ ಇತ್ತಿಂದತ್ತ ಅತ್ತಿಂದಿತ್ತ ತಿರುಗಾಡುತ್ತಿದ್ದ. ಯಾವಳಾದರೂ ಹತ್ತಿರದಿಂದ ಸುಳಿದು ಹೋದಾಗ ಸರಕ್ಕನೆ ನಿಂತು ದಿಟ್ಟಿಸಿ ನೋಡುತ್ತಿದ್ದ. ವೇಳೆ ಕಳೆದ ಹಾಗೆ ಆತನ ಅನ್ಯಮನಸ್ಕತೆಯೂ ಹೆಚ್ಚುತ್ತಾ ನಡೆಯಿತು.

ಡಾ. ವರ್ನರ್ ಫೋಟೋದಲ್ಲಿ ಕಂಡು ಬರುವುದಕ್ಕಿಂತ ಹೆಚ್ಚು ತರುಣನಾಗಿದ್ದ; ಹೆಚ್ಚು ಸುಂದರನೂ ಆಗಿದ್ದ. ಅವನ ನಡಿಗೆಯಲ್ಲೇ ಒಂದು ಬಗೆಯ ಶಕ್ತಿಯಿತ್ತು, ಚೈತನ್ಯ ತುಂಬಿ ತುಳುಕುತ್ತಿತ್ತು. ಇದನ್ನು ನೋಡಿ ಅನಿತಾಳಿಗೆ ತುಂಬಾ ಖುಷಿಯಾಯಿತು. ಹೀಗೆಯೆ ಅವನನ್ನು ನೋಡುತ್ತಾ ವೇಳೆಯನ್ನು ಹಾಳು ಮಾಡುವುದು ಒಳ್ಳೆಯದಲ್ಲ, ಅವನನ್ನು ಭೇಟಿಯಾಗುವುದೇ ಸರಿ ಎಂದು ಅವಳು ಅಂದುಕೊಂಡಳು.

ಬೀದಿಯ ಮೂಲೆ ಬಿಟ್ಟು ಹೊರಗೆ ಬರುವುದೇ ತಡ, ಅನಿತಾಳಿಗೆ ಲಲ್ಯಾನ್ ಬರುತ್ತಿರುವುದು ಕಾಣಿಸಿತು. ಆಕೆ ಲಗುಬಗೆಯಿಂದ ಎದುರಿನಲ್ಲಿ ಬರುತ್ತಾ ಅಂಗಡಿಯೊಂದರ ವರಾಂಡದಲ್ಲಿ ಹೊಕ್ಕಳು. ಅವಳನ್ನು ನೋಡಿದ್ದೇ ತಡ, ಅನಿತಾ ಸರಸರನೆ ಮೊದಲಿನ ಸ್ಥಳಕ್ಕೆ ಹೋಗಿ, ಅಡಗಿ ನಿಂತುಕೊಂಡಳು. ಅಲ್ಲಿಂದ ಅನಿತಾಳಿಗೆ ವರ್ನರನಷ್ಟೆ ಅಲ್ಲ, ಲಲ್ಯಾನಳೂ ಚೆನ್ನಾಗಿ ಕಾಣಿಸುತ್ತಿದ್ದಳು. ತನ್ನನ್ನು ಕಾಣದೆ ಲಲ್ಯಾನ್ ಹಾಗೆಯೆ ಹೋದರೆ ಒಳ್ಳೆಯದು ಇಲ್ಲವಾದರೆ ಪ್ರಳಯವಾಗುವುದು ಖಂಡಿತ ಎಂದು ಅನಿತಾ ಹೆದರಿಕೊಂಡಳು.

ಆದರೆ ಲಲ್ಯಾನ್ ಮನೆಗೆ ಹೋಗುವ ಬದಲು ಫ್ಯಾಶನೆಬಲ್ ವಸ್ತುಗಳನ್ನು ಮಾರುವ ಅಂಗಡಿಗಳ ಮುಂದೆ ನಿಂತು ಶೋಕೇಸುಗಳಲ್ಲಿಟ್ಟ ಅಲಂಕರಣದ ವಸ್ತುಗಳನ್ನು ನೋಡತೊಡಗಿದಳು. ಅಷ್ಟರಲ್ಲಿ ಆ ಎತ್ತರದ ಮನುಷ್ಯ ಸರಸರನೆ ಅವಳ ಹತ್ತಿರ ಬಂದ. ಬಂದವನೇ ಹ್ಯಾಟನ್ನೆತ್ತಿ ಬಗ್ಗಿ ನಮಸ್ಕರಿಸಿ ಮಾತಾಡತೊಡಗಿದ.

ಅನಿತಾ ದೂರ ನಿಂತಿದ್ದರಿಂದ ಅವರ ಮಾತು ಕೇಳಿಸುತ್ತಿದ್ದಿಲ್ಲ. ಆದರೆ ಲಲ್ಯಾನಳ ಮುಖ ಸ್ಪಷ್ಟವಾಗಿ ಕಾಣುತ್ತಿದ್ದುದರಿಂದ ಅವನ ಮಾತು ಕೇಳಿ ಅವಳೆಷ್ಟು ನಿರ್ವಿಣ್ಣಳಾಗಿದ್ದಾಳೆಂಬುದು ಸ್ಪಷ್ಟವಾಗಿ ಗೋಚರಿಸುತ್ತಿತ್ತು. ಆತ ಒಂದೇ ಸಮನೆ ಮಾತಾಡುತ್ತಿದ್ದ. ಅವನು ವ್ಯಾಕುಲನೂ ಅಧೀರನೂ ಆದಂತೆ ಕಂಡುಬರುತ್ತಿತ್ತು. ಮೊದಮೊದಲು ಲಲ್ಯಾನ್ ಸುಮ್ಮನೆ ನಿಂತು ಅವನ ಮಾತುಗಳನ್ನು ಕೇಳುತ್ತಿದ್ದರೂ ಕ್ರಮೇಣ ಅವಳೂ ಅವನೊಡನೆ ಮಾತಾಡಹತ್ತಿದ್ದಳು. ಅವಳ ಚೆಹರೆಯೂ ಸಾಕಷ್ಟು ಬದಲಾಗಿತ್ತು.

ಅಪರಿಚಿತ ವ್ಯಕ್ತಿಯೊಬ್ಬ ಆಕಸ್ಮಾತ್ತಾಗಿ ಅವಳನ್ನು ಮಾತಾಡಿಸಿದ್ದರಿಂದ ಅವಳಿಗೆ ಸಾಕಷ್ಟು ಸಂಕೋಚವಾಗಿತ್ತು, ಆಶ್ಚರ್ಯವೂ ಆಗಿತ್ತು. ಆದರೆ ಈಗ ಅವೆರಡೂ ಮಟ್ಟಮಾಯವಾಗಿ ಲಲ್ಯಾನ್ ನಗುನಗುತ್ತಾ ಆತನೊಡನೆ ಮಾತಾಡುತ್ತಿದ್ದಳು. ಸುತ್ತಲಿನ ಪ್ರಪಂಚದ ಪರಿವೆಯಿಲ್ಲದೆ ಅವರಿಬ್ಬರೂ ಮಾತಾಡುತ್ತಿದ್ದುದನ್ನು ಅನಿತಾ ದೂರದಿಂದ ನೋಡುತ್ತಿದ್ದಳು. ಕೊನೆಗೊಮ್ಮೆ ಇಬ್ಬರೂ ದೂರ ದೂರ ಹೊರಟು ಹೋದರು.

ಅನಿತಾಳಿಗೆ ಎಲ್ಲವೂ ಅರ್ಥವಾಗಿತ್ತು. ಅವಳು ಡಾಕ್ಟರ್ ವರ್ನರನಿಗಾಗಿ ದಾರಿ ಕಾಯದೆ ಮನೆಯ ಕಡೆ ಹೊರಟುಹೋದಳು.

ಆ ದಿನ ರಾತ್ರಿ ಲಲ್ಯಾನ್ ಮನೆಗೆ ಬಂದಾಗ ಬಹಳ ಹೊತ್ತಾಗಿತ್ತು. ಅವಳು ಅಸ್ತವ್ಯಸ್ತಗೊಂಡಿದ್ದಳು: ಮನಶ್ಶಾಂತಿ ಕದಡಿದಂತಿತ್ತು. ವಾಡಿಕೆಯಂತೆ ಅವರಿಬ್ಬರೂ ಕೂಡಿ ಊಟ ಮಾಡಿದರು. ಆದರೆ ಅಂದು ಅವರ ನಡುವೆ ಮೌನದ ಅಭೇದ್ಯ ಗೋಡೆ ಅಡ್ಡ ನಿಂತಿತ್ತು. ಊಟ ಮುಗಿದ ನಂತರವೂ ಎಷ್ಟೋ ಹೊತ್ತಿನವರೆಗೆ ಅವರಿಬ್ಬರೂ ಮೌನವಾಗಿಯೇ ಇದ್ದರು.

ಲಲ್ಯಾನಳಿಗೆ ಈ ಮೌನವನ್ನು ಸಹಿಸಲಾಗ-

ಬಿಲ್ಲ. ಆಕೆ ತಾನು ಕುಳಿತಲ್ಲಿಂದ ಎದ್ದು ತಾಯಿಯ ಬಳಿ ಬಂದು ಕುಳಿತು ಮಾತಿಗಾರಂಭಿಸಿದಳು. ಅವಳ ಕಣ್ಣುಗಳು ಮಿಂಚುತ್ತಿದ್ದವು. ಮಾತಾಡುತ್ತಾ ಆಕೆ ಹೇಳಿದಳು: "ಮಮ್ಮಿ, ನಿನಗೆ ನಾನು ಒಂದು ಸಂಗತಿಯನ್ನು ಹೇಳಿಬಿಡುತ್ತೇನೆ. ಈ ದಿನ ನಾನು ಕಲ್ಪಿಯಾದ ಅಂಗಡಿಗಳ ವರಾಂಡದಲ್ಲಿ ತಿರುಗುತ್ತಿರುವಾಗ ಯಾವನೋ ಒಬ್ಬ ನನ್ನೊಡನೆ ಮಾತಿಗಾರಂಭಿಸಿದ. ಅವನಿಗೆ ನನ್ನ ಹೆಸರು ಹೇಗೆ ಗೊತ್ತಾಯಿತೋ ಏನೋ. ಆತ ನನ್ನ ಬಗ್ಗೆ ಸಾಕಷ್ಟು ವಿವರಗಳನ್ನು ತಿಳಿದುಕೊಂಡಿದ್ದನ್ನು ನೋಡಿ ನನಗೆ ತುಂಬಾ ಆಶ್ಚರ್ಯವಾಯಿತು. ಸ್ವಾಭಾವಿಕವಾಗಿ ಅವನ ಮಾತುಗಳನ್ನು ಕೇಳುವ ಮನಸ್ಸಾಯಿತು. ಅವನು ಅತ್ಯಂತ ಪ್ರಿಯಭಾಷಿಯೂ ಸುಂದರನೂ ಆಗಿದ್ದ.

"ಅವನ ಮಾತುಗಳನ್ನಾಲಿಸುವಲ್ಲಿ ನನಗೆ ಆಸಕ್ತಿಯಿರುವುದನ್ನು ಆತ ಬೇಗನೇ ತಿಳಿದುಕೊಂಡ. ಅನಂತರ ನಾವಿಬ್ಬರೂ ಬಹಳ ಹೊತ್ತಿನ ವರೆಗೆ ಆ ಮಾತು ಈ ಮಾತು ಆಡುತ್ತಾ ಅಲ್ಲಿ ಇಲ್ಲಿ ತಿರುಗಾಡಿದೆವು. ನಮ್ಮಿಬ್ಬರಿಗೂ ಪರಿಚಯವಾಗಿ ಬಹಳ ಕಾಲವಾದಂತೆ ನಮಗನಿಸಿತು. ಅಗಲುವಾಗ, ಆತ, ಇನ್ನೊಮ್ಮೆ ಭೇಟಿಯಾಗು; ನಾವಿಬ್ಬರೂ ಮತ್ತೆ ಮನಬಿಚ್ಚಿ ಮಾತಾಡೋಣ, ಎಂದು ಹೇಳಿದ. ಇಲ್ಲ ಎಂದು ಹೇಳಲು ನನಗಾಗಲಿಲ್ಲ."

ತಾಯಿ ಸುಮ್ಮನಿದ್ದುದನ್ನು ನೋಡಿ ಅನಿತಾ ಅವಳತ್ತ ಕಣ್ಣು ಹಾಯಿಸಿದಳು. ಆಕೆಯ ಹವರೆ ಬಿಮ್ಮನೇ ಬಿಗಿದಾಗಿದ್ದನ್ನು ನೋಡಿ ಲಿಲ್ಯಾನ್ ವ್ಯಾಕುಲಳಾಗಿ, "ಮಮ್ಮಿ, ಏಕೆ ಸುಮ್ಮನಿದ್ದೀ? ನಾನೇನಾದರೂ ತಪ್ಪು ಮಾಡಿದೆನೆ?" ಎಂದು ಕೇಳಿದಳು.

ಅನಿತಾ ಮುಗುಳ್ನಕ್ಕಳು. ಲಿಲ್ಯಾನ್ ತನ್ನ ಮಾತುಗಳಲ್ಲಿ ಬಹಳ ಮಗ್ನಳಾಗಿದ್ದುದರಿಂದ ಅವಳಿಗೆ ತಾಯಿಯ ನಗುವಿನಲ್ಲಡಗಿದ ವ್ಯಥೆಯನ್ನು ಗುರುತಿಸಲಾಗಲಿಲ್ಲ.

"ಇಲ್ಲ, ಇಲ್ಲ, ಒಂದು ವೇಳೆ ನಿಜವಾಗಿಯೂ ಆತ ಒಳ್ಳೆಯವನೇ ಆಗಿದ್ದರೆ, ಮತ್ತು ಅವನು ನಿನ್ನ ಮನಸ್ಸಿಗೆ ಬಂದಿದ್ದರೆ ಸಂಬಂಧ ಕುದುರಲು ನನ್ನದೇನೂ ಆಕ್ಷೇಪಣೆಯಿಲ್ಲ. ನೀನು ಅವನನ್ನು ಬೇರೆಲ್ಲಿಯಾದರೂ ಭೇಟಿಯಾಗುವ ಬದಲು ಒಮ್ಮೆ ಊಟಕ್ಕೆ ಆಮಂತ್ರಿಸಿ ಇಲ್ಲಿಯೇ ಭೇಟಿಯಾಗುವುದು ಒಳ್ಳೆಯದು ಎಂದು ನನಗನಿಸುತ್ತದೆ. ನನಗೂ ಅವನ ಗುರುತು ಮಾಡಿಕೊಡು. ನಿನ್ನ ಮನಸ್ಸಿಗೆ ಬಂದಂತೆಯೇ ಆತನನ್ನ ಮನಸ್ಸಿಗೂ ಬರುತ್ತಾನೆಂಬ ವಿಶ್ವಾಸ ನನಗಿದೆ."

ತಾಯಿ ತನ್ನ ಬಗ್ಗೆ ತೋರಿಸಿದ ಸ್ನೇಹ, ಸಹಾನುಭೂತಿಗಳನ್ನು ಕಂಡು ಆ ಅನುಭವಹೀನ ಹುಡುಗಿಯ ಸಾಹಸ ಇನ್ನಷ್ಟು ಬಲವಾಯಿತು. ಆನಂದದಿಂದ ಆತ್ಮವಿಸ್ಮೃತಳಾಗಿ ಆಕೆ ತಾಯಿಯನ್ನು ಅಪ್ಪಿಕೊಂಡು, "ಎಲ್ಲಾ ಸಂಗತಿಗಳನ್ನು ನೀನೆಷ್ಟು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತೀ ಮಮ್ಮಿ, ನನ್ನ ಹೃದಯದ ಮಾತನ್ನು ಮುಚ್ಚಿಡುವ ಪ್ರಸಂಗವೇ ಬರಲಿಲ್ಲ ನೋಡು," ಎಂದು ಹೇಳಿದಳು.

"ನಾವಿಬ್ಬರೂ ತಾಯಿ-ಮಕ್ಕಳಷ್ಟೇ ಅಲ್ಲ, ಗೆಳತಿಯರೂ ಆಗಿದ್ದೇವೆ. ಅವಕ್ಕೂ ಮಹತ್ವದ್ದೆಂದರೆ ಹೆಂಗಸರಾಗಿರುವುದರಿಂದ ಪರಸ್ಪರರನ್ನು ಸರಿಯಾಗಿ ಅರ್ಥಮಾಡಿಕೊಳ್ಳುತ್ತೇವೆ.

ಕ್ಷಣ ಕಾಲ ಪ್ರಗಾಢವಾದ ಶಾಂತಿ ಕೋಣೆಯನ್ನೆಲ್ಲಾ ಆವರಿಸಿತು. ಅನಿತಾ ಲಿಲ್ಯಾನಳ ತಲೆಯನ್ನು ಸವರುತ್ತಾ, "ಪರಸ್ಪರರಿಂದ ಏನನ್ನೂ ಬಚ್ಚಿಡುವುದು ಸಾಧ್ಯವಿಲ್ಲದ ಮಾತು." ಎಂದು ಹೇಳಿದಳು.

ಮುಂದೇನೂ ಯಾವುದನ್ನೂ ರಹಸ್ಯವಾಗಿಡುವುದಿಲ್ಲ ಎಂದು ಅನಿತಾ ಹೇಳುವವಳೇ ಇದ್ದಳು. ಆದರೆ ಅದಾವ ಮಾಯೆಯಿಂದಲೋ ಏನೋ ನಾಲಿಗೆಯ ತುದಿಗೆ ಬಂದಿದ್ದನ್ನು ಹಾಗೆಯೇ ತಡೆಹಿಡಿದಳು. ತನ್ನ ದೌರ್ಬಲ್ಯ ಲಿಲ್ಯಾನಳಿಗೆ ಗೊತ್ತಾದರೆ ಹೇಗೆ? ಎಂಬ ಭಯ ಅವಳನ್ನು ತೊರೆಯಲಿಲ್ಲ. ✡

# [illegible] ಜೀವನ

ಹಬ್ಬ ದಿನಾಚರಣೆಗಳ ಔಚಿತ್ಯವನ್ನು ಹಿರಿಯರಿಗಿಂತ ಚೆನ್ನಾಗಿ ಕಿರಿಯರು ಅರ್ಥ ಮಾಡಿಕೊಳ್ಳುತ್ತಾರೆ ಎಂಬುದನ್ನು ನಮಗೆಲ್ಲ ತಿಳಿಸುಪಡಿಸಿದವ ನನ್ನ ಚಿಕ್ಕ ಮೊಮ್ಮಗ, ಗಿರಿಜಾ ಶಂಕರ್.

ಗೋಕುಲಾಷ್ಟಮಿ ದಿನ, ಮನೆಯಲ್ಲಿ ದೇವರ ಮೂರ್ತಿ ಶೃಂಗಾರ ಮಾಡಿ, ಹಣ್ಣು ಹಂಪಲು ನೈವೇದ್ಯ ಅರ್ಪಿಸಿ, ಮಕ್ಕಳನ್ನು ಉದ್ದೇಶಿಸಿ, "ನೀವೀಗ ಹಾಡತಕ್ಕದ್ದು" ಎಂದು ನನ್ನ ಸೊಸೆ ಸರಳಾ ಅಂದಾಗ, ಗಿರಿಜಾಶಂಕರ್ ಒಡನೆ ಮುಂದೆ ಬಂದು, "Happy birthday to you, happy birthday to you, happy birthday to you dear Krishna, happy birthday to you"—ಎಂದು ಮುದ್ದಾಗಿ ಹಾಡಿದ.

—ರಾಧಾ ರಾವ್

ನನ್ನ ಗೆಳೆಯನಾದ ರಾಜು, ಮೂರ್ತಿ ಮುಂಬಯಿಯಿಂದ ಬೆಂಗಳೂರಿಗೆ ರೈಲಿನಲ್ಲಿ ಪ್ರಯಾಣಮಾಡುತ್ತಿದ್ದಾಗ ನಡೆದ ಘಟನೆ ಇದು ಹುಬ್ಬಳ್ಳಿಯ ರೈಲು ನಿಲ್ದಾಣದಲ್ಲಿ ರೈಲು ನಿಂತಾಗ "ಚಾಯ್...ಬಿಸಿ ಬಿಸಿ ಚಾಯ್...ಚಾಯ್" ಎನ್ನುತ್ತಾ ಚಹಾ ಮಾರುವವನೊಬ್ಬ ಬಂದ. ರಾಜು ಅವನನ್ನು ನಿಲ್ಲಿಸಿ ಕೇಳಿದ.

"ಇಲ್ಲಿ ಕಾಫಿ ಸಿಗುತ್ತದೇನಯ್ಯ?"

"ಇಲ್ಲ ಸ್ವಾಮಿ."

"ಸರಿ. ಹಾಗಾದರೆ ಎರಡು ಕಪ್ ಚಾಯ್ ಕೊಡು."

ತೆಗೆದುಕೊಂಡು ಕುಡಿಯುತ್ತಿರುವಷ್ಟರಲ್ಲೇ ಹಿಂದಿನಿಂದ ಕೇಳಿಬಂತು:

"ಕಾಫಿ ಕಾಫಿ...ಗರಮ್ ಗರಮ್ ಕಾಫಿ"

ರಾಜು ಚಹಾ ಮಾರುವವನನ್ನು ಆಕ್ಷೇಪಿಸುವ ದನಿಯಲ್ಲಿ ಪ್ರಶ್ನಿಸಿದ:

"ಏನಯ್ಯ...ಕಾಫಿ ಸಿಗುಲ್ಲ ಅಂದೆ."

"ಏನ್ ಸ್ವಾಮಿ, ನಾನು ಹೇಳಿದುದನ್ನು ನಂಬ್ತೀರಲ್ಲ ತಾವು!"

ಅವನ ಉತ್ತರ ಕೇಳಿ ರಾಜು ಪೆಚ್ಚಾದ.

—ಉಷಾ ವೆಂಕಟೇಶ

ಸಾಂಗಲಿಯ ಸಮೀಪದ ಕಾರ್ಖಾನೆಯೊಂದರಲ್ಲಿ ನೌಕರಿಗೆ ಸೇರಿದ ಒಂದೆರಡು ತಿಂಗಳ ನಂತರದ ಒಂದು ಘಟನೆ. ಕೊಲ್ಹಾಪುರದಲ್ಲಿರುವ ನನ್ನ ಸಂಬಂಧಿಕರೊಬ್ಬರನ್ನು ಕಾಣುವ ಉದ್ದೇಶದಿಂದ ಕೊಲ್ಹಾಪುರಕ್ಕೆ ಹೋಗುವ ಸರಕಾರೀ ಬಸ್ಸಿಗಾಗಿ ಸಾಂಗಲಿಯ ಬಸ್ಸು ನಿಲ್ದಾಣದಲ್ಲಿ ಕಾಯುತ್ತಿದ್ದೆ. ಸಾಂಗಲಿಯ ನನ್ನ ಕನ್ನಡ ಮಿತ್ರರೊಬ್ಬರು ಅಲ್ಲಿ ಭೆಟ್ಟಿಯಾದರು. ನಮ್ಮ ಸಂಭಾಷಣೆಯು ಕನ್ನಡದಲ್ಲಿ ನಿರರ್ಗಳವಾಗಿ ಸಾಗಿತ್ತು.

"ಅಣ್ಣಾ, ಒಂದ್ಹತ್ತು ಪೈಸಾ ಕೊಡಿ." ಮರಾಠಿ ಧ್ವನಿ ಬಂದೆಡೆಗೆ ತಿರುಗಿ ನೋಡಿದೆ. ಒಬ್ಬ ಮುದಿ ಭಿಕ್ಷುಕ ಕೈಯೊಡ್ಡಿ ನಿಂತಿದ್ದ.

"ಹೋಗು, ಈಗೇನೂ ನಿನಗೆ ಸಿಗಲಾರದು", ಎಂದು ಗದರಿಸಿ ಮತ್ತೆ ಅವನತ್ತ ನೋಡದೆ ಮಾತಿನಲ್ಲಿ ತೊಡಗಿದೆ.

"ಸ್ವಾಮಿ ಮಹಾರಾಷ್ಟ್ರದವ್ರು ಕೈಯೆತ್ತಿ ಕೊಡೋದ್ರಲ್ಲಿ ಭಾಳಾ ಹಿಂದ. ನೀವು ಕಾನಡಿ ಮಾತಾಡೋರು ಏನಾದ್ರು ಕೊಡ್ತೀರಂತ ನನ್ಗೆ ಖಾತ್ರಿ ಅದೆ," ಅಂತ ತನ್ನ ಹರಕುಮುರುಕು ಕನ್ನಡದಲ್ಲಿ ಆ ಭಿಕ್ಷುಕ ಅಂಗಲಾಚಿದ. ಈ ಸಲ ಅವನ ಮಾತಿನಲ್ಲಿ ಅಡಗಿದ್ದ ಕನ್ನಡಿಗರ ಬಗೆಗಿರುವ ಅಭಿಮಾನವನ್ನು ಕಂಡು ಮೂಕನಾದೆ. ನನಗೆ ಅರಿವಿಲ್ಲದಂತೆಯೇ ನನ್ನ ಜೇಬಿನಿಂದ ಹತ್ತು ಪೈಸೆಯ ನಾಣ್ಯವೊಂದನ್ನು ಅವನ ಕೈಗಿತ್ತೆ.

—ಪ್ರಭಾಕರ ಅರಸಿನಮಕ್ಕಿ

ನನಗೂ ಪುಟ್ಟೂಗೂ ಸಲಿಗೆ ಬಹಳ. ನಾನವನಿಗೆ ದಿನಾಲು ಪುರಾಣ ಕಥೆಗಳನ್ನು ಹೇಳುತ್ತಿದ್ದೆ. ಅವನಿಗೆ ಅವುಗಳಲ್ಲಿ ವಿಶೇಷ ಆಸಕ್ತಿ, ನಂಬಿಕೆ. ಅಂದು ಮನೆ

ಯಲ್ಲಿ ಏನೋ ಅವಾಂತರ ನಡೆದಿತ್ತು. ಪುಟ್ಟೂ ತನ್ನಕ್ಕ ರಾಜಿಯ ಪೆನ್ಸಿಲ್ ಕಳವು ಮಾಡಿದ್ದಾನೆಂದು ವಿಷಯ ತಿಳಿಯಿತು. "ಇಲ್ಲಾ...ನಾನು ರಾಜಿಯ ಪೆನ್ಸಿಲ್ ಖಂಡಿತ ತಗೊಂಡಿಲ್ಲ," ಎಂದು ಪುಟ್ಟು ಎಂದರೆ ಅದಕ್ಕೆ ಪ್ರತಿಯಾಗಿ ರಾಜಿ, "ಇಲ್ಲಾ...ನನ್ನ ಪೆನ್ಸಿಲ್ ಸೀನೆ ತಗೊಂಡೀ," ಎಂದು ವಾದಿಸು ತ್ತಿದ್ದಳು. ಅವರನ್ನು ಎಷ್ಟು ಸಮಾಧಾನ ಮಾಡಿದರೂ ಅವರ ಜಗಳ ಪಾಂಡವ ಕೌರವರ ಜಗಳದಂತೆ ಸಾಗಿಯೇ ಇತ್ತು. ನಾನು ಪುಟ್ಟುವನ್ನು ನನ್ನ ರೂಮಿಗೆ ಕರೆದುಕೊಂಡು ಹೋಗಿ, ಅವನನ್ನು ರಮಿಸಿ, "ಹೇಳು ಪುಟ್ಟೂ...ನೀನು ರಾಜಿಯ ಪೆನ್ಸಿಲ್ ತಗೊಂಡಿದ್ದು ನಿಜಾನಾ...?" ಎಂದು ಕೇಳಿದೆ. ಅದಕ್ಕೆ ಅವನು, "ಇಲ್ಲ... ಇಲ್ಲ ಭೀಮಣ್ಣ...ನಾನು ಖರೇ ಹೇಳ್ತೀನಿ, ನಾನು ತೊಗೊಂಡಿಲ್ಲ," ಎಂದ. ಕೊನೆಗೆ ಅವನು, "ಭೀಮಣ್ಣ, ನಿಜ ಹೇಳ್ಲಾ?" ಎಂದ. ನನಗೆ, ನನ್ಮುಂದೆ ನಿಜ ಹೇಳ್ತಾನಲ್ಲಾ ಅಂತ ಹೆಮ್ಮೆ! ನಾನು ಸಂತೋಷದಿಂದ, "ಹೇಳು ಮರಿ, ಹೇಳು," ಎಂದೆ. ಆಗವನು, "ಭೀಮಣ್ಣ, ನೀನು ಹೇಳಿದ್ದೆಯಲ್ಲಾ, ಗಣೇಶ ಚೌತಿಯಂದು ಚಂದ್ರನ್ನ ನೋಡಿದ್ರೆ ಸುಳ್ಳು ಅಪವಾದ ಬರುತ್ತದೆ ಅಂತ. ನಾ...ನು ಗಣೇಶಚೌತಿಯಂದು ಚಂದ್ರನ್ನ ನೋಡ್ದೆ... ಅದೇ ನನ್ಮೇಲೆ ಈಗ...ರಾಜಿಯ ಪೆನ್ಸಿಲ್ ಕಳವು ಮಾಡಿದ ಅಪವಾದ ಬಂದಿದೆ," ಎಂದ. ಥಡಥಡನೇ! ಅವನ ಕಣ್ಣಂಚಿನಲ್ಲಿ ಗಂಗಾ-ವತರಣ. ಎಂಥ ಧೃಢ ನಂಬಿಕೆ ಎಂದು ಕೊಂಡೆ ನಾನು. —ಭೀಮಸೇನ ಎಸ್. ಪಪ್ಪು

೧೯೪೫-೪೬ ರ ದಿನಗಳವು. ನಮ್ಮ ಕಾಲೇ ಜಿಗೆ ಉಪನ್ಯಾಸ ಭಾಷಣ ಮಾಡಲು, ಸರ್ ಚಂದ್ರಶೇಖರ ವೆಂಕಟರಾಮನ್‌ವರು ಬಂದಿದ್ದರು. (ಆಗಿನ್ನೂ ಅವರು ಭಾರತರತ್ನ ಭೂಷಿತರಾಗಿರಲಿಲ್ಲ. ನಮಗಾಗ ಸ್ವಾತಂ-ತ್ರ್ಯವೇ ಬಂದಿರಲಿಲ್ಲವಲ್ಲ.) ಉಪನ್ಯಾಸ ಮಾಡುವಾಗ ತಮ್ಮ ಮೇಲಂಗಿಯ ಕೊರಳ ಪಟ್ಟಿಯನ್ನು ಎರಡು ಕೈಗಳಲ್ಲಿ ಬಲವಾಗಿ ಹಿಡಿದು, ಜಗ್ಗಿ, ಮಾತನಾಡುವುದು ಅವರ ಅಭ್ಯಾಸ. ಆಗ ತಾನೇ ಅಮೇರಿಕ ಪ್ರವಾಸ ದಿಂದ ಹಿಂತಿರುಗಿ ಬಂದಿದ್ದರೆಂದು ತೋರು ತ್ತದೆ. ನಾಣ್ಯಗಳನ್ನು ಹಾಕಿ, ಗುಂಡಿ ಒತ್ತಿ ದರೆ ಕೋಕಾಕೋಲಾ ಪಾನೀಯವನ್ನು ನೀಡುವಂತಹ ಸ್ವಯಂಚಾಲಿತ ಯಂತ್ರಗಳ ವಿವರಣೆಯನ್ನು ಕೊಡುತ್ತಿದ್ದರು. ಮಾತ ನಾಡುತ್ತಿದ್ದ ಹಾಗೆಯೇ ಏನನ್ನೋ ಜ್ಞಾಪಿಸಿ ಕೊಂಡು, ಅವರು ಕಿಸೆಗೆ ಕೈಹಾಕಿ, ಒಂದು ನಿಂಬೆಹಣ್ಣಿನ ಗಾತ್ರದ ಒರಟೀ ಬಣ್ಣದ ಒಂದು ಪದಾರ್ಥವನ್ನು ಹೊರದೆಗೆದರು.

ಅದನ್ನು ಎರಡು ಕೈಗಳ ಬೆರಳುಗಳಲ್ಲಿ ಹಿಡಿದು ನಿಧಾನವಾಗಿ ಎಳೆದು ತಂತಿಯಂತೆ ಉದ್ದವಾಗುವ ಅದರ ಗುಣವನ್ನೂ, ಅಂಗೈ-ಯಲ್ಲಿ ಹಿಚುಕಿದಾಗ ಉಂಡೆ ಕಟ್ಟಿಕೊಳ್ಳು-ವುದನ್ನೂ, ಇದ್ದಕ್ಕಿದ್ದ ಹಾಗೆ ಹಿಡಿದು ಎಳೆ ದಾಗ ಕತ್ತರಿಸಿ ಹೋಗುವುದನ್ನೂ, ಕೆಳಗೆ ಹಾಕಿದಾಗ ರಬ್ಬರಿನಂತೆ ಪುಟಿಯುವುದನ್ನೂ ವಿವರಿಸುತ್ತಾ, ಮಾಡಿ ತೋರಿಸುತ್ತಿದ್ದರು. ಬೇಕೆನ್ನುವುದಕ್ಕಿಂತ ಹೆಚ್ಚು ಬಲದಿಂದ ಕೆಳಕ್ಕೆ ಹಾಕಿದರೇನೋ, ಆ ವಿಚಿತ್ರ ವಸ್ತು ಬಹಳ ಎತ್ತರಕ್ಕೆ ಪುಟದೆದ್ದಿತು. ಅದನ್ನು ಹಿಡಿಯಲು ಡಾಕ್ಟರ್ ರಾಮನ್, ವೇದಿಕೆಯ ಮೇಲೆ ಓಡಾಡಿ, ಬಹಳ ಶ್ರಮ ಪಡಬೇಕಾ ಯಿತು. ಕೂಡಲೆ ಅದನ್ನು ಜಾಗರೂಕತೆ ಯಿಂದ ತಮ್ಮ ಕಿಸೆಗೆ ಸೇರಿಸುತ್ತಾ, "ಇದರ ಹೆಸರು 'ಪ್ಲಾಸ್ಟಿಕ್'" ಎಂದರು. ಇಷ್ಟು ಹೇಳಿ ಆಯಾಸದಿಂದ ಅವರು ಕುರ್ಚಿಯಲ್ಲಿ ಕುಸಿದು ಕುಳಿತರು. ನಮ್ಮ ಪ್ರಿನ್ಸಿಪಾಲರು ಗಾಬರಿಯಿಂದ ಓಡಾಡಿ ಒಂದು ಗ್ಲಾಸಿನಷ್ಟು ನೀರನ್ನು ತರಿಸಿ ಡಾಕ್ಟರಿಗೆ ಕುಡಿಯಲು ಕೊಟ್ಟರು. ಚೇತರಿಸಿಕೊಂಡು ಡಾ. ರಾಮನ್ ಪುನಃ ಉಪನ್ಯಾಸ ಮಾಡಲು ಎದ್ದರು.

ಅಂದು ಆ ಮಹಾಮಹಿಮರ ಕಿಸೆಯ ಭದ್ರ ಸ್ಥಾನದಲ್ಲಿ ಕುಳಿತ ಆ ಆಶ್ಚರ್ಯಕರ ರಸಾಯನಿಕ ಪದಾರ್ಥ, ಈಗ ಬೀದಿ ಬೀದಿ ಗಳಲ್ಲಿ, ಕಸದ ಡಬ್ಬಗಳಲ್ಲಿ ಬಿದ್ದಿರುವುದನ್ನು ಕಾಣುತ್ತೇವೆ. —ನು. ಶಾ. ಶ್ರೀಮಾನ

## ಇವರು ನಮ್ಮ ದೇವವೈದ್ಯರು

● ಡಾ. ಕೆ. ಜಿ. ದೇಸಾಯಿ

# ಅಶ್ವಿನೀದೇವತೆಗಳು

**ಪ್ರ ವಾಂ ದಂಸಾಂಸ್ಯಶ್ವಿನಾವವೋಚಮಸ್ಯ**
**ಪತಿಃ ಸ್ಯಾಂ ಸುಗವಃ ಸುವೀರಃ।**
**ಉತ ಪಶ್ಯನ್ನಶ್ನುವನ್ದೀರ್ಘಮಾಯು-**
**ರಸ್ತಮಿವೇಜ್ಜರಿಮಾಣಂ ಜಗಮ್ಯಾಂ॥**

(ಋಗ್ವೇದ ಮ. ೧, ಅ. ೧೭, ಸೂ. ೧೬-೨೫)

"ಎಲೆ ಅಶ್ವಿನೀದೇವತೆಗಳೆ, ನಿಮ್ಮಿಬ್ಬರ ಮಹತ್ಕಾರ್ಯಗಳನ್ನು ವರ್ಣಿಸಿದ್ದೇನೆ. ನಾನು ವೀರ್ಯವಂತನಾಗಿಯೂ ಒಳ್ಳೆಯ ಗೋವುಗಳಿಂದ ಯುಕ್ತನಾಗಿಯೂ ಈ ರಾಷ್ಟ್ರದ ಅಧಿಪತಿಯಾಗುವಂತೆಯೂ ಇಂದ್ರಿಯ ಪಾಟವವುಳ್ಳವನಾಗಿ ಬಹುಕಾಲ ಜೀವಿಸಿ (ಅನಂತರ, ಯಜಮಾನನು ತನ್ನ ಮನೆಯನ್ನು ಪ್ರವೇಶಿಸುವಂತೆ) ವಾರ್ಧಕ್ಯವನ್ನು ಹೊಂದುವಂತೆ ಮಾಡಿರಿ." ಋಗ್ವೇದದ ಈ ಸೂಕ್ತವು ದೇವವೈದ್ಯರಾದ ಅಶ್ವಿನೀಕುಮಾರರನ್ನುದ್ದೇಶಿಸಿದ ಪ್ರಾರ್ಥನೆಯಾಗಿದೆ.

ಪ್ರಾಚೀನ ಭಾರತೀಯರ ನಂಬುಗೆಯಂತೆ ಜ್ಞಾನದ ಪ್ರತಿಯೊಂದು ಅಂಗವೂ ದೈವೀಮೂಲವುಳ್ಳದ್ದು; ಪ್ರತಿಯೊಂದಕ್ಕೂ ಪ್ರತ್ಯೇಕ ಅಭಿಮಾನೀ ದೇವತೆಗಳಿದ್ದಾರೆ. ವೈದ್ಯಶಾಸ್ತ್ರಕ್ಕೆ ನಮ್ಮಲ್ಲಿ ಎಷ್ಟೊಂದು ಮಹತ್ವವಿದೆಯೆಂದರೆ ಆಯುರ್ವೇದವೆಂದು ಅದಕ್ಕೆ ವೇದಗಳಷ್ಟು ಗೌರವದ ಸ್ಥಾನ ದೊರೆತಿದೆ. ಪಂಚ-ಮಹಾಭೂತಗಳಿಂದ ಉದ್ಭವಿಸಿದ ಭೂಲೋಕದ ಮರ್ತ್ಯರಿಗೆ ತ್ರಿದೋಷಗಳ ಬಾಧೆ ಅನಿವಾರ್ಯ. ಈ ತ್ರಿದೋಷಗಳ ನ್ಯೂನಾಧಿಕ್ಯದಿಂದ ಉಂಟಾಗಬಹುದಾದ ರೋಗರುಜಿನಗಳನ್ನು ನಿವಾರಿಸುವುದಕ್ಕಾಗಿ ಬ್ರಹ್ಮದೇವನು ಆಯುರ್ವೇದವನ್ನು ಸ್ಮರಣೆಗೆ ತಂದುಕೊಂಡು ಪ್ರಜಾಪತಿಗೆ ಉಪದೇಶಿಸಿದನು. ಪ್ರಜಾಪತಿಯು ಅಶ್ವಿನೀಕುಮಾರರಿಗೆ, ಅವರು ಇಂದ್ರನಿಗೆ ಇವನ್ನು ಹೇಳಿಕೊಟ್ಟರು. ಇಂದ್ರನಿದನ್ನು ಋಷಿಗಳಿಗೆ ಬೋಧಿಸಿದ. ಈ ರೀತಿಯಾಗಿ ಅಥರ್ವಣವೇದದ ಉಪವೇದವಾಗಿ ಆಯುರ್ವೇದವು ದ್ಯಾವಾಪೃಥಿವಿಯಲ್ಲಿ ಪ್ರಚಾರ ಪಡೆಯಿತು.

ಆಯುರ್ವೇದ ಭರದ್ವಾಜ ಋಷಿಯ ಮೂಲಕ ಮಾನವರಿಗೆ ದೊರೆಯಿತೆಂದೂ ಹೇಳಲಾಗುತ್ತಿದೆ. ಭರದ್ವಾಜರು ದೇವೇಂದ್ರನನ್ನು ಆರಾಧಿಸಿ ಅವನಿಂದ ಈ ವಿದ್ಯೆಯನ್ನು ಸಂಪಾದಿಸಿ ಇತರ

ಋಷಿ ಮುನಿಗಳಿಗೆ ಉಪದೇಶಿಸಿದರಂತೆ.

'ಶರೀರಮಾದ್ಯಂ ಖಲು ಧರ್ಮಸಾಧನಂ' ಎಂಬ ಉಕ್ತಿಯಂತೆ ಮಾನವನು ನಿರೋಗಿಯಾಗಿ ಸದೃಢನಾಗಿದ್ದರೇನೇ ಅವನಿಂದ ಧರ್ಮ, ಅರ್ಥ, ಕಾಮ, ಮೋಕ್ಷ ಈ ಚತುರ್ವಿಧ ಪುರುಷಾರ್ಥಗಳು ಸಾಧ್ಯ. ಆಯುರ್ವೇದವನ್ನು ಅತ್ಯಂತ ಪರಿಣಾಮಕಾರಿಯಾಗಿ ಉಪಯೋಗಿಸಬಲ್ಲ ದೇವತೆಗಳು ನಾಸತ್ಯ ಮತ್ತು ದಸ್ರಾ ಎಂಬ ಹೆಸರಿನಿಂದ ಕರೆಯಲ್ಪಡುವ ಅಶ್ವಿನೀಕುಮಾರರು. ದೇವವೈದ್ಯರಾದ ಇವರು ದೇವತೆಗಳಿಗೆ ಮಾತ್ರವಲ್ಲ, ಮಾನವರಿಗೆ ಕೂಡ ಚಿಕಿತ್ಸೆ ನೀಡಿದ ಉಲ್ಲೇಖ ಋಗ್ವೇದದಲ್ಲಿ ಅಲ್ಲಲ್ಲಿ ಕಂಡುಬರುತ್ತದೆ.

ಸದಾ ಜೊತೆಯಾಗಿಯೇ ಇರುವ ಈ ಇಬ್ಬರ ಅಭಿಪ್ರಾಯ ಕೂಡ ಯಾವಾಗಲೂ ಒಂದೇ ಆಗಿರುತ್ತದಂತೆ. ಆದರಿಂದಾಗಿ ಇವರಲ್ಲಿ ಯಾರೊಬ್ಬರನ್ನು ಆಹ್ವಾನಿಸಿದರೂ ಅದು ಇಬ್ಬರಿಗೂ ಅನ್ವಯಿಸುತ್ತದೆ. ಅಂತೆಯೇ ಇವರನ್ನು ಯಾವಾಗಲೂ ದ್ವಿವಚನದಲ್ಲೇ ಸಂಬೋಧಿಸಲಾಗುತ್ತದೆ. ವಿವಸ್ವತ್ ಮತ್ತು ಸರಣ್ಯು ದಂಪತಿಗಳ ಮಕ್ಕಳಾದ ಇವರಲ್ಲಿ ನಾಸತ್ಯ ಎಂಬವನ ಹೆಸರಿನ ಉಗಮದ ಬಗ್ಗೆ ಅನೇಕ ಐತಿಹ್ಯಗಳಿವೆ. ನಾಸತ್ಯ ಎಂದರೆ ನ ಅಸತ್ಯ ಅಥವಾ ಯಾವಾಗಲೂ ಸತ್ಯವನ್ನೇ ನುಡಿಯುವ ಇಲ್ಲವೆ ಇವನು ನುಡಿದದ್ದೇ ಸತ್ಯ ಎಂದು ಅರ್ಥವಾಗುವುದರಿಂದ ಈ ಅಭಿಧಾನ ಬಂದಿರಬೇಕು. ಸೂರ್ಯನು ಆಕಾಶದಲ್ಲಿ ಸಂಜ್ಞಾದೇವಿಯೊಡನೆ ವಿಹರಿಸುತ್ತಿರುವಾಗ ಇವನು ನಾಸಿಕೆಯಿಂದ ಉದ್ಭವಿಸಿದನೆಂದೂ ಆ ಕಾರಣಕ್ಕಾಗಿಯೇ ನಾಸತ್ಯ ಎಂಬ ಹೆಸರು ಬಂತೆಂದೂ ಒಂದು ಅಭಿಪ್ರಾಯವಿದೆ. ಈ ಇಬ್ಬರಲ್ಲಿ ಒಬ್ಬನು ಸೋಮಗುಣಪೂರಿತನೂ ಇನ್ನೊಬ್ಬನು ತೇಜದಿಂದ ವ್ಯಾಪಿಸಲ್ಪಟ್ಟಿರುವವನೂ ಆಗಿರುವುದರಿಂದ ಇವರಿಗೆ ಯಾವ ರೋಗವೂ ಅಸಾಧ್ಯವಲ್ಲ. 'ಅಶ್ವಗಳುಳ್ಳ ಇಬ್ಬರು ದೇವತೆಗಳೇ ಅಶ್ವಿನೀಕುಮಾರ'ರೆಂದು ಉರ್ಣಾಭ ಎಂಬ ಆಚಾರ್ಯರು ಪ್ರತಿಪಾದಿಸಿದ್ದಾರೆ. ಇನ್ನು ಕೆಲ ಆಚಾ-

ರ್ಯರು, ಭೂಮಿಯನ್ನು ಅನ್ನದಿಂದಲೂ ಅಂತರಿಕ್ಷವನ್ನು ತೇಜಸ್ಸಿನಿಂದಲೂ ವ್ಯಾಪಿಸಿರುವ ದೇವತೆಗಳೇ ಅಶ್ವಿನೀಕುಮಾರರೆಂದೂ ಪ್ರತ್ಯಕ್ಷವಾಗಿ ಎಲ್ಲರಿಗೂ ಕಂಡುಬರುವ ದ್ಯಾವಾಪೃಥಿವೀ ಎಂದೂ ಹೇಳಿದ್ದಾರೆ.

ಸೋಮಪಾನಪ್ರಿಯರಾದ ಅಶ್ವಿನೀಕುಮಾರರು ನಿತ್ಯ ತರುಣರೂ ಸ್ಫುರದ್ರೂಪಿಗಳೂ ಮಹಾ ಶೂರರೂ ಆಗಿರುವರೆಂದು ವರ್ಣಿಸಲಾಗಿದೆ. ರೆಕ್ಕೆಗಳುಳ್ಳ ಎರಡು ಕುದುರೆಗಳಿಂದ ಎಳೆಯಲ್ಪಡುವ ಮೂವರು ಸಾರಥಿಗಳುಳ್ಳ ತ್ರಿಕೋಣಾಕಾರದ ಚಿನ್ನದ ರಥದಲ್ಲಿ ಕುಳಿತು ಇವರು ತಮ್ಮನ್ನು ಋಕ್ ಸ್ತೋತ್ರಗಳಿಂದ ಆಹ್ವಾನಿಸಿದ ರೋಗಿಗಳ ಬಳಿಗೆ ಹೋಗಿ ಉಪಚರಿಸುತ್ತಾರಂತೆ. ಕೆಲವೊಮ್ಮೆ ಇವರು ಕತ್ತೆಗಳನ್ನು ತಮ್ಮ ವಾಹನಗಳಾಗಿ ಉಪಯೋಗಿಸಿದ್ದರೆಂದೂ ಕೆಲ ಸೂಕ್ತಗಳಲ್ಲಿ ವರ್ಣಿಸಲ್ಪಟ್ಟಿದೆ. ಇವರು ಮಾನವರೊಂದಿಗೆ ವಿಶೇಷ ಬಳಕೆಯುಳ್ಳವರಾದ್ದರಿಂದ ತಮ್ಮೊಡನೆ ಇವರನ್ನು ಸೇರಿಸಿಕೊಳ್ಳಲು ಇತರ ದೇವತೆಗಳು ಅನುಮಾನಿಸುತ್ತಾರಂತೆ.

ಅಶ್ವಿನೀಕುಮಾರರನ್ನು ಪ್ರಾತಃಕಾಲದಲ್ಲೇ ಸ್ತುತಿಸಿ ಹವಿಸ್ಸನ್ನರ್ಪಿಸಬೇಕು. ಇವರಿಗಾಗಿ ಸಾಯಂಕಾಲದಲ್ಲಿ ಹವನವನ್ನು ಮಾಡಬಾರದೆಂದು ನಿಯಮವಿರುತ್ತದೆ.

ಈ ದೇವವೈದ್ಯರು ಎಸಗಿದ ಅನೇಕಾನೇಕ ಪವಾಡಗಳನ್ನೂ ಶೌರ್ಯಸಾಹಸದ ಕಥೆಗಳನ್ನೂ ಋಗ್ವೇದ(ಸೂಕ್ತ ೧೧೬-೧೨೦)ದಲ್ಲಿ ವರ್ಣಿಸಲಾಗಿದೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಶರ್ಯಾತಿ ಎಂಬ ರಾಜನಿಗೆ ಸುಕನ್ಯಾ ಎಂಬ ಪುತ್ರಿ ಇದ್ದಳು. ಅವಳು ಹಾಸ್ಯಪ್ರವೃತ್ತಿಯವಳಾದುದರಿಂದ ರಾಜನೊಡನೆ ಯಾವಾಗಲೂ ಕುಚೇಷ್ಟೆ ಮಾಡುತ್ತಿದ್ದಳು. ಇದರಿಂದ ರಾಜನು ಒಮ್ಮೆ ಕೋಪಿಷ್ಠನಾಗಿ ಅವಳನ್ನು ಶಿಕ್ಷಿಸಬೇಕೆಂದು ಚ್ಯವನನೆಂಬ ವೃದ್ಧ ಋಷಿಯೊಡನೆ ಅವಳ ವಿವಾಹ ಮಾಡಿಕೊಟ್ಟು ಚ್ಯವನನ ಆಶ್ರಮಕ್ಕೆ ಅವಳನ್ನು ಕಳುಹಿಸಿಕೊಟ್ಟ. ಸುಕನ್ಯೆಯು ಚ್ಯವನ ಋಷಿಯ ಆಶ್ರಮದಲ್ಲಿ ವಾಸಿಸುತ್ತಿದ್ದಾಗ ಅಶ್ವಿನೀಕುಮಾರರು ಅವಳಿದ್ದಲ್ಲಿಗೆ ಬಂದು ವೃದ್ಧನಾದ ಚ್ಯವನನನ್ನು ತ್ಯಜಿಸಿ, ಸ್ಫುರದ್ರೂಪಿಗಳೂ ತರುಣರೂ ಆದ ತಮ್ಮನ್ನು ವರಿಸಬೇಕೆಂದು ಕೇಳಿಕೊಂಡರು. ಆದರೆ ಪತಿಪರಾಯಣೆಯಾದ ಅವಳು ಅದಕ್ಕೆ ಒಪ್ಪದಿರಲು, ಸಂಪ್ರೀತರಾದ ಅವರು ಒಂದು ಲೇಹ್ಯವನ್ನು ಸಿದ್ಧಪಡಿಸಿ ಚ್ಯವನ ಋಷಿಗೆ ಕೊಟ್ಟು ಅವನ ವಾರ್ಧಕ್ಯವನ್ನು ಕಳೆದು ಅವನಿಗೆ ಯೌವನಾವಸ್ಥೆಯನ್ನು ತಂದು ಕೊಟ್ಟರು. ಅದೇ ಮುಂದೆ "ಚ್ಯವನಪ್ರಾಶ" ವೆಂದು ಲೋಕದಲ್ಲಿ ಖ್ಯಾತವಾಯಿತು (ಮ. ೧, ಅ. ೧೭ ಸೂ. ೧೧೬-೧೦).

ರೇಭನೆಂಬ ಋಷಿಯು ಸಂಧ್ಯಾಕಾಲದಲ್ಲಿ ನದಿಯಲ್ಲಿ ಸ್ನಾನಮಾಡಿ ಅಗ್ನಿಹೋತ್ರವನ್ನು ಆಚರಿಸುವದಕ್ಕಾಗಿ ಆಶ್ರಮದತ್ತ ನಡೆದಾಗ ಯಜ್ಞನಾಶಕರಾದ ರಾಕ್ಷಸರು ಅವನನ್ನು ಹಗ್ಗಗಳಿಂದ ಬಿಗಿದು ನದೀತಲದಲ್ಲಿ ಹತ್ತು ದಿವಸ ಬಚ್ಚಿಟ್ಟರು. ಇತ್ತ ರೇಭ ಋಷಿಯು ಅಶ್ವಿನೀದೇವತೆಗಳ ಸ್ತೋತ್ರ ಮಾಡತೊಡಗಿದ. ಆ ಸ್ತೋತ್ರದಿಂದ ಸುಪ್ರೀತರಾದ ಅಶ್ವಿನೀಕುಮಾರರು ನದೀತಲದಿಂದ ಅವನನ್ನು ಹುಡುಕಿ ತೆಗೆದು ಬಂಧಮುಕ್ತನನ್ನಾಗಿ ಮಾಡಿದುದಲ್ಲದೆ ಅವನಿಗೊದಗಿದ ಜಲದೋಷ ನಿವಾರಣೆ ಮಾಡಿ ಹೋದ ಆರೋಗ್ಯವನ್ನು ಅವನಿಗೆ ಮರಳಿ ಕೊಟ್ಟರು. (ಮ. ೧, ಅ. ೧೭ ಸೂ, ೧೧೬-೨೪).

ರಾಕ್ಷಸರು ಒಮ್ಮೆ ಅತ್ರಿ ಋಷಿಯನ್ನು ಒಂಸಿಸುವುದಕ್ಕಾಗಿ ಅನೇಕ ದ್ವಾರಗಳುಳ್ಳ ಅಪಾಯಕರವಾದ ಒಂದು ಮನೆಯಲ್ಲಿ ತುಷಾಗ್ನಿಯನ್ನು ಪುಟ ಮಾಡಿ ಅದರ ಮೇಲೆ ಅವನನ್ನು ಅಧೋಮುಖ ಮಾಡಿ ಮಲಗಿಸಿದರು. ಅದರಿಂದ ಅತ್ರಿಯ ಶರೀರವು ಬೆಂದು ಅದರ ತಾಪವನ್ನು ತಾಳಲಾರದೆ ಅವನು ಅಶ್ವಿನೀದೇವತೆಗಳ ಸ್ತೋತ್ರ ಮಾಡತೊಡಗಿದ. ಅವರು ಹಿಮದಂತೆ ತಣ್ಣಗಿದ್ದ ನೀರನ್ನು ಸುರಿಸಿ ಅಗ್ನಿಯನ್ನು

ಪ್ರಶಾಂತಗೊಳಿಸಿದರು. ಮತ್ತು ಆ ಋಷಿ ವರ್ಯನಿಗೆ ಬೃಂಹಣಕರವಾದ ಕ್ಷೀರಾನ್ನವನ್ನಿತ್ತು ಅವನ ಶರೀರವನ್ನು ಮೊದಲಿನಂತೆ ಮಾಡಿದರು (ಮ. ೧, ಅ. ೧೬, ಸೂ. ೧೧೬–೧೧೭).

ಕಕ್ಷೀವಂತ ಋಷಿಯ ಪುತ್ರಿಯಾದ ಘೋಷಾ ಬ್ರಹ್ಮವಾದಿನಿಯಾಗಿದ್ದಳು. ಅವಳು ಕುಷ್ಠ ರೋಗ ಪೀಡಿತಳಾದಳು. ಇದರಿಂದ ಜುಗುಪ್ಸೆ ಪಟ್ಟು ಅವಳ ಪತಿಯು ಅವಳನ್ನು ತ್ಯಜಿಸಿದನು. ಅಶ್ವಿನೀಕುಮಾರರು ಅವಳ ರೋಗನಿವಾರಣೆ ಮಾಡಿ ಪುನಃ ಅವಳು ತನ್ನ ಪತಿಯನ್ನು ಪಡೆಯುವಂತೆ ಮಾಡಿದರು (ಮ. ೧, ಅ. ೧೭, ಸೂ. ೧೧೭–೭).

ಅಗ್ನಿಸುತನಾದ ಘೋರನ ಜ್ಯೇಷ್ಠಪುತ್ರನು ಗಲಿತ ಕುಷ್ಠದಿಂದ ಕಪ್ಪಾದ ಚರ್ಮವುಳ್ಳವನಾಗಿದ್ದನು. ಅಶ್ವಿನೀಕುಮಾರರು ಅವನ ಶಿರ ಮತ್ತು ಜಂಘೆಗಳನ್ನು ಛೇದಿಸಿ, ರೋಗದ ಮೂಲವನ್ನು ಕಂಡುಹಿಡಿದು, ಅದನ್ನು ಗುಣಪಡಿಸಿದ ನಂತರ ಶಿರಸ್ಸನ್ನೂ ಜಂಘೆಯನ್ನೂ ಮೊದಲಿದ್ದ ಸ್ಥಳದಲ್ಲಿ ಕೂಡಿಸಿ ಸುವರ್ಣ ಕಾಂತಿಯುಳ್ಳ ಶರೀರವನ್ನು ಅವನಿಗೆ ನೀಡಿದರು. (ಮ. ೧, ಅ. ೧೭, ಸೂ. ೧೧೭ –೨೪).

ಕಣ್ವ ಮುನಿಯು ಕಣ್ಣು ಕಾಣಿಸದೆ ಬಳಲುತ್ತಿರುವುದನ್ನು ನೋಡಿ ದಯಾಳುಗಳಾದ ಅಶ್ವಿನೀಕುಮಾರರು ಅವನ ಕಣ್ಣುಗಳಿಗೆ ಚಿಕಿತ್ಸೆ ನೀಡಿ ಅವು ಕಾಣುವಂತೆ ಮಾಡಿದರು.

ವಧ್ರಿಮತಿಯೆಂಬ ಜ್ಞಾನಿಯಾದ ಸ್ತ್ರೀಯ ಪತಿಯು ನಪುಂಸಕನಾಗಿದ್ದನು. ವಧ್ರಿಮತಿಯ ಪ್ರಾರ್ಥನೆಯಂತೆ ಅಶ್ವಿನೀದೇವತೆಗಳು ಅವಳ ಗಂಡನ ನಪುಂಸಕತ್ವವನ್ನು ನಿವಾರಿಸಿದರು. ಹಿರಣ್ಯಹಸ್ತನೆಂಬ ಮಗುವನ್ನೂ ದಯಪಾಲಿಸಿದರು. (ಮ. ೧, ಅ. ೧೭, ಸೂಕ್ತ ೧೧೭–೧೩).

ಅಥರ್ವಣಪುತ್ರನಾದ ದಧೀಚಿ ಋಷಿಗೆ 'ಮಧುವಿದ್ಯಾ' ಎಂಬ ಬ್ರಹ್ಮವಿದ್ಯೆಯನ್ನು ದೇವೇಂದ್ರನು ಉಪದೇಶಿಸಿದ್ದನು ಮತ್ತು ಯಾರಿಗಾದರೂ ಈ ವಿದ್ಯೆಯನ್ನು ಉಪದೇಶಿಸಿದರೆ ಶಿರಶ್ಛೇದನ ಮಾಡುವುದಾಗಿ ಶಾಸನವಿತ್ತಿದ್ದನು. ಈ ವಿದ್ಯೆಯನ್ನು ಕಲಿಯಬೇಕೆಂಬ ಲವಲವಿಕೆ ಅಶ್ವಿನೀಕುಮಾರರಲ್ಲಿ ಉಂಟಾಗಿತ್ತು. ಅವರು ಒಂದು ದಿನ ದಧೀಚಿಯ ಬಳಿಗೆ ಹೋಗಿ ತಮಗೆ ಆ ವಿದ್ಯೆಯನ್ನು ಉಪದೇಶಿಸಬೇಕೆಂದು ಬೇಡಿಕೊಂಡರು. ದಧೀಚಿಯು ಇಂದ್ರನ ಶಾಸನವನ್ನು ನೆನೆದು, ಸಾಧ್ಯವಿಲ್ಲೆಂದು ಹೇಳಿದನು. ಅಶ್ವಿನೀದೇವತೆಗಳು ಅದಕ್ಕೊಂದು ಉಪಾಯ ಕಲ್ಪಿಸಿದರು. ಅವರು ತಮ್ಮ ಶಸ್ತ್ರಚಿಕಿತ್ಸಾಸಾಮರ್ಥ್ಯದಿಂದ ಆ ಋಷಿಯ ಶಿರಸ್ಸನ್ನು ಕತ್ತರಿಸಿಟ್ಟು ಆ ಸ್ಥಳದಲ್ಲಿ ಒಂದು ಕುದುರೆಯ ಮುಖವನ್ನು ಜೋಡಿಸಿದರು. ದಧೀಚಿಯು ಕುದುರೆಯ ಮುಖದಿಂದ ಅಶ್ವಿನೀಕುಮಾರರಿಗೆ ಆ ವಿದ್ಯೆಯನ್ನು ಉಪದೇಶಿಸಿದನು. ಇದನ್ನು ಕೇಳಿ ಕ್ರುದ್ಧನಾದ ಇಂದ್ರನು ದಧೀಚಿಯ ಶಿರಶ್ಛೇದನ ಮಾಡಿದ. ದಧೀಚಿಯ ಕುದುರೆಯ ಮುಖ ಕತ್ತರಿಸಿ ಕಳಚಿಬಿದ್ದಿತು. ತತ್‌ಕ್ಷಣ ಅಶ್ವಿನೀದೇವತೆಗಳು ಅವನ ಮೊದಲಿನ ಶಿರಸ್ಸನ್ನು ಮೊದಲಿದ್ದಂತೆ ಜೋಡಿಸಿಬಿಟ್ಟರು. ಇದರಿಂದ ದಧೀಚಿಯ ತಲೆಯೂ ಉಳಿಯಿತು, ಅಶ್ವಿನೀಕುಮಾರರಿಗೆ ಮಧುವಿದ್ಯೆಯೂ ಪ್ರಾಪ್ತವಾಯಿತು. (ಮ.೧, ಅ.೧೭, ಸೂ.೧೧೬–೧೨).

ಖೇಲನೆಂಬ ರಾಜನಿಗೆ ವಿಶ್ಪಲಾ ಎಂಬ ಪತ್ನಿ ಇದ್ದಳು. ಒಮ್ಮೆ ಯುದ್ಧದಲ್ಲಿ ಅವಳ ಪಾದವು ಕತ್ತರಿಸಿಹೋಯಿತು. ಅಶ್ವಿನೀದೇವತೆಗಳು ಕತ್ತರಿಸಿಹೋದ ಪಾದಕ್ಕೆ ಪ್ರತಿಯಾಗಿ ಲೋಹದ ಪಾದವನ್ನು ಜೋಡಿಸಿದರು (ಮ. ೧, ಅ. ೧೭, ಸೂ. ೧೧೬–೧೫).

ಇಂತು ಅಶ್ವಿನೀದೇವತೆಗಳು ಆಯುರ್ವೇದದ ಪ್ರಧಾನ ಪ್ರಚೋದಕರೆಂದು ನಿರ್ವಿವಾದವಾಗಿ ಹೇಳಬಹುದು.

**ಮ. = ಮಂಡಲ**
**ಅ. = ಅನುವಾಕ್**
**ಸೂ. = ಸೂಕ್ತ**

● ಕೃಷ್ಣಮೂರ್ತಿ

# ಅಳಿಯುತ್ತಿರುವ ಉರಗ : ಮೊಸಳೆ

ಗರಗಸ ದಂತ, ಮುಳ್ಳಿನ ಬಾಲ, ಚಪ್ಪಟೆಯಾಗಿ ಅಗಲವಾದ ಹೊಟ್ಟೆ, ವಕ್ರವಾಗಿ ತ್ರಿಕೋನವಾದ ಮುಸುಡಿ, ಸಣ್ಣ ಕಣ್ಣುಗಳು, ಆಕೃತಿಗೆ ಚಿಕ್ಕವಾದ ಕಾಲುಗಳು, ಸುಕ್ಕು ಸುಕ್ಕಾದ ಚರ್ಮ—ಮೊಸಳೆ ಮನುಷ್ಯ ಅತ್ಯಂತ ದ್ವೇಷಿಸುವ ಪ್ರಾಣಿಗಳಲ್ಲೊಂದಾಗಿದೆ. ಉರಗ ಮನಗಳ ವರ್ಗಕ್ಕೆ ಸೇರಿದ ಇದು ಜೀವವಿಕಾಸದ ದಾರಿಯಲ್ಲಿ ಭೂಮಿಯ ಮೇಲೆ ಜನ್ಮ ತಾಳಿ ಹತ್ತು ಕೋಟಿ ವರ್ಷಗಳಾಗಿವೆ. ಅಲ್ಲಿಂದೀಚೆಗೆ ಇದರ ಜಾತಿಗಳು ಪ್ರಪಂಚದ ಉಷ್ಣವಲಯದ ಬಹುಭಾಗಗಳಲ್ಲಿ ಹಬ್ಬಿವೆ. ಮಧ್ಯ ಮತ್ತು



ತತ್ತಿಯಿಂದ ಹೊರಬರುವ ಮೊಸಳೆ

ದಕ್ಷಿಣ ಆಫ್ರಿಕ, ಏಷ್ಯಾದ ಉಷ್ಣ ಭಾಗಗಳು, ಶಾಂತಸಾಗರ ದ್ವೀಪಗಳು,ಉತ್ತರಆಸ್ಟ್ರೇಲಿಯಾ ಮತ್ತು ಅಮೇರಿಕದ,ದಕ್ಷಿಣ ಭಾಗಗಳಲ್ಲಿ ಇದರ ರಾಜ್ಯ ಹರಡಿದೆ.

ಮೊಸಳೆಗಳಲ್ಲಿ ಈಗ ಬರಿಯ ೨೪ ಜೀವ ಜಾತಿಗಳು ಮಾತ್ರ ಬದುಕಿವೆ. ಅವುಗಳಲ್ಲಿ ಬಹುಪಾಲು, ನದಿ, ಕೆರೆ, ಕಟ್ಟೆ ಮುಂತಾಗಿ ಸಿಹಿ ನೀರಿನಲ್ಲಿ ವಾಸಿಸುವುವು. ಸಮುದ್ರದಲ್ಲಿ ಜೀವಿಸುವ ಅಪರೂಪವಾದ ಮೊಸಳೆಗಳು ಬಂಗಾಳಾ ಕೊಲ್ಲಿಯಿಂದ ಚೈನಾ ಸಮುದ್ರದ ವರೆಗೆ ಇವೆ. ಇಂದಿನ ಉರಗಮನಗಳಲ್ಲಿ ಅತಿ ದೊಡ್ಡದಾದ ದೇಹವನ್ನು ಹೊಂದಿರುವ ಮೊಸಳೆ ಹೆಚ್ಚೆಂದರೆ ೧೦ ರಿಂದ ೨೫ ಅಡಿಗಳ ವರೆಗೆ ಬೆಳೆಯುತ್ತದೆ. ಆದರೆ ದೊಡ್ಡದಾದ ಮೊಸಳೆಗಳು ಈಗ ಅಪರೂಪವಾಗುತ್ತಿವೆ.

ನೀರಿನಲ್ಲಿ ಮುಸುಡಿಯುನ್ನೊಳಗೊಂಡು ಇಡೀ ದೇಹ ಮುಳುಗಿ, ಕಣ್ಣು ಮತ್ತು ನಾಸಿಕಗಳನ್ನು ಮಾತ್ರ ನೀರಿನಿಂದ ಮೇಲಿರಿಸಿ ಮೊಸಳೆ ನಿಶ್ಶಬ್ದವಾಗಿ ತೇಲುತ್ತದೆ. ವೇಗವಾಗಿ ಈಜಬೇಕೆಂದರೆ ಅದರ ಬಾಲದ ಬಿರುಸಿನ ತೊಯ್ಯುವಿಕೆ ಸಹಾಯಕ್ಕೆ ಒದಗುತ್ತದೆ. ಹೊಟ್ಟೆ ತುಂಬಿತೆಂದರೆ ದಡದಲ್ಲಿರುವ ಮರಳಿನಲ್ಲಿ ಬಿದ್ದುಕೊಂಡು ಬಿಸಿಲು ಕಾಯಿಸುವುದು ಅದಕ್ಕೆ ಪ್ರಿಯವಾದದ್ದು. ಆಫ್ರಿಕದ ನೈಲ್ ತೀರದಲ್ಲಿ ಓಗೆ ಒಂದರ

ಮೇಲೊಂದು ಬಿದ್ದುಕೊಂಡು ಬಿಸಿಲು ಕಾಯಿಸುತ್ತಿರುವ ಮೊಸಳೆಗಳ ನೋಟ ಸಾಮಾನ್ಯ. ಮಳಲಿನಲ್ಲಿ ಅದು ಸಾಮಾನ್ಯವಾಗಿ ತೆವಳುವುದಾದರೂ, ಉದ್ರೇಕಗೊಂಡಾಗ ನಾಲ್ಕೂ ಕಾಲುಗಳಿಂದ ಓಡುವುದುಂಟು.

ಮೀನುಗಳು ಮೊಸಳೆಯ ನಿತ್ಯದ ಆಹಾರ. ಆದರೆ ಹಾಗೆ ದೊರೆಯುವ ಯಾವ ಪ್ರಾಣಿಯನ್ನೂ ಅದು ತಿಂದು ತೇಗುತ್ತದೆ. ನೀರು ಕುಡಿಯಲು ಬಂದ ಹಸು, ಕರು, ನಾಯಿ, ಜಿಂಕೆ, ಕೊನೆಗೆ ಮನುಷ್ಯನೂ ಸರಿ–ಬಿಡಲಾರದು. ಮನುಷ್ಯ ತನ್ನ ವೈರಿ ಎಂದುಕೊಂಡು ಬಹಳ ಬಾರಿ ಅದು ದೂರ ಸರಿದು ಹೋಗುವುದೇ ಹೆಚ್ಚು. ಆದರೆ ನೀರಿನಲ್ಲಿ ಸ್ನಾನಕ್ಕೋ ನೀರು ತುಂಬಲೋ ಬಂದು ಸುಲಭವಾಗಿ ದೊರೆಯುವ ಮನುಷ್ಯರನ್ನು ಅದು ಬಿಡಲಾರದು. ಹೀಗೆ ಬಲಿಯಾಗುವವರಲ್ಲಿ ಬಹುಪಾಲು ಹೆಂಗಸರು, ಮಕ್ಕಳು. ಆಫ್ರಿಕದಲ್ಲಿ ಪ್ರತಿವರ್ಷ ಸಾವಿರದಷ್ಟು ಮೂಲನಿವಾಸಿಗಳು ಮೊಸಳೆಗೆ ಆಹಾರವಾಗುತ್ತಾರೆ. ಒಮ್ಮೆ ಅದಕ್ಕೆ ಮನುಷ್ಯ ಮಾಂಸದ ರುಚಿ ಸಿಕ್ಕಿತೆಂದರೆ ಮತ್ತೊಮ್ಮೆ ಅಂತಹುದೇ ಊಟಕ್ಕೆ ಹೊಂಚಿ ಕಾಯುವುದುಂಟು.

ಆಹಾರ ಸಾಧನೆಗೆ ಅದರ ಪ್ರಮುಖವಾದ ಅಂಶಗಳೆಂದರೆ ಬಲಿಷ್ಠವಾದ ದವಡೆಗಳು ಮತ್ತು ಶಕ್ತಿಯುತವಾದ ಬಾಲ. ಅದರ ಬಾಲದ ಹೊಡೆತಕ್ಕೆ ನೀರಿನಲ್ಲಿದ್ದ ಮನುಷ್ಯನೊಬ್ಬ ಕಾಲು ಮುರಿದು ರಪ್ಪನೆ ಬೀಳುತ್ತಾನೆ; ಜಿಂಕೆ, ಕರು, ನಾಯಿ ಮುಂತಾದ ಇತರ ಪ್ರಾಣಿಗಳು ಈ ಹೊಡೆತಕ್ಕೆ ತತ್ತರಿಸಿ ಬಿದ್ದು ಮೂರ್ಛೆ ಹೋಗುತ್ತವೆ. ಬಾಯಿಯ ಅಳವಿಗೆ ದೊರೆತ ಪ್ರಾಣಿಗಳನ್ನು ಅದು ಇಡಿಯದಾಗಿಯೇ ನುಂಗಿಬಿಡುತ್ತದೆ. ದೊಡ್ಡದಾಗಿದ್ದರೆ ಅವನ್ನು ತನ್ನ ಜಲಾಂತರ್ಗತ ನಿವಾಸದಲ್ಲಿ ಕೊಳೆ ಹಾಕಿ, ಕ್ರಮೇಣ ಹರಿದು ತಿನ್ನುವುದು. ಅದರ ದವಡೆಯಲ್ಲಿನ ವಿಕಾರವಾದ ಹಲ್ಲುಗಳು ಆಹಾರವನ್ನು ಜಗಿಯಲು ಬಾರವು. ಆದರೆ ಅವು ಹಿಡಿದ ಪ್ರಾಣಿ ಬಾಯಿಯಿಂದ ತಪ್ಪಿಸಿಕೊಳ್ಳದಂತೆ ತಡೆಯುತ್ತವೆ.

ನುಂಗಿದ ಪ್ರಾಣಿಗಳು ಅದರ ಜಠರರಸದಲ್ಲಷ್ಟೇ ಅರಗಬೇಕು. ಆದರೆ ಅದರ ಜಠರಾಮ್ಲ ಅತ್ಯಂತ ತೀಕ್ಷ್ಣವಾಗಿದೆ. ನುಂಗಿದ ಏನನ್ನೂ ಅದು ಕರಗಿಸುತ್ತದೆ. ಅದರ ತೀಕ್ಷ್ಣತೆ ಎಷ್ಟೆಂದರೆ ಕಬ್ಬಿಣ, ಉಕ್ಕು ಮತ್ತಿತರ ವಸ್ತುಗಳೂ ಅದರ ಜಠರಾಮ್ಲದಲ್ಲಿ ನಿಧಾನವಾಗಿ ಕರಗಿ ಹೋಗುತ್ತವೆ.

ಗಂಡು ಮತ್ತು ಹೆಣ್ಣು ಮೊಸಳೆಗಳಲ್ಲಿ ಹೆಣ್ಣು ಪ್ರಾಣಿಯೇ ಬಲಿಷ್ಠವಾಗಿರುತ್ತದೆ. ಗಂಡು ಪ್ರಾಣಿ ತನ್ನ ಗಂಟಲ ಬಳಿ ಇರುವ ಎರಡು ಧ್ವನಿ ಪೆಟ್ಟಿಗೆಗಳಿಂದ ಒಂದು ವಿಧವಾದ ಶಬ್ದ ಹೊರಡಿಸುತ್ತದೆ. ಡ್ರಂ ಉರುಳುವಂಥ ಈ ಗುಡುಗುಡು ಶಬ್ದ ಹೆಣ್ಣನ್ನು ಕರೆಯುವ ಆಹ್ವಾನ. ಗಂಡು ಹೆಣ್ಣುಗಳು ಕೂಡುವುದು ನೀರಿನಲ್ಲಾದರೂ ಮೊಟ್ಟೆ ಇಡಲು ಹೆಣ್ಣು ದಡಕ್ಕೆ ಹೋಗಬೇಕು.

ಭಾರತದ ಒಂದು ಮೊಸಳೆ ಜಾತಿ



ಹೆಣ್ಣು ಮೊಸಳೆ ಒಂದು ಬಾರಿಗೆ ೨೦ ರಿಂದ ೫೦ ಮೊಟ್ಟೆಗಳನ್ನಿಡುತ್ತದೆ. ಅದಕ್ಕಾಗಿ ಅದು ನೀರಿಗೆ ಹೆಚ್ಚು ದೂರವಿಲ್ಲದ ದಡದ ಪ್ರದೇಶವನ್ನು ಆಯ್ದು, ಅಲ್ಲಿನ ಮಳಲಲ್ಲಿ ಸುಮಾರು ಎರಡಡಿ ಆಳದ ಗುಂಡಿಯನ್ನು ಅಗೆದು ಅದರಲ್ಲಿ ಸಾಲುಗಟ್ಟಿ ಮೊಟ್ಟೆಯಿಡುತ್ತದೆ. ಅನಂತರ ಅದು ಮೊಟ್ಟೆಗಳನ್ನು ಮಳಲಿಂದ ಮುಚ್ಚಿ ನೀರಿಗೆ ಮರಳುತ್ತದೆ. ಮತ್ತೆ ನೀರಿನಲ್ಲಿದ್ದೇ ಆ ಮೊಟ್ಟೆಗಳನ್ನು ಕಾಯುವುದು ಅದರ ಕೆಲಸ. ಅದರ ಮೊಟ್ಟೆಗಳೆಂದರೆ ಹಲವು ಪ್ರಾಣಿಗಳಿಗೆ ಸಿದ್ಧವಾದ ಆಹಾರ. ಹೆಬ್ಬಾವು, ಮುಂಗುಸಿ, ಚಿರತೆ, ಇಲಿ, ಹೆಗ್ಗಣಗಳಂತಹವು ಮೊಸಳೆಯ ಮೊಟ್ಟೆಯ ಜಾಗವನ್ನು ಕಂಡರೆ ಬಿಡಲಾರವು.

ಮೂರು ತಿಂಗಳಲ್ಲಿ ಮರಳಿನ ಶಾಖಕ್ಕೆ ಮೊಟ್ಟೆಗಳೊಡೆದು ಮರಿಯಾಗುತ್ತವೆ. ಆದರೆ ಆ ಚಿಕ್ಕ ಪ್ರಾಣಿಗಳು ತಮ್ಮ ಮೇಲಿನ ಮಳಲನ್ನು ತಳ್ಳಿಕೊಂಡು ಹೊರಬರಲಾರವು. ಅವುಗಳ ಸಹಾಯಕ್ಕೆ ತಾಯಿಯೇ ಬರಬೇಕು. ಮೊಟ್ಟೆಯಿಂದ ಇನ್ನೂ ಪೂರ್ಣ ಹೊರಬರುವ ಮೊದಲೇ ಮರಿಗಳು ಸಣ್ಣದಾಗಿ ಕಿರುಚಿದಂತೆ ದನಿ ತೆಗೆಯುತ್ತವೆ. ದಡದ ಬಳಿಯಲ್ಲೇ ನೀರಿನಲ್ಲಿ ಅದಕ್ಕಾಗಿ ಕಾದಿರುವ ತಾಯಿಗೆ ಇದು ಸ್ಪಷ್ಟವಾಗಿ ಕೇಳಿಸುತ್ತದೆ. ಆಗಲೇ ಅದು ಧಾವಿಸಿ ಬಂದು ಮಳಲನ್ನು ಅಗೆದು ಮರಿಗಳನ್ನು ಬಿಡುಗಡೆ ಮಾಡುತ್ತದೆ. ಈ ಕರ್ತವ್ಯಕ್ಕಾಗಿ ಅದು ಯಾವ ಅಪಾಯವನ್ನೂ ಲೆಕ್ಕಿಸದೆ ಮುನ್ನುಗ್ಗುತ್ತದೆ. ಆಗ ಅದರ ಎದುರು ಯಾವ ವೈರಿಯೂ ನಿಲ್ಲಲಾರದು. ವಿಜ್ಞಾನಿಗಳೊಮ್ಮೆ ಅದರ ಮೊಟ್ಟೆಗಳಿರುವ ಪ್ರದೇಶದ ಸುತ್ತಲೂ ಮುಳ್ಳು ತಂತಿಯ ಬಿಗಿಯಾದ ಬೇಲಿ ಹೆಣೆದು ಪರೀಕ್ಷಿಸಿದರು. ಆದರೆ ಮರಿಗಳ ಧ್ವನಿ ಕೇಳಿಸಿಕೊಂಡ ತಾಯಿ ಆ ಬೇಲಿಯನ್ನು ಹರಿದು ಚಿಂದಿ ಮಾಡಿ ತನ್ನ ಮರಿಗಳನ್ನು ಹೊರತೆಗೆಯಿತು.

ಮೇಲೆ ಬಂದ ಮರಿಗಳು ತೆವಳುತ್ತಾ ನೀರಿಗೆ ಸೇರಬೇಕು. ಅಕ್ಷುಣ್ಣವಾಗಿ ಅವು ನೀರ ಕಡೆಗೇ ಚಲಿಸುತ್ತವೆ. ಆದರೆ ಮಧ್ಯದಲ್ಲಿಯೇ ಅವುಗಳಲ್ಲಿ ಬಹಳಷ್ಟು ಇತರ ಪ್ರಾಣಿಗಳಿಗೆ ಆಹಾರವಾಗಿ ಹೋಗುತ್ತವೆ. ಹದ್ದು, ಕೊಕ್ಕರೆ, ನಾರಾಯಣ ಮುಂತಾದ ಪಕ್ಷಿಗಳು, ಎಲ್ಲಿಂದಲೋ ಎರಗಿ ಇವನ್ನು ಹಾರಿಸಿಕೊಂಡು ಹೋಗಿಬಿಡುತ್ತವೆ. ಕೊನೆಗೆ ಇತರ ಮೊಸಳೆಗಳೂ ಈ ಮರಿಗಳನ್ನು ನುಂಗಿ ಬಿಡುವುದುಂಟು. ಇವೆಲ್ಲವುಗಳಿಂದ ತಪ್ಪಿ ಉಳಿದವು ಬೆಳೆದು ದೊಡ್ಡವಾಗಬೇಕು. ವಿಜ್ಞಾನಿಗಳ ಲೆಕ್ಕದಂತೆ ನೂರು ಮರಿಗಳಲ್ಲಿ ಒಂದು ಮಾತ್ರ ಬದುಕುಳಿದು ದೊಡ್ಡದಾಗುತ್ತದೆ.

ಆಫ್ರಿಕದ ನೈಲ್ ನದೀತೀರದಲ್ಲಿ ಸಿಗುವ ಮೊಸಳೆಗಳು ಶ್ರೇಷ್ಠವೆನಿಸಿವೆ. ಉಗಾಂಡದ ದಕ್ಷಿಣಕ್ಕೆ ನೈಲ್ ತೀರದ ವಿಕ್ಟೋರಿಯಾ ಜಲಪಾತದ ಬಳಿ ಪ್ರಪಂಚದಲ್ಲೇ ಅತಿ ಹೆಚ್ಚು

ನೈಲ್ ನದಿಯ ಮೊಸಳೆ



ಸಂಖ್ಯೆಯಲ್ಲಿ ಮೊಸಳೆಗಳು ಸೇರಿವೆ. ಅಲ್ಲಿ ಬೇಟೆಗಾಗಿ ಅವನ್ನು ಕೊಲ್ಲುವುದೂ ನಿಷಿದ್ಧ. ಅವು ನೀರಿನಲ್ಲಿ ತೇಲುವ ಬಡ್ಡೆಗಳಂತೆ, ಹತ್ತು, ನೂರುಗಳಲ್ಲಿ ಸಂಚರಿಸುತ್ತವೆ. ರಕ್ಷಿತ ದೋಣಿಗಳಲ್ಲಿ ಅಲ್ಲಿ ಸಂಚರಿಸುವುದಾದರೆ, ಮೊಸಳೆಗಳ ಗುಂಪನ್ನು ಬಡಿದು ತಳ್ಳಿ ದಾರಿ ಮಾಡಿಕೊಳ್ಳಬೇಕಾಗುತ್ತದೆ. ಅವುಗಳಿಗೆ ಆಹಾರವಾಗಿ ಅಲ್ಲಿ ಜಲಚರಗಳೂ ವಿಶೇಷವಾಗಿವೆ. ಸುಪುಷ್ಟವಾಗಿ ಬೆಳೆದ, ಬಗೆ ಬಗೆಯ ಮೀನುಗಳೂ ಆ ನೀರಿನಲ್ಲಿ ಎಷ್ಟು ಯಥೇಚ್ಛವೆಂದರೆ ಮೊಸಳೆಗಳು ಬರಿಯ ಬಾಯಿ ತೆರೆದರಾಯಿತು, ಮೀನು ತುಂಬಿದ ಬಾಯನ್ನು ನಂತರ ಮುಚ್ಚಿಕೊಳ್ಳುವುದಷ್ಟೇ. ಹತ್ತಿರದ ದಟ್ಟವಾದ ಅರಣ್ಯದಿಂದ ನೀರಿಗೆ ಬಂದ ಯಾವ ಪ್ರಾಣಿಯೂ ಅಲ್ಲಿನ ಮೊಸಳೆಗಳಿಗೆ ಒದಗುತ್ತವೆ. ದಡದ ಮಳಲಿನಲ್ಲಿ ಬಿಸಿಲು ಕಾಯಿಸುತ್ತ ಸೋಮಾರಿಗಳಂತೆ ಒಂದರ ಮೇಲೊಂದು ಮೊಸಳೆ ಬಿದ್ದಿರುವುದೂ ಮುದಿಯಾಗಿ ಸತ್ತ ಮೊಸಳೆಗಳು ದಡದಲ್ಲಿ ನಾರುವುದೂ ಅಲ್ಲಿ ಸಾಮಾನ್ಯ.

ಮೊಸಳೆಗಳು ನೂರಕ್ಕೂ ಹೆಚ್ಚು ವರ್ಷ ಕಾಲ ಬದುಕುತ್ತವೆ. ಬೆಳೆದ ಮೊಸಳೆಗೆ ವೈರಿಗಳು ಕಡಿಮೆ. ಆದರೆ ಈಗ ಮನುಷ್ಯ ತನ್ನ ಬೆಡಗಿನ ದಾಹದಿಂದಾಗಿ ಅವರ ಕಡು ವೈರಿಯಾಗಿದ್ದಾನೆ. ಅದರಿಂದ ಅವು ಪೂರ್ಣ ಅಳಿದುಹೋಗಬಹುದೇ ಎಂದು ಸಂಶಯಪಡಬೇಕಾಗಿದೆ. ಇದರ ಕಾರಣವೆಂದರೆ ಮೊಸಳೆಯ ಚರ್ಮ ಇಂದು ಎಂದಿಗಿಂತಲೂ ಅತಿ ಹೆಚ್ಚು ಬೆಲೆ ತರುತ್ತದೆ.

ಮೊಸಳೆಯಲ್ಲಿ ಮನುಷ್ಯನಿಗೆ ಉಪಯುಕ್ತವಾದುದೆಂದರೆ ಅದರ ದಪ್ಪವಾದ, ಮಿದುವಾದ ಚರ್ಮ. ಅದರ ಚರ್ಮದಿಂದ ಹೆಂಗಸರ ಜಂಬದ ಚೀಲ, ಪರ್ಸು, ಪೆಟ್ಟಿಗೆ, ಬೂಟುಗಳನ್ನು ಮಾಡಲು ಬರುತ್ತದೆ. ಮೊಸಳೆ ಚರ್ಮದ ಚಪ್ಪಲಿ, ಬೂಟುಗಳೆಂದರೆ, ಕೈಚೀಲಗಳೆಂದರೆ, ಹೆಂಗಸರಿಗೆ—ಹೆಚ್ಚಾಗಿ ಅಮೇರಿಕ-ಫ್ರಾನ್ಸ್‌ಗಳಲ್ಲಿ, ಅದೊಂದು ಬೆಡಗಿನ ಪ್ರದರ್ಶನವಾಗುತ್ತದೆ. ಇದರಿಂದಾಗಿ ಮೊಸಳೆಯ ಚರ್ಮಕ್ಕೆ ಬೇಡಿಕೆ ಹೆಚ್ಚಿದೆ. ಅಭಾವದಿಂದಾಗಿ ಅದು ಹೆಚ್ಚು ಬೆಲೆಯುಳ್ಳದ್ದಾಗಿದೆ. ಒಂದು ಮೊಸಳೆಯ ಎದೆಯ ಚರ್ಮ ೩೦೦ ರೂಪಾಯಿಗಳಿಗೆ ಮಾರಲ್ಪಟ್ಟು ನಂತರ ಹದ ಮಾಡಿ ಅದರಿಂದ ಸಾಮಾನು ತಯಾರಿಸಿದಾಗ ಅದೇ ಚರ್ಮಕ್ಕೆ ಸಾವಿರ ರೂಪಾಯಿಗಳಷ್ಟು ಬೆಲೆ ಸಿಗುತ್ತದೆ. ಮೊಸಳೆ ಚರ್ಮದ ಬೂಟುಗಳೂ ಕೈಪೆಟ್ಟಿಗೆಗಳೂ ನೂರಿನ್ನೂರು ರೂಪಾಯಿಗಳಷ್ಟು ಬೆಲೆಯವಾಗಿವೆ. ಬಹುಪಾಲು ಇಂಗ್ಲಂಡ್, ಅಮೇರಿಕ, ಫ್ರಾನ್ಸ್‌ಗಳಿಂದ ಬರುವ ಇಂಥ ಬೇಡಿಕೆಗಳಿಗಾಗಿ ಇಂದು ಎಲ್ಲೆಲ್ಲೂ ಮೊಸಳೆಗಳು ಗುಂಡಿಗಾಹುತಿಯಾಗುತ್ತಿವೆ. ಇದೇ ಕಾರಣದಿಂದ, ಹಲವು ವರ್ಷಗಳ ಹಿಂದೆ ಅಮೇರಿಕದಲ್ಲಿ ಹೆಚ್ಚಾಗಿ ಕಾಣಸಿಗುತ್ತಿದ್ದ ಮೊಸಳೆಗಳು ಇಂದು ನಾಮಶೇಷವಾಗಿವೆ. ಅಲ್ಲಿನ ಬಹುಪಾಲು ನದಿ, ಕೊಳಗಳು ಮೊಸಳೆಗಳಿಲ್ಲದೇ ಖಾಲಿಯಾಗಿವೆ. ಅಮೇರಿಕ, ಆಫ್ರಿಕಗಳನ್ನೊಳಗೊಂಡು ಹಲವು ದೇಶಗಳಲ್ಲಿ ಇದಕ್ಕಾಗಿ ಮೊಸಳೆ ಬೇಟೆಯನ್ನು ನಿಷೇಧಿಸಲಾಗಿದೆ. ಆದರೆ ಮನುಷ್ಯನ ಬೆಡಗಿನ ದಾಹ ಅದಕ್ಕೂ ಹೆಚ್ಚಾಗಿದೆ. ಅಂತೆಯೇ ಅವು ಸಿಗುವ ಕಡೆಗಳಲ್ಲೆಲ್ಲಾ, ಬೇಟೆಗಾರರು ಮೋಟಾರು ದೋಣಿಗಳಲ್ಲಿ ಸಂಚರಿಸಿ, ಕದ್ದು, ಸಿಕ್ಕಲ್ಲಿ ಮೊಸಳೆಗಳಿಗೆ ಗುಂಡು ಹಾಕುತ್ತಾರೆ. ಅವನ್ನು ಕದ್ದು ಮಾರಿದರೂ ಪಟ್ಟ ಶ್ರಮಕ್ಕೆ ಎರಡರಷ್ಟು ಲಾಭ ಸಿಗುತ್ತದೆ. ಇದರಿಂದ ಆಗಲೇ ಹಲವು ನೀರಿನ ಪ್ರದೇಶಗಳಲ್ಲಿ ಮೊಸಳೆಗಳು ನಷ್ಟವಾಗಿವೆ.

ಮನುಷ್ಯನ ಈ ಬೆಡಗಿನ ಆಸೆ ಇನ್ನೂ ಮುಂದುವರಿದರೆ ಕಣ್ಮರೆಯಾದ ಇತರ ಪ್ರಾಣಿ ಜಾತಿಗಳ ಸಾಲಿಗೆ ಮೊಸಳೆಯೂ ಬೇಗನೆ ಸೇರುತ್ತದೆ. ಅನಂತರ ಅದನ್ನು ಸ್ವಲ್ಪ ಕಾಲ ಪ್ರಾಣಿ ಸಂಗ್ರಹಾಲಯಗಳಲ್ಲಿ ಮಾತ್ರ ಕಾಣಬೇಕಾದೀತು. ✡

# ನಾನಿಲ್ಲಿ ಬರಗಾಲದ ಭೀಕರತೆಯನ್ನು ಕಂಡೆ

ಎಫ್. ಎಚ್. ಎಸ್. ಮಿಯರ್‌ವೆದರ್

**ಕಳೆದ ಶತಮಾನದ ಕೊನೆಯಲ್ಲಿ ಎರಡು ಸಲ ಭೀಕರ ಬರಗಾಲ ಭಾರತವನ್ನು ಕಂಗೆಡಿಸಿತು. ನೋಡಿದಲ್ಲೆಲ್ಲ ಹೆಣಗಳೇ ಓಡಾಡುತ್ತಿವೆಯೇನೊ ಎಂಬಷ್ಟು ಭೀಕರವಾಗಿತ್ತು, 'ಡವಗೀಬರ' (೧೮೭೬-೭೭). ತೀವ್ರತೆಯಲ್ಲಿ ಅದಕ್ಕಿಂತ ತುಸುವೇ ಕಡಿಮೆಯೆನಿಸಿದ್ದ ೧೮೯೬-೯೭ ರ ಬರಗಾಲವನ್ನು ಕಣ್ಣಾರೆ ಕಂಡು ವರದಿ ಮಾಡುವಂತೆ ಪ್ರಸ್ತುತ ಲೇಖಕನನ್ನು ರೈಟರ್ ವಾರ್ತಾ ಸಂಸ್ಥೆ ಭಾರತಕ್ಕೆ ಕಳಿಸಿತು. ಅವನು ವಿಜಾಪುರದಿಂದ ಆರಂಭಿಸಿ ಮಧ್ಯಭಾರತ, ಉತ್ತರ ಪ್ರದೇಶ, ಪಂಜಾಬ, ರಾಜಸ್ತಾನಗಳ ಕ್ಷಾಮಪೀಡಿತ ಪ್ರದೇಶಗಳನ್ನು ಸಂದರ್ಶಿಸಿ ಬರೆದ ವರದಿಯು ೧೮೯೮ ರಲ್ಲಿ 'Through the Famine Districts of India' ಎಂಬ ಹೆಸರಿನಿಂದ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಅದರೊಳಗಿಂದ ವಿಜಾಪುರಕ್ಕೆ ಸಂಬಂಧಿಸಿದ ಅಂಶಗಳನ್ನು ಇಲ್ಲಿ ಎತ್ತಿಕೊಡಲಾಗಿದೆ. ಕರ್ನಾಟಕದ ಕಲಬುರ್ಗಿ, ವಿಜಾಪುರ ಜಿಲ್ಲೆಗಳಲ್ಲಿ ಇಂದುಂಟಾಗಿರುವ ಬರಗಾಲ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಇದನ್ನು ನೋಡಬಹುದು.**

ಕೊಲ್ಲಾಪುರದಿಂದ ಹೊರಟ ನಾನು ಮಿರಜ ಜಂಕ್ಷನ್ನಿನಲ್ಲಿ ಗಾಡಿಯನ್ನು ಬದಲಿಸಿ ಮೇಲ್ ಗಾಡಿಯನ್ನೇರಿ ಕನ್ನಡ ದೇಶದಲ್ಲಿರುವ ಧಾರವಾಡಕ್ಕೆ ನಡೆದೆ. ಧಾರವಾಡದಲ್ಲಿ ಸದರ್ನ್ ಮರಾಠಾ ರೇಲ್ವೆಯ ಮುಖ್ಯ ಕಚೇರಿಯನ್ನು ಇತ್ತೀಚೆ ಸ್ಥಾಪಿಸಲಾಗಿದೆ. ಬೆಳಗಾಂವಿಯನ್ನು ಬಿಟ್ಟೊಡನೆಯೇ ಹತ್ತು ಮೈಲುಗಳಲ್ಲಿ ನಿಜವಾದ ಅರಣ್ಯ ಪ್ರಾರಂಭವಾಗುತ್ತದೆ. ಬೆಳಗಾಂವಿಯಿಂದ ದಕ್ಷಿಣಕ್ಕೆ ಸುಮಾರು ೨೦೦ ಮೈಲುಗಳ ವರೆಗೆ ಪಶ್ಚಿಮ ಕರಾವಳಿಗೆ ಸಮಾಂತರವಾಗಿ ಹಬ್ಬಿದ ಈ ಅರಣ್ಯ ಮಿಲಿಟರಿ ಮತ್ತು ಇತರ ಬೇಟೆಗಾರರ ಸ್ವರ್ಗವೆಂದು ಹೆಸರಾಗಿದೆ. ಹುಲಿ, ಕಡವೆ, ಚಿಗರೆಗಳಂತಹ ಕಾಡು ಪ್ರಾಣಿಗಳು ವಿಪುಲವಾಗಿವೆ ಇಲ್ಲಿ. ತೇಗು, ಮಾವುಗಳಂಥ ಗಿಡಮರಗಳೂ ಬಣ್ಣ ಬಣ್ಣದ ಹೂಬಳ್ಳಿಗಳೂ ತುಂಬಿದ್ದು ಕಣ್ಣಿಗೆ ಹಬ್ಬವನ್ನುಂಟುಮಾಡುತ್ತದೆ.

*

ಬೆಳಗಾಂವಿಯಿಂದ ವಿಜಾಪುರಕ್ಕೆ ಹೋಗುವ ದಾರಿಯಲ್ಲಿ ನಾನು ಹುಬ್ಬಳ್ಳಿಯೆಂಬ ಮಹತ್ವದ ನಗರದ ಮೂಲಕ ಹಾಯ್ದು ಹೋದೆ. ಹುಬ್ಬಳ್ಳಿ ಆಹಾರಧಾನ್ಯಗಳ ಮತ್ತು ಅರಳೆಯ ದೊಡ್ಡ ಕೇಂದ್ರ. ಇವೆರಡೂ ಇಲ್ಲಿಂದ ಮುಂಬಯಿಗೆ ರಫ್ತಾಗುತ್ತವೆ. ಇಲ್ಲಿ ಇತ್ತೀಚೆ–ಅಂದರೆ ನಾನಿಲ್ಲಿ ಬರುವುದಕ್ಕೆ ಒಂದು ತಿಂಗಳು ಮುಂಚೆ–ಸಂಭವಿಸಿದ ಒಂದು ಘಟನೆ ನನ್ನ ಗಮನ ಸೆಳೆಯಿತು. ಇಲ್ಲಿ ಸಾಕಷ್ಟು ಧಾನ್ಯಸಂಗ್ರಹವಿರುವಾಗಲೂ ಇಲ್ಲಿಯ ಬನಿಯಾಗಳು ಕೃತ್ರಿಮ ಕೊರತೆ ನಿರ್ಮಿಸಿ ಭಾರಿ ದುಬಾರಿ ಬೆಲೆ ಹೇಳತೊಡಗಿದ್ದರಿಂದ ಜನ ಸಿಟ್ಟಿಗೆದ್ದರು. ಬನಿಯಾಗಳು ಯಾರ ಮಾತಿಗೂ ಮಣಿಯಲಿಲ್ಲ. ಊರಲ್ಲಿ ಧಾನ್ಯ ಸಮೃದ್ಧಿಯಿರುವಾಗಲೂ ತಾವು ಉಪವಾಸ ಬೀಳಬೇಕಾದಂಥ ಪರಿಸ್ಥಿತಿ ನಿರ್ಮಾಣವಾಗುತ್ತಿರುವುದನ್ನು ಕಂಡ ಜನತೆ ರೊಚ್ಚಿಗೆದ್ದು ಹಲವು ಕಾಳಿನಂಗಡಿಗಳನ್ನು ಲೂಟಿ ಮಾಡತೊಡಗಿತು. ಆ ಕಾಲಕ್ಕೆ ಹುಬ್ಬಳ್ಳಿಯಲ್ಲಿದ್ದ ಡೆಪ್ಯುಟಿ ಕಲೆಕ್ಟರನು ಜನಾಂಗಗಳೆರಡನ್ನೂ ಸಮಾಧಾನ

ಗೊಳಿಸಲು ಪ್ರಯತ್ನಿಸಲು ಹೋದವನು ಜೀವಂತ ಮರಳಿ ಬಂದುದೇ ಪುಣ್ಯವೆನ್ನಬೇಕು.

ಈ ಭಾಗದಲ್ಲಿ ಧಾನ್ಯ ಸಂಗ್ರಹ ವಿಪುಲವಾಗಿದೆ. ಹೆಚ್ಚಿನ ಬೆಲೆಯೇರಿಕೆಯನ್ನು ನಿರೀಕ್ಷಿಸಿದ ಬನಿಯಾಗಳು ತಮ್ಮ ಸಂಗ್ರಹವನ್ನು ಬಚ್ಚಿಟ್ಟರು. ಮುಂದೆ ಕೊರತೆ ಭಾಸವಾಗತೊಡಗಿ ಬೆಲೆಗಳು ಏರಲಾರಂಭಿಸಿದೊಡನೆಯೇ ಬಹು ದೊಡ್ಡ ಪ್ರಮಾಣದಲ್ಲಿ ಇಲ್ಲಿಂದ ಮುಂಬಯಿಗೆ ಧಾನ್ಯವನ್ನು ಕಳಿಸಿದರು. ಆದರೆ ಅಲ್ಲಿ ಒಮ್ಮೆಲೇ ಬೆಲೆಗಳು ಕುಸಿದದ್ದರಿಂದ ಮತ್ತು ರೇಲ್ವೆ ಸಾರಿಗೆಯ ಮೇಲೆ ಭಯಂಕರ ಒತ್ತಡವುಂಟಾದ್ದರಿಂದ ಬಹಳ ವ್ಯಾಗನ್ನುಗಳು ಬೆಳಗಾಂವಿಯನ್ನು ದಾಟಿ ಹೋಗಿರಲೇ ಇಲ್ಲ. ಅವನ್ನೆಲ್ಲ ಮತ್ತೆ ಹುಬ್ಬಳ್ಳಿಗೆ ಕರೆಸಿಕೊಳ್ಳುವುದು ಅನಿವಾರ್ಯವಾಗಿ ಪರಿಣಮಿಸಿತು. ಈ ಜಿಲ್ಲೆಯ ಸಿರಿವಂತ ರೈತರು ಮೂರು ವರ್ಷಗಳಿಗೆ ಸಾಕಾಗುವಷ್ಟು ಆಹಾರಧಾನ್ಯ ಸಂಗ್ರಹಿಸಿಟ್ಟುಕೊಂಡಿದ್ದಾರೆಂಬುದು ಸರ್ವವಿದಿತವಿದೆ. ಆದರೂ ತಮ್ಮ ಈ 'ಗಂಟ್ಟ'ನ್ನು ಬಯಲು ಮಾಡಲು ಅವರು ಹಿಂಜರಿಯುತ್ತಿದ್ದಾರೆ ಮಾತ್ರವಲ್ಲ, ಉಳಿದವರಿಗೆ ಸಂಶಯ ಬರದಿರಲೆಂದು ತಮ್ಮ ಮನೆಯವರನ್ನು ಬರಗಾಲ ಪರಿಹಾರ ಕಾಮಗಿರಿ ನಡೆದಿರುವ ಸಮೀಪದ ಸ್ಥಳಗಳಿಗೆ ಕೂಲಿಗೆಂದು ಕಳಿಸುತ್ತಾರೆ.



ಅಂದು ಲೇಖಕ ಕಂಡ ಜೀವಂತ ಅಸ್ಥಿಪಂಜರಗಳು

ಧಾರವಾಡದಲ್ಲಿ ರೈಲು ನಿಲ್ದಾಣದಿಂದ ಸುಮಾರು ಮುಕ್ಕಾಲು ಮೈಲು ಅಂತರದಲ್ಲಿಯೇ ಸದರ್ನ್ ಮರಾಠಾ ರೇಲ್ವೆಯ ಮುಖ್ಯ ಕಚೇರಿಯಿದೆ. ಕೆಂಪು ಇಟ್ಟಿಗೆಗಳಿಂದ ಕಟ್ಟಲಾದ ಈ ಭವ್ಯ ಕಟ್ಟಡ* ನೋಡುಗನ ಮನಸ್ಸನ್ನು ತಟ್ಟನೆ ಸೂರೆಗೊಳ್ಳುತ್ತದೆ. ನಿಸರ್ಗದ ಮಡಿಲಲ್ಲಿ ಒಂದು ಗುಡ್ಡದ ಮೇಲೆ ಹೆಮ್ಮೆಯಿಂದ ನಿಂತಿದೆ ಇದು. ಸುತ್ತಮುತ್ತ ಅಲ್ಲಲ್ಲಿ ರೇಲ್ವೆಯ ವಿವಿಧ ಅಧಿಕಾರಿಗಳಿಗಾಗಿ ಕಟ್ಟಲಾದ ಬಂಗಲೆಗಳಿವೆ. ರೇಲ್ವೆಯ ಮ್ಯಾನೇಜರ್ ಮೇಜರ್ ಬರ್ನ್-ಮರ್ಡೋಚ್‌ರ ಸಂದರ್ಶನ ಪಡೆದು, ಅವರೊಡನೆ ರೇಲ್ವೆಸಾರಿಗೆಯ ಸಮಸ್ಯೆಯನ್ನು ನಾನು ಚರ್ಚಿಸಿದೆ. ಧಾರವಾಡ ಜಿಲ್ಲೆಯಲ್ಲಿ ಉಂಟಾಗಿರುವ ಕೊರತೆ ಮತ್ತು ಬೆಲೆಯೇರಿಕೆಗೆ ರೇಲ್ವೆ ಸಾರಿಗೆಯೇ ಕಾರಣವೆಂಬುದನ್ನು ಅವರು ಮುಚ್ಚುಮರೆಯಿಲ್ಲದೆಯೇ ಒಪ್ಪಿದರು. ಹಿಂದಿನ ಕಾಲದಲ್ಲಾದರೆ ಒಂದೆಡೆಯಿಂದ ಇನ್ನೊಂದೆಡೆಗೆ ಕಾಳುಕಡಿಗಳನ್ನು ಸಾಗಿಸಲು ಎತ್ತಿನ ಬಂಡಿ ಅಥವಾ ಕುದುರೆ ಗಾಡಿಗಳನ್ನುಳಿದು ಬೇರೆ ಸಾಧನವೇ ಇರಲಿಲ್ಲ. ಕಾರ್ಯಕ್ಷಮತೆಯ ದೃಷ್ಟಿಯಿಂದ ಇವು ತೀರ ಅಪ್ರಯೋಜಕ ಸಾಧನಗಳು. ಈಗ ಸರಕುಗಳನ್ನು ಆಚೀಚೆ ಸಾಗಿಸಬೇಕೆನ್ನುವವರಿಗೆ ರೇಲ್ವೆ ಬಹು ದೊಡ್ಡದೂ ಸುಲಭವೂ ಆದ ಸಾಧನವಾಗಿ ಪರಿಣಮಿಸಿದೆ. ಈ ಮಾತನ್ನು ಪುಷ್ಟೀಕರಿಸಲು ಮೇ. ಬರ್ನ್ ಮರ್ಡೋಚರೇ ಒದಗಿಸಿದ ತುಲನಾತ್ಮಕ ಅಂಕಿಸಂಖ್ಯೆಗಳನ್ನು

---

*** ಇಂದು ಇದು ಕರ್ನಾಟಕ ಆರ್ಟ್ಸ್ ಕಾಲೇಜ್ ಇರುವ ಕಟ್ಟಡ.**

ನೋಡಬಹುದು. ನವೆಂಬರ್ ೧೯೬೬ ರ ನಾಲ್ಕು ವಾರಗಳಲ್ಲಿ ಈ ಜಿಲ್ಲೆಯಿಂದ ರೇಲ್ವೆಯು ಸಾಗಿಸಿದ ಆಹಾರ ಧಾನ್ಯಗಳ ಪ್ರಮಾಣವನ್ನು ನವೆಂಬರ್ ೧೯೬೫ ರ ನಾಲ್ಕು ವಾರಗಳಲ್ಲಿ ಸಾಗಿಸಲಾದ ಆಹಾರಧಾನ್ಯಗಳ ಪ್ರಮಾಣ ಇಲ್ಲಿದೆ.

| | ೧೯೬೫ | ೧೯೬೬ |
|---|---|---|
| ನವೆಂಬರ್ ೭ಕ್ಕೆ ಕೊನೆಗೊಂಡ ವಾರದಲ್ಲಿ | ೪,೯೨೨ ಟನ್ನುಗಳು | ೮೦,೭೧೪ ಟನ್ನುಗಳು |
| ,, ೧೪ಕ್ಕೆ ,, ,, | ೫,೭೦೬ ,, | ೯೦,೨೨೨ ,, |
| ,, ೨೧ಕ್ಕೆ ,, ,, | ೮,೫೩೬ ,, | ೬೯,೭೭೦ ,, |
| ,, ೨೮ಕ್ಕೆ ,, ,, | ೬,೧೧೨ ,, | ೭೪,೭೩೧ ,, |

ರೇಲ್ವೆಗಳು ಒಂದೊಂದು ಪ್ರದೇಶದಲ್ಲಿ ಈ ರೀತಿ ಕೊರತೆಯನ್ನೂ ಅತಿಪ್ರಸರಣವನ್ನೂ ಉಂಟುಮಾಡುವುದು ನಿಜವಾದರೂ, ನಿಜಕ್ಕೂ ಅಭಾವಪೀಡಿತವಾದ ಬೇರೆ ಕೆಲ ಭಾಗಗಳಿಗೆ ತ್ವರಿತ ಗತಿಯಿಂದ ಧಾನ್ಯವನ್ನು ಸಾಗಿಸಿ ಸಾವಿರಾರು ಜನರನ್ನು ಸಾವಿನ ದವಡೆಯಿಂದ ಉಳಿಸುತ್ತವೆ. ಹೀಗಾಗಿ, ರೇಲ್ವೆ ಸಾರಿಗೆಯಿಂದಾಗಿ ಉಂಟಾಗುವ ಕೊರತೆ, ಬೆಲೆಯೇರಿಕೆಗಳು ತಾತ್ಪೂರ್ತಿಕ ಲಕ್ಷಣಗಳು ಮಾತ್ರ.

ಬ್ರಿಟಿಶ್ ಸಾಮ್ರಾಜ್ಯ ಬಂದ ನಂತರ ಭಾರತದ ಸಾರಿಗೆ ಸಂಪರ್ಕ ವ್ಯವಸ್ಥೆಯಲ್ಲಿ ಭಾರೀ ಬದಲಾವಣೆಗಳಾಗಿವೆ. ಮೊದಲು ಕಾಡುಹಾದಿಗಳೇ ತುಂಬಿದ್ದಲ್ಲಿ ಈಗ ಪಕ್ಕಾ ರಸ್ತೆಗಳು, ರೇಲ್ವೆಗಳು, ತಂತಿ, ಕಾಲುವೆಗಳು ಮುಂತಾದವುಗಳನ್ನು ದೊಡ್ಡ ಪ್ರಮಾಣದಲ್ಲಿ ನಿರ್ಮಿಸಲಾಗಿದೆಯಾದರೂ ಬರಗಾಲ ಬಂದ ಪ್ರತಿ ಸಲವೂ ಸಾವಿರಾರು ಜನರನ್ನು ಬಲಿತೆಗೆದುಕೊಳ್ಳದಿರುವುದಿಲ್ಲ. ಅದಕ್ಕೆ ಕಾರಣವೂ ಸ್ಪಷ್ಟವೇ ಇದೆ. ನಾವಿಲ್ಲಿ ಬಂದಾಗಿನಿಂದ ಇಲ್ಲಿಯ ವರೆಗೆ ಭಾರತದ ಜನಸಂಖ್ಯೆ ಎರಡರಷ್ಟು—ಅಂದರೆ ೧೫ ಕೋಟಿಯಿಂದ ೩೦ ಕೋಟಿಗೆ—ಹೆಚ್ಚಿದೆ. ಆಹಾರ ಧಾನ್ಯಗಳ ಬೆಲೆ ಕೂಡ ಅತಿಯಾಗಿ ಹೆಚ್ಚಿದೆ. ಆಗ ಬರಗಾಲ ಸಮಯದಲ್ಲಿರುತ್ತಿದ್ದ ಬೆಲೆಗಳು ಈಗ ಸಾಮಾನ್ಯ ದಿನಗಳಲ್ಲೇ ಇರುವಂತಾಗಿದೆ.

ರೇಲ್ವೆಗಳು ಬರುವುದಕ್ಕೆ ಮುನ್ನ ಈ ದೇಶದಲ್ಲಿ ಆಹಾರಧಾನ್ಯಗಳ ಬೆಲೆ ಒಂದು ಸ್ಥಳದಿಂದ ಅದನ್ನು ೧೦೦ ಮೈಲು ಸಾಗಿಸುವಷ್ಟರಲ್ಲಿ ಎರಡರಷ್ಟಾಗುತ್ತಿತ್ತು. ಆದರೆ ರೇಲ್ವೆ ಸಾರಿಗೆ ಬಂದ ನಂತರ ಸಾರಿಗೆಯ ವೆಚ್ಚ ಸೇರಿ ಧಾನ್ಯದ ಬೆಲೆ ಎರಡಷ್ಟಾಗಬೇಕಾದರೆ ೬,೦೦೦ ಮೈಲಿಗಿಂತ ಹೆಚ್ಚು ಸಾಗಿಸಬೇಕಾಗುತ್ತದೆ.

*

ವಿಜಾಪುರದಲ್ಲಿ ಬರಗಾಲ ತೀವ್ರವಾಗಿದೆಯೆಂಬ ಬಗ್ಗೆ ಆಗಲೇ ಸಾಕಷ್ಟು ಕೇಳಿದ್ದೆ. ಅದನ್ನು ಕಣ್ಣಾರೆ ಕಾಣುವ ಮುನ್ನ ನಾನೇರಿದ ರೈಲುಗಾಡಿ ನನ್ನನ್ನು ಧಾರವಾಡ ಜಿಲ್ಲೆಯ ಫಲವತ್ತಾದ ನಾಡಿನಲ್ಲಿಂದ ಕರೆದೊಯ್ಯುತ್ತಿದ್ದಾಗ ಜನ ಎಡ ಬಲದ ಹೊಲಗಳಲ್ಲಿ ಹತ್ತಿಯನ್ನು ಬಿಡಿಸುವುದರಲ್ಲಿ ತೊಡಗಿದ್ದನ್ನು ಕಂಡೆ. ಹತ್ತಿಯ ಬೆಳೆ ಈ ಸಲ ಸಾಮಾನ್ಯ ವರ್ಷಕ್ಕಿಂತಲೂ ಬಹಳ ಹೆಚ್ಚಾಗಿ ಬರಲಿದೆಯೆಂದು ಜನ ಹೇಳುತ್ತಿದ್ದರು. ಇಲ್ಲಿಯ ಹತ್ತಿಗೆ ಮುಂಬಯಿಯ ಅರಳೆ ಪೇಟೆಯಲ್ಲಿ ವಿಶೇಷ ಬೇಡಿಕೆಯಿದೆ. ಇದರ ಬೆಲೆಯನ್ನು ಪ್ರತ್ಯೇಕವಾಗಿಯೇ ಸಾರಲಾಗುತ್ತಿದೆ. ಇದನ್ನು ಮುಖ್ಯವಾಗಿ ಗುಜರಾಥ ಮತ್ತು ಮಧ್ಯ ಭಾರತದ ಉದ್ದ ಎಳೆಯ ಅರಳೆಯೊಂದಿಗೆ ಬೆರೆಸಲು ಉಪಯೋಗಿಸಲಾಗುತ್ತದೆ. ಗಾಡಿ ವಿಜಾಪುರ ಜಿಲ್ಲೆಯನ್ನು ಸೇರಿ ಕೆಲ ಮೈಲುಗಳನ್ನು ಕ್ರಮಿಸುವಷ್ಟರಲ್ಲಿಯೇ ಚಿತ್ರ ಸಂಪೂರ್ಣ ಬದಲಾಯಿತು. ಮೈಲು ಮೈಲುಗಳ ವರೆಗೂ ದೃಷ್ಟಿ ಹರಿಯುವಷ್ಟು ದೂರದ ತನಕವೂ ಬಯಲೇ ಬಯಲು. ಹಸಿರಿನ ದರ್ಶನವೇ ಕಣ್ಣಿಗಾಗದಂಥ ಬೆಂಗಾಡು. ಈ ಮೊದಲು ಅಲ್ಲಲ್ಲಿ ಎಡಬಲಕ್ಕೆ ಕೆಲವಾದರೂ ಗಿಡ ಮರಗಳು ಕಾಣುತ್ತಿದ್ದರೆ ಈಗ ಅಪರೂಪಕ್ಕೆಂಬಂತೆ ಎಲ್ಲೋ

ಒಂದೆರಡು ಈಚಲ ಮರಗಳು ಮಾತ್ರ ನೋಡ ಸಿಕ್ಕುತ್ತಿದ್ದುವು. ನೀರಿಲ್ಲದ ಈ ನೆಲದಲ್ಲಿ ಜೀವ ಹಿಡಿದುಳಿಯುವ ಶಕ್ತಿ ಬಹುಶಃ ಇವಕ್ಕೆ ಮಾತ್ರ ಉಂಟೆಂದು ತೋರುತ್ತದೆ.

ವಿಜಾಪುರ ಜಿಲ್ಲೆ ಪೂರ್ಣತಃ ಮಳೆಯನ್ನೇ ಅವಲಂಬಿಸಿರುವ ಪ್ರದೇಶ. ಇದಕ್ಕೆ ಕಾರಣ ಇಲ್ಲಿನ ಭೂಮಿ ನೀರಾವರಿಗೆ ತಕ್ಕುದಲ್ಲ. ಒಂದು ವೇಳೆ ಹಾಗಿಲ್ಲವೆಂದು ಗೃಹೀತವಾಗಿಟ್ಟುಕೊಂಡರೆ ಕೂಡ ಈ ಜಿಲ್ಲೆಯಲ್ಲಿರುವ ಹೇಳಿಕೊಳ್ಳುವಂಥ ನದಿಯೆಂದರೆ ಒಂದೇ ಒಂದು (ಕೃಷ್ಣಾ). ಅದಕ್ಕೂ ಮನ್ಸೂನ್ ಮಳೆಯೇ ಗತಿ. ಒಳ್ಳೆ ಸಮೃದ್ಧ ವರ್ಷದಲ್ಲಿ ಕೂಡ ಈ ಜಿಲ್ಲೆಯಲ್ಲಾಗುವ ಮಳೆ ೧೫ ಇಂಚುಗಳನ್ನು ಸಾಮಾನ್ಯವಾಗಿ ಮಿಕ್ಕುವುದಿಲ್ಲ. ಕಳೆದ ಮಳೆಗಾಲದಲ್ಲಿ ಇಲ್ಲಾದ ಮಳೆ ಬರಿ ಐದಿಂಚಾದ್ದರಿಂದಲೇ ಮುಂಗಾರಿ ಬೆಳೆ ಸಂಪೂರ್ಣ ನಾಶವಾಯಿತು.

ವಿಜಾಪುರ ಜಿಲ್ಲೆಯ ಎರೆ ಭೂಮಿಯಲ್ಲಿ ಆಯ್ದ ಕೆಲವೇ ಸ್ಥಳಗಳಲ್ಲಿ ಭಾವಿ ತೋಡಿ ಕೆಲ ಮಟ್ಟಿಗೆ ನೀರಾವರಿ ಸಾಧ್ಯವಾದರೂ ದೊಡ್ಡ ಪ್ರಮಾಣದ ನೀರಾವರಿ ಅಸಾಧ್ಯವೆನಿಸುತ್ತದೆ. ಮನ್ಸೂನ್ ಮಳೆಗಳು ಸರಿಯಾಗಿ ಆದರೆ ಆ ವರ್ಷ ಉತ್ತಮ ಫಸಲು ಬರುವುದುಂಟು. ಆದರೆ ಮಳೆ ಸರಿಯಾಗಿ ಬಾರದೆ ಹೋದರೆ ಉಪವಾಸವೇ ಗತಿಯೆಂಬಷ್ಟು ಪರಿಸ್ಥಿತಿ ಉಲ್ಬಣಗೊಳ್ಳುತ್ತದೆ. ಭಾರತ ಸರಕಾರವು ಈ ದೇಶದಲ್ಲಿ ಮೇಲಿಂದ ಮೇಲೆ ಬರಗಾಲಕ್ಕೊಳಗಾಗುವ ಕ್ಷೇತ್ರಗಳ ಸಮೀಕ್ಷೆ ಮಾಡಿದ್ದು ಮುಂಬಯಿಯ ಪ್ರಾಂತದಲ್ಲಿ ವಿಜಾಪುರ ಜಿಲ್ಲೆಗೇ ಅಗ್ರಸ್ಥಾನ.

ಇಂಥ ಪರಿಸ್ಥಿತಿಗೆ ಕಳಸವಿಡುವಂತೆ ಇಲ್ಲಿಯ ರೈತರು ಶಾಶ್ವತವಾಗಿಯೇ ಬನಿಯಾಗಳ ಭದ್ರ ಮುಷ್ಟಿಯಲ್ಲಿರುವುದು ಒಂದು ವೈಶಿಷ್ಟ್ಯ.

ಆದಿಲಶಾಹಿಗಳ ರಾಜಧಾನಿಯಾಗಿದ್ದ ವಿಜಾಪುರ ಸತ್ತವರ ನಗರ. ಇಲ್ಲಿನ ಮುಖ್ಯ ಆಕರ್ಷಣೆಯಾದ ಗೋಲಗುಮ್ಮಟ ಕೂಡ ಒಬ್ಬ ಅರಸನ—ಈ ವಂಶದ ಏಳನೆಯ ಅರಸ ಮುಹಮ್ಮದ ಆದಿಲಶಾಹನ–ಗೋರಿಯೆ. ೧೨೭ ಅಡಿ ವ್ಯಾಸವುಳ್ಳ ಇವರ ಗುಮ್ಮಟ ಜಗತ್ತಿನಲ್ಲಿ ಎರಡನೆಯ ಅತಿ ದೊಡ್ಡದು. ರೋಮಿನ ಸೇಂಟ್ ಪೀಟರ್ಸ್ ಕೆಥೆಡ್ರಲ್‌ನ ಗುಮ್ಮಟ ಎಲ್ಲಕ್ಕೂ ದೊಡ್ಡದು (೧೩೯ ಅಡಿ ವ್ಯಾಸ). ಲಂಡನ್ನಿನ ಸೇಂಟ್ ಪಾಲ್ಸ್ ಕೆಥೆಡ್ರಲ್‌ನ ಗುಮ್ಮಟದ ವ್ಯಾಸ ಬರಿ ೧೦೮ ಅಡಿ.

ಒಮ್ಮೆ ವೈಭವದಿಂದ ಮೆರೆದು ಹಾಳಾದ ನಗರಗಳಂತೆಯೆ ವಿಜಾಪುರ ಕೂಡ ಮಳೆಗಾಲದಲ್ಲಿ ಹೆಚ್ಚು ಕಡಿಮೆ ಅನಾರೋಗ್ಯಕರವಾಗಿಯೇ ಇರುತ್ತದೆ. ೧೮೭೬–೭೭ರ ಭಾರೀ ಬರಗಾಲದಲ್ಲಿ (ಡವಗೀ ಬರ) ವಿಜಾಪುರ ಮತ್ತು ಸುತ್ತಲಿನ ಭಾಗದಲ್ಲಿ ೫೦,೦೦೦ ಜನ ಉಪವಾಸದಿಂದ ಸತ್ತರು.

ವಿಜಾಪುರ ನಿಲ್ದಾಣದಿಂದ ಡೆಪ್ಯುಟಿ ಕಲೆಕ್ಟರ್ ನಿವಾಸಕ್ಕೆ–ಆನಂದ ಮಹಾಲ್; ಇದು ಕೂಡ ಒಬ್ಬ ಅರಸ ಸುಲ್ತಾನ ಮುಹಮ್ಮದನ ಗೋರಿಯೆ–ನಡೆದಿರುವಂತೆಯೆ ಈ ಸಲದ ಬರಗಾಲದ ಭೀಕರ ಪರಿಣಾಮ ಕಣ್ಣಿಗೆ ಬಿತ್ತು. ಎಡಬಲದ ಹೊಲಗಳಲ್ಲಿ ಇದ್ದು ಬಿದ್ದ ಹುಲ್ಲು ಮೇಯುತ್ತಿದ್ದ ದನಕರುಗಳನ್ನು ನೋಡಿದರೆ ಕರುಳೇ ಕಿತ್ತು ಬರುವಂತಾಯಿತು. ಅವೆಲ್ಲ ಎಲುಬಿನ ಗೂಡುಗಳೇ ಆಗಿದ್ದುವು. ಡೆಪ್ಯುಟಿ ಕಲೆಕ್ಟರನೊಂದಿಗೆ ಮಾತಾಡುತ್ತಿದ್ದಂತೆ ಈ ಸಲದ ಬರಗಾಲದಲ್ಲಿ ಈ ಜಿಲ್ಲೆಯ ದನ-ಕರುಕರುಗಳು ಭಾರಿ ಪ್ರಮಾಣದಲ್ಲಿ ಬಲಿಯಾಗಿವೆಯೆಂದು ತಿಳಿದುಬಂತು. ಆದರೆ ಆಶ್ಚರ್ಯವೆಂದರೆ ಆಡುಗಳು ಮಾತ್ರ ಇಂಥ ಭೀಕರ ಕ್ಷಾಮದಿಂದ ಬಾಧಿಸಲ್ಪಟ್ಟಂತೆ ತೋರುವುದಿಲ್ಲ. ಜಿಲ್ಲೆಯ ಬಹಳಷ್ಟು ದನಗಳನ್ನು ಕೊಲ್ಲಾಪುರ ಸಂಸ್ಥಾನಕ್ಕೆ ಕಳಿಸಲಾಗಿದೆಯಂತೆ. ಈಗ ಸಿರಿವಂತರ ರೈತರು ಮಾತ್ರ ತಮ್ಮ ದನಕರುಗಳನ್ನುಳಿಸಿಕೊಳ್ಳಲು ಕೆಲ ಮಟ್ಟಿಗೆ ಸಮರ್ಥರಾಗಿದ್ದಾರೆ; ಬಡವರ ಪಶುಸಂಪತ್ತು ಪೂರ್ಣ ನಾಶವಾಗಿದೆ. ಈಚಲು ಗರಿಗಳನ್ನು ಣಿಸಿ ದನಕರುಗಳನ್ನು ಉಳಿಸಿಕೊಳ್ಳುವ ಪ್ರಯತ್ನ ನಡೆದಿದೆ. ವಿಜಾಪುರದ ಸುತ್ತಲೂ ಹರಿಯಾಳೀ ಹುಲ್ಲಿನ ಬೇರುಗಳನ್ನು ಕಿತ್ತು ದನಗಳಿಗೆ ಹಾಕಿ ಅವುಗಳನ್ನುಳಿಸಲು ಪ್ರಯತ್ನವೂ ನಡೆಯಿತು. ಆದರೆ ಇಲ್ಲಿ ಈ ಹುಲ್ಲಿನ ಬೇರುಗಳ ಅವಶೇಷ ಸಹ ಈಗ ಉಳಿದಿಲ್ಲವೆಂದು ನನಗೆ ಹೇಳಲಾಯಿತು.

ಸರಕಾರ ಬೆಳಗಾಂವಿ, ಧಾರವಾಡ ಜಿಲ್ಲೆಗಳಿಂದ ಮೇವು ತರಿಸಿಕೊಳ್ಳಲು ಇದೀಗ ಪ್ರಾರಂಭ ಮಾಡಿದೆ– ಆದರೆ ಸಾಕಷ್ಟು ಪ್ರಾಣಹಾನಿಯ ನಂತರವೆ. ಸಪ್ಟಂಬರ್, ಅಕ್ಟೋಬರ್ ತಿಂಗಳುಗಳಲ್ಲಿ ನೆರೆಯ ಜಿಲ್ಲೆಗಳಲ್ಲಿ ಮೇವು ಕಡಿಮೆ ದರಕ್ಕೆ ದೊರೆಯುತ್ತಿದ್ದಾಗಲೇ ಈ ಕ್ರಮ ಕೈಗೊಂಡಿದ್ದರೆ ಸಾವಿರಾರು ದನಕರುಗಳನ್ನು ಉಳಿಸಿಕೊಳ್ಳಬಹುದಿತ್ತು. ಆದರೆ ಸರಕಾರಿ ಯಂತ್ರದ ಗಾಲಿಗಳು ಯಾವಾಗಲೂ ಆಮೆಯ ಗತಿಯಿಂದಲೇ ತಿರುಗುತ್ತವೆ. ಈಗ ಸುಮಾರು ೨೦೦ ಮೈಲು ದೂರವಿರುವ ಬೆಳಗಾಂವಿ, ಧಾರವಾಡಗಳಲ್ಲಿ ಮೇವಿನ ಬೆಲೆ ಐದಾರು ರೂಪಾಯಿಗಳಿಗೆ ಟನ್ ಇದೆ. ಈ ಜಿಲ್ಲೆಗೆ ತರುವ ಹೊತ್ತಿಗೆ ಅದಕ್ಕಾಗುವ ವೆಚ್ಚ ಸುಮಾರು ೧೧ ರೂಪಾಯಿಗಳಿಗೆ ಬರುತ್ತಿದೆ. ಈಗ ವಿಜಾಪುರದಲ್ಲಿ ಮೇವಿನ ದರ ಟನ್ನಿಗೆ ೩೪ ರೂಪಾಯಿಗಳ ಒಳಹೊರಗಿದೆ.

ನಾನು ವಿಜಾಪುರದಲ್ಲಿ ಕಾಲಿರಿಸಿದ್ದು ಸಂತೆಯ ದಿನ. ಸುತ್ತಲಿನ ಹಳ್ಳಿಗಳಿಂದೆಲ್ಲ ಜನ ವ್ಯಾಪಾರಕ್ಕೆ ಬರುವರೆಂದರಿತ ನಾನು ಪೇಟೆಯಲ್ಲಿ ಅಡ್ಡಾಡಿ ಪರಿಸ್ಥಿತಿಯನ್ನು ಅರಿಯಲೆತ್ನಿಸಿದೆನು. ಹಿಂದಿನ ವಾರ ಸಂತೆಗೆ ಬಂದ ೬೦೦ ದನಗಳಲ್ಲಿ ಸುಮಾರು ೨೦೦ ವ್ಯಾಪಾರವಾಗಿದ್ದವೆಂದೂ ಈ ವಾರ ಬಂದ ಸುಮಾರು ೫೦೦ ರಲ್ಲಿ ಆಗಲೆ ೩೭೫ನ್ನು ಜನ ಕೈಗೆ ಬಂದ ಬೆಲೆಗೆ ಮಾರಿಕೊಂಡು ಬಿಟ್ಟಿದ್ದಾರೆಂದೂ ತಿಳಿದುಬಂತು. ಇಲ್ಲಿಯ ಮುಖ್ಯ ಆಹಾರಧಾನ್ಯವಾದ ಜೋಳದ ಬೆಲೆ ಈಗ ಉತ್ತಮ ತರಗತಿಯದು ರೂಪಾಯಿಗೆ ೨೧ ಪೌಂಡುಗಳಷ್ಟಿದ್ದರೆ, ಕನಿಷ್ಠ ತರಗತಿಯದು ರೂಪಾಯಿಗೆ ೨೮ ಪೌಂಡುಗಳು. ೧೯೭೬-೭೭ರ ಮಾನದಿಂದ ನೋಡಿದರೆ ಈ ಸಲ ಜಿಲ್ಲೆಯಲ್ಲಿ ಧಾನ್ಯ ಸಂಗ್ರಹ ಚೆನ್ನಾಗಿಯೇ ಇದೆಯೆಂದು ಹೇಳಲಾಗುತ್ತಿದೆ. ಇದರಿಂದ ಉಪವಾಸದಿಂದ ಸಾಯುವವರ ಸಂಖ್ಯೆ ಈ ಸಲ ಬಹಳ ಕಡಿಮೆಯಾಗುವುದೆಂದು ಅಂದಾಜಿದೆ. ಜಿಲ್ಲೆಯ ಸುಮಾರು ೮ ಲಕ್ಷ ಜನರಲ್ಲಿ ೫೦,೦೦೦ ಜನ ಆಗಲೇ ಬರಗಾಲ ಪರಿಹಾರ ಕಾರ್ಯಗಳಲ್ಲಿ ದುಡಿಯುತ್ತಿದ್ದಾರೆ. ಬರಗಾಲ ನಿರೀಕ್ಷಿತವಾಗಿರುವಾಗ ಪರಿಹಾರ ಕಾರ್ಯವನ್ನು ಆದಷ್ಟು ಬೇಗ ಪ್ರಾರಂಭಿಸಿದರೆ ವಿನಾಕಾರಣ ಪ್ರಾಣಹಾನಿ ತಪ್ಪುತ್ತದೆ. ಅಲ್ಲದೆ ಭಾರತೀಯರಲ್ಲಿ ನಾನು ಕಂಡ ಒಂದು ವಿಚಿತ್ರವೆಂದರೆ ತಮ್ಮ ಪರಿಸ್ಥಿತಿ ತುಸುವೇ ಕೆಟ್ಟರೂ ಕೂಡ ಅವರು ಒಮ್ಮೆಲೆ ಪೌಹಾರಿ ಕೆಲಸವನ್ನೋ ಅನ್ನವನ್ನೋ ಹುಡುಕಿಕೊಂಡು ಊರೂರು ಅಲೆಯತೊಡಗುತ್ತಾರೆ. ನೆಲೆಯಿಲ್ಲದೆ, ಗೊತ್ತುಗುರಿಯಿಲ್ಲದೆ ಅವರು ಇಂತು ಅಲೆಯುವುದರಿಂದ ಅವರಿಗೆ ಸರಿಯಾದ ಪರಿಹಾರ ನೀಡುವುದು ಕಷ್ಟಸಾಧ್ಯವಾಗಿಬಿಡುತ್ತದೆ. ಇದನ್ನು ತಪ್ಪಿಸುವುದಕ್ಕಾಗಿ ಪರಿಹಾರ ಸೌಕರ್ಯ ಹಳ್ಳಿ ಹಳ್ಳಿಗೂ ಸಕಾಲದಲ್ಲಿ ತಲುಪುವುದವಶ್ಯ.

ಈಗಾಗಲೆ ವಿಜಾಪುರ ಜಿಲ್ಲೆಯಲ್ಲಿ ಧಾನ್ಯದ ಕಳವಿನ, ಲೂಟಿಯ ಅನೇಕ ಪ್ರಕರಣಗಳು ಸಂಭವಿಸಿದ್ದು ೧೨೦ ಆಪಾದಿತರು ವಿಚಾರಣೆಯನ್ನೆದುರುನೋಡುತ್ತ ಬಂಧನದಲ್ಲಿದ್ದಾರೆ.

ತೀರ ಕೈಲಾಗದ ವೃದ್ಧರೂ ಬಡವರೂ ಅದ-ವರಿಗಾಗಿ ತೆರೆಯಲಾದ ಕೇಂದ್ರವೊಂದಕ್ಕೆ ಹೋಗಿದ್ದೆ. ಅಲ್ಲಿನ ಸುಮಾರು ೬೦ ನಿವಾಸಿಗಳಲ್ಲಿ



“...ಅಭಾವಪೀಡಿತ ಪ್ರದೇಶಗಳಿಗೆ ಭೇಟಿ ಮುಗಿಸಿ ಇದೀಗ ಬಂದೆ... ಅಜೀರ್ಣವಾಗಿಬಿಟ್ಟಿದೆ, ಡಾಕ್ಟರ್...”

ಮೂವರನ್ನುಳಿದು ಎಲ್ಲರೂ ಸಂತೆಯಲ್ಲಿ ಭಿಕ್ಷೆ ಬೇಡಲು ಹೋಗಿದ್ದರು. ಇಲ್ಲಿದ್ದ ಮೂವರಲ್ಲಿ ಒಬ್ಬ ಇಲ್ಲಿಂದ ೩೦೦ ಮೈಲು ಉತ್ತರಕ್ಕೆ ಮಧ್ಯಭಾರತದಲ್ಲಿರುವ ಅಮರಾವತಿಯಿಂದ ಗುಳೆ ಬಂದವನು. ಅವನ ಅವಸ್ಥೆಯನ್ನು ನೋಡಿದರೆ ಅವನು ಇಲ್ಲಿಯೇ ಅನಾಥನಾಗಿಯೆ ಕೊನೆಯುಸಿರೆಳೆಯುವನೆಂದು ನನಗೆ ಮನದಟ್ಟಾಯಿತು. ಅವನು ತನ್ನೂರು ಬಿಟ್ಟು ಬಂದಿರದಿದ್ದರೆ ಕನಿಷ್ಠ ತನ್ನವರ ಮಧ್ಯದಲ್ಲೇ ಕಣ್ಣು ಮುಚ್ಚುತ್ತಿದ್ದನಲ್ಲ ಎನಿಸಿತು.

ವಿಜಾಪುರದ ಜನತೆಯ ಸಾಮಾನ್ಯ ದೇಹಸ್ಥಿತಿ ಇರಬೇಕಾದುದಕ್ಕಿಂತ ತೀರ ಹೀನ ಮಟ್ಟದ್ದಿದೆ. ಹೆಚ್ಚಿನವರೆಲ್ಲ ಆಹಾರಾಭಾವದಿಂದ ಪೀಡಿತರಂತೆಯೇ ಕಂಡಿತು. ಇಲ್ಲಿನ ಹೆಣ್ಣು ಮಕ್ಕಳ ಕೈಗಳಲ್ಲಿ ನಾನು ಉಳಿದೆಡೆ ನೋಡಿದಂತೆ ಬೆಳ್ಳಿ ಬಂಗಾರದ ಯಾವುದೇ ಬಳೆಗಾಗಲಿ, ಆಭರಣಗಳಾಗಲಿ ನನಗೆ ಕಂಡುಬರಲಿಲ್ಲ. ಅಲ್ಲಲ್ಲಿ ವಿಚಾರಿಸಿದಾಗ ಅವೆಲ್ಲ ಸ್ಥಳೀಯ ಮಾರವಾಡಿಗಳ ವಶವಾಗಿ ಹಳೆಯ ಮಾತಾಯಿತೆಂದು ತಿಳಿದು ಬಂತು. ಭಾರತೀಯ ಸ್ತ್ರೀ ಈ ಒಡವೆಗಳನ್ನು ತನ್ನ ಅತ್ಯಮೂಲ್ಯ ಆಸ್ತಿಯೆಂದು ಭಾವಿಸುತ್ತಾಳೆ. ಅವುಗಳನ್ನು ಬಿಟ್ಟುಕೊಡಬೇಕಾಗಿ ಬಂದರೆ, ಅದು ತೀರ ಅನಿವಾರ್ಯ ಪರಿಸ್ಥಿತಿ ಒದಗಿದಾಗಲೇ. ಇದರ ಮೇಲಿಂದಲೇ ಇಲ್ಲಿಯ ಜನರನ್ನಾವರಿಸಿದ ಬಡತನದ ಗಂಭೀರತೆಯನ್ನು ಊಹಿಸಬಹುದು.

ಮರುದಿನ ಮುಂಜಾನೆ ವಿಜಾಪುರದಿಂದ ಸುಮಾರು ಎಂಟು ಮೈಲು ದೂರದಲ್ಲಿರುವ ತೊರವಿಯಲ್ಲಿ ಪ್ರಾರಂಭಿಸಿರುವ ಪರಿಹಾರ ಕೇಂದ್ರವನ್ನು ನೋಡಿಬರಲೆಂದು ಕಲೆಕ್ಟರನೊಂದಿಗೆ ಹೊರಟೆ. ಅರುಣೋದಯದ ಸಮಯಕ್ಕೆದ್ದು ನಡೆದರೆ ದಾರಿಗುಂಟ ಅಲ್ಲಲ್ಲಿ ಜನ ಗುಂಪು ಗುಂಪಾಗಿ ಕಲ್ಲು ಒಡೆಯುತ್ತಿದ್ದುದು ಕಣ್ಣಿಗೆ ಬೀಳುತ್ತಿತ್ತು. ಕೇಂದ್ರದ ಸಮೀಪ ಬಂದಂತೆ ಸಂಖ್ಯೆ ಹೆಚ್ಚುತ್ತ ನಡೆಯಿತು. ಕೇಂದ್ರ ೫ರಿಂದ ೬ ಸಾವಿರ ಜನಕ್ಕೆ ಆಶ್ರಯ ನೀಡಿದೆ.

ಅಲ್ಲಿಂದ ಮುಂದೆ ನಡೆದಾಗ ಒಂದೆಡೆ ಕೆಲವು ಹೆಂಗಳೆಯರು ನಮ್ಮನ್ನು ನೋಡಿದೊಡನೆಯೆ ದೇವರೇ ಪ್ರತ್ಯಕ್ಷನಾದನೇನೋ ಎಂಬಂತೆ ಧೂಳು ತುಂಬಿದ ಆ ರಸ್ತೆಯಲ್ಲೇ ನಮಗೆ ಸಾಷ್ಟಾಂಗವೆರಗಿದರು. ತಮ್ಮ ಮೈಯನ್ನೂ ಉಟ್ಟ ಬಟ್ಟೆಯನ್ನೂ ಹುಡಿಯಲ್ಲದ್ದಿ ತೆಗೆಯಬೇಕಾದರೆ ಏನೋ ಭಾರಿ ಸಮಸ್ಯೆಯೇ ಅವರಿಗೆದುರಾಗಿರಬೇಕೆಂದೆನಿಸಿ ವಿಚಾರಿಸಿದಾಗ ತಿಳಿದು ಬಂದುದಿಷ್ಟು. ಅವರೆಲ್ಲ ಒಂದೇ ಹಳ್ಳಿಯವರಾದ್ದರಿಂದ ಒಂದೇ ಗುಂಪಿನಲ್ಲಿ ಕೆಲಸ ಮಾಡಲು ಆತುರರಾಗಿದ್ದರು. ಆದರೆ 'ಮೆಹರಿರ್' (ಮೇಲ್ವಿಚಾರಕ) ಅವರನ್ನು ರಸ್ತೆಗುಂಟ ಅಲ್ಲಿಷ್ಟು ಇಲ್ಲಿಷ್ಟು ಜನರನ್ನು ಹಂಚಿಹಾಕಿದ್ದ. ಕಲೆಕ್ಟರ್ ಈ ಹೆಂಗಳೆಯರ ತೊಂದರೆ ನಿವಾರಿಸಲೆಂದು ಅವರೆಲ್ಲರನ್ನೂ ಒಂದೇ ಕಡೆಗೆ ಕೆಲಸಕ್ಕಿಡುವಂತೆ ಆಜ್ಞಾಪಿಸಿದನು.

ತೊರವಿಯ ಪರಿಹಾರ ಕೇಂದ್ರ ನೂರಾರು ಡೇರೆಗಳ ಸಮೂಹವೆನ್ನಬೇಕು. ತುಸು ಎತ್ತರದಲ್ಲಿದ್ದ ಬಯಲಲ್ಲಿ ಒಂದು ಚಿಕ್ಕ ಹಳ್ಳಿಯಂತೆಯೆ, ಆದರೆ ಸಂಯೋಜಿತ ರಸ್ತೆಗಳೊಂದಿಗೆ, ರೂಪಿಸಲಾಗಿತ್ತು. ಅಲ್ಲಿ ಸಮೀಪದಲ್ಲಿಯೇ ಒಳ್ಳೆಯ ನೀರಿನ ಸಂಗ್ರಹವೂ ಇತ್ತು. ಜನರನ್ನು ಅವರವರ ಜಾತಿಯನ್ನಾಧರಿಸಿಯೊ ಅವರವರ ಊರಿನ ಆಧಾರದ ಮೇಲೆಯೊ ಒಂದೊಂದೆಡೆ ಇರುವಂತೆ ಯೋಜಿಸಲಾಗಿತ್ತು. ಜನರೆಲ್ಲ ಕೆಲಸಕ್ಕೆ ಹೋಗಿದ್ದರಿಂದ ಕೇಂದ್ರ ನಿರ್ಜನವಾದಂತೆಯೇ ಇತ್ತು. ಸಮೀಪದಲ್ಲೇ ಇದ್ದ ಆರೋಗ್ಯ ಕೇಂದ್ರಕ್ಕೆ ಹೋದೆವು. ಭಾರತೀಯ ವೈದ್ಯನೊಬ್ಬ ಅದನ್ನು ನೋಡಿಕೊಳ್ಳುತ್ತಿದ್ದ. ಅವನನ್ನು ಜನ 'ಕಾಲಾ' ಡಾಕ್ಟರ್ ಎಂದು ಕರೆಯುತ್ತಿದ್ದರು. ನನಗೆ ಅಲ್ಲಿಯ ರೋಗಿಗಳಲ್ಲಿ ಚಿಕ್ಕ ಬಾಲಕನೊಬ್ಬ ತೀರ ಸೋತುಹೋಗಿರುವಂತೆ ಕಾಣಿಸಿತು. ಅದೊಂದು ಪುಟ್ಟ ಅಸ್ಥಿಪಂಜರ! ಬದಿಯಲ್ಲೇ ಅವನ ತಂದೆ ತಾಯಿಗಳೂ ಇದ್ದರು. ತಂದೆ ಕಂಬಳಿಯಲ್ಲಿ ಹುದುಗಿಕೊಂಡು ಮುದುಡಿ ಕುಳಿತಿದ್ದ. ಎದ್ದು ನಿಲ್ಲಲು ಕೂಡ ಅವನ ಮೈಯಲ್ಲಿ ತ್ರಾಣವೇ ಉಳಿದಂತಿರಲಿಲ್ಲ. ವಿಜಾಪುರದಿಂದ ಉತ್ತರಕ್ಕೆ ನಾಲ್ವತ್ತು ಮೈಲು ದೂರದ ಹಳ್ಳಿಯವರಂತೆ, ಇವರೆಲ್ಲ. ಒಮ್ಮೆ ಅವನೂ ಹಲವು ಎಕರೆ ಭೂಮಿಯನ್ನೂ ಎರಡು ಜತೆ ಎತ್ತುಗಳನ್ನೂ ಹೊಂದಿದ್ದ

ನಂತೆ. ಆದರೆ ಪ್ರತಿಕೂಲ ಪರಿಸ್ಥಿತಿಯಿಂದಾಗಿ ಕಳೆದೆರಡು ವರ್ಷಗಳಲ್ಲಿ ಈ ಎಲ್ಲವೂ ಅವನ ಕೈಬಿಟ್ಟು ಹೋಗಿ ಕೊನೆಗೆ ನಿರ್ಗತಿಕರಂತೆ ಉದ್ಯೋಗವನ್ನರಸಿ ಅವನು ದಿಕ್ಕುಗಾಣದೆ ಗುಳೇ ಹೊರಟನಂತೆ, ತನ್ನ ಹೆಂಡತಿ ಮತ್ತು ಎರಡು ಮಕ್ಕಳೊಂದಿಗೆ. ಒಬ್ಬ ಮಗ ದಾರಿಯಲ್ಲೇ ಅಸು ನೀಗಿದನಾದರೆ ಇನ್ನೊಬ್ಬ ಮಗ ಈಗ ಇಲ್ಲಿ ಅದೇ ದಾರಿಯಲ್ಲಿದ್ದಾನೆ. ಈ ಗಂಡ-ಹೆಂಡಿರು ಕೂಡ ಹೆಚ್ಚು ದಿನ ಬದುಕಬಹುದೆಂದು ನನಗಂತೂ ಅನಿಸಲಿಲ್ಲ. ಈ ದುರ್ದೈವಿಗಳಿಗಾಗಿ ಮರಮರ ಮರುಗಿದೆವಾದರೂ ಬೇರೆ ದಾರಿ ಕಾಣದೆ ಕಲೆಕ್ಟರ್ 'ಕಾಳಾ' ಡಾಕ್ಟರನಿಗೆ, ಈ ಬಡ ಕುಟುಂಬಕ್ಕೆ ಎಲ್ಲ ವೈದ್ಯಕೀಯ ನೆರವು ನೀಡಿ, ಇವರೆಲ್ಲರ ಇನ್ನುಳಿದ ದಿನಗಳಾದರೂ ತುಸು ನೆಮ್ಮದಿಯಿಂದ ಕಳೆಯುವಂತೆ ವ್ಯವಸ್ಥೆ ಮಾಡಲು ಅಪ್ಪಣೆ ಮಾಡಿದನು.

ಅಲ್ಲಿಂದ ಮುಂದೆ ನಾಲ್ಕೆಂಟು ಹೊರಸುಗಳಿದ್ದ ಇನ್ನೊಂದು ವಿಭಾಗಕ್ಕೆ ತೆರಳಿ ಅಲ್ಲಿ ಹೊಸತಾಗಿ ಹುಟ್ಟಿದ ಮಕ್ಕಳ ದರ್ಶನಕ್ಕೆ ನಡೆದೆವು. ಮೊದಲು ಕಣ್ಣಿಗೆ ಬಿದ್ದುದು ಅಂದೇ ಭೂಮಿಗಿಳಿದು ಬಂದ ಒಂದು ಪುಟ್ಟ ಮಗು ಮತ್ತು ಅದರ ಮುಸಲ್ಮಾನ ತಾಯಿ. ಬರಗಾಲ ಪರಿಸ್ಥಿತಿಯನ್ನೆದುರಿಸುವುದಕ್ಕೆಂದು ಸರಕಾರ ಸಿದ್ಧಪಡಿಸಿದ 'ಫ್ಯಾಮಿನ್ ಕೋಡ್'ನಲ್ಲಿ ಪರಿಹಾರ ಕೇಂದ್ರಗಳಲ್ಲಿ ತಾಯಿಯಾಗುವವರಿಗೆ ಮತ್ತು ಹುಟ್ಟಿದ ಮಗುಗಳಿಗೆ ನೆರವಾಗುವ ಬಗ್ಗೆ ಯಾವುದೇ ವ್ಯವಸ್ಥೆ ಮಾಡುವ ಕುರಿತು ಅವಕಾಶ ಇರಲಿಲ್ಲವಂತೆ. ಅಂಥವರಲ್ಲೂ ದಾರಿಯನ್ನು ಹುಡುಕಿಕೊಂಡು ತಾವು ಶ್ರಮ ಕೈಕೊಂಡಿರುವುದಾಗಿ ಇಲ್ಲಿಯ ಅಧಿಕಾರಿಗಳು ಹೇಳಿಕೊಂಡರು! ಇನ್ನೊಂದೆಡೆ ಲಂಬಾಣಿ ಯುವತಿಯೊಬ್ಬಳು ಮೂರು ದಿನಗಳ ಹಿಂದೆ ತಾಯಿಯಾಗಿದ್ದನ್ನು ಕಂಡೆ. ಮೈ ತುಂಬ ಎಂಥೆಂಥದೋ ಆಭರಣ ಧರಿಸಿದ್ದಳಾದರೂ ಇವಳ ಮೈಯಲ್ಲಿ ಮಾಂಸ-ರಕ್ತಗಳು ಉಳಿದಿದ್ದವೊ ಇಲ್ಲವೊ ಎಂಬುದನ್ನು ನಿರ್ಧರಿಸಲು ನನಗಂತೂ ಆಗಲಿಲ್ಲ. ಹೆರಿಗೆಯ ನೋವನ್ನೀಕೆ ಹೇಗೆ ತಡೆದುಕೊಂಡಳೊ! ಅವಳ ಮಗುವಂತೂ ಮನುಷ್ಯರ ಮಗುವೆಂದು ನಂಬಲಾಗದಷ್ಟು ಚಿಕ್ಕದಾಗಿತ್ತು. ಹೆಚ್ಚೆಂದರೆ ನನ್ನ ಅಂಗೈಯನ್ನು ಕೂಡ ಅದು ತುಂಬುತ್ತಿರಲಿಲ್ಲ. ಅದನ್ನೆತ್ತಿಕೊಳ್ಳಲು ನನಗೆ ಧೈರ್ಯ ಸಾಲಲಿಲ್ಲ.

ಮುಂಬಯಿ ಪ್ರಾಂತದಲ್ಲಿ ಕ್ಷಾಮ ಪರಿಸ್ಥಿತಿಯುಂಟಾದಾಗ ಜನ ಗುಜರಾತಕ್ಕೂ ವಿಜಾಪುರವನ್ನುಳಿದು ಇತರ ಮೂರು ಕನ್ನಡ ಜಿಲ್ಲೆಗಳಿಗೂ ವಲಸೆ ಹೋಗುವುದು ಸಾಮಾನ್ಯವಂತೆ.

ವಿಜಾಪುರ ಭಾರತದಲ್ಲಿ ನನಗೆ ಬರಗಾಲದ ಭೀಕರತೆಯ ಪ್ರಥಮ ದರ್ಶನ ಮಾಡಿಸಿತು; ನನ್ನ ಮುಂದಿನ ಯಾತ್ರೆಗಿದು ಪರಿಣಾಮಕಾರಿ ಮುನ್ನುಡಿಯಾಯಿತು. ದೇವರು ಬರುವ ವರ್ಷವಾದರೂ ಇವರಿಗೆ ಸಕಾಲಿಕ ಮಳೆಯನ್ನು ಅನುಗ್ರಹಿಸಲಿ.*

---

* ಇದನ್ನು ಬರೆದು ಮುಗಿಸುವ ಹೊತ್ತಿಗೆ ಈ ವರ್ಷವೂ ವಿಜಾಪುರ ಜಿಲ್ಲೆಯಲ್ಲಿ ಅನಾವೃಷ್ಟಿ ಉಂಟಾಗಿದೆಯೆಂದು ತಿಳಿದುಬಂದಿದೆ. ಈ ಜನರನ್ನು ದೇವರೇ ಕಾಪಾಡಬೇಕು. — ಮಿಯರ್‌ವೆದರ್

---

**"ಭಾರತ ನನಗೇನು ಕೊಟ್ಟಿತು?– ನಿತ್ಯ ಉಪವಾಸವಿಡಬೇಕಾದ ಹೊಟ್ಟೆ, ನೀರು ಬೆರಸಿದ ಹಾಲು, ಸಫದರಜಂಗ್ ಆಸ್ಪತ್ರೆಯ ಅಂಗಳದಲ್ಲಿ ನಿಂತಲ್ಲಿ ನಿಲ್ಲದಾಗದೆ ಹೆಂಡತಿ ಪ್ರಾಣ ಬಿಡುವುದನ್ನೇ ಕಾಯುವುದು, ಮೇಲಧಿಕಾರಿಗಳು ಕಣ್ತೆರೆಯಬೇಕೆಂದು ಎಂ. ಪಿ. ಯೊಬ್ಬನ ಧೋತರ ಚುಂಗು ಹಿಡಿದುಕೊಂಡು ಅಲೆಯುವುದು– ಇದೇ ಅಲ್ಲವೆ?" ಭಾರತದಲ್ಲಿ ಕೆಲ ವರ್ಷ ಶಿಕ್ಷಕನಾಗಿದ್ದವನೊಬ್ಬನ ವ್ಯಥೆಯಿದು. ೧೯೬೪ ರಲ್ಲಿ ಇಂಗ್ಲಂಡಿಗೆ ಹೋದ ಈ ಯುವಕ ತೀರ ಸಾಮಾನ್ಯ ನೌಕರಿಯೊಂದನ್ನು ಮಾಡುತ್ತಿರುವನಾದರೂ ಭಾರತದಲ್ಲಿ ತಂದೆ ತಾಯಿಗಳ ಸಂಸಾರಕ್ಕೆ ಸಾಕಾಗುವಷ್ಟು ಹಣವನ್ನು ನಿಯಮಿತವಾಗಿ ಕಳಿಸುತ್ತಿದ್ದಾನೆ.**

**— ಕೈಲಾಸ ವಾಜಪೇಯಿ**

# ಹೊಸ ವರ್ಷಕ್ಕೊಂದು ಕಥೆ

**ರಷ್ಯನ್ ಸಾಹಿತ್ಯದಲ್ಲಿ ವ್ಲಾದಿಮಿರ್ ದುದಿನ್‌ಸ್ತೇವ್ ಅವರು ಅಪೂರ್ವ ಸ್ಥಾನ ಗಳಿಸಿದ್ದಾರೆ. ಅವರ ಮೊದಲ ಕಥಾಸಂಕಲನ ಪ್ರಕಟವಾದುದು ೧೯೩೩ರಲ್ಲಿ. ಎರಡನೆಯ ಮಹಾಯುದ್ಧದ ನಂತರ ರಶಿಯದ ಎಲ್ಲಾ ಪತ್ರಿಕೆಗಳಲ್ಲೂ ಇವರ ಕಥೆಗಳು, ಲೇಖನಗಳು ಪ್ರಕಟವಾಗುತ್ತಿದ್ದವು. ಆದರೂ ಇವರಿಗೆ ಸಾಹಿತ್ಯದ ಭದ್ರಸ್ಥಾನ ಗಳಿಸಿ ಕೊಟ್ಟದ್ದು 'ನಾಟ್ ಬೈ ಬ್ರೆಡ್ ಅಲೋನ್' ಎಂಬ ಮೊದಲ ಕಾದಂಬರಿ. ಬೋರಿಸ್ ಪಾಸ್ತರ್‌ನಾಕ್ ಅವರ ನಂತರ ಅತ್ಯಂತ ಸಂವೇದನಾಶೀಲ ಲೇಖಕ, ಬಹು ಚರ್ಚಿತ ಬರಹಗಾರ ಎಂದರೆ ವ್ಲಾದಿಮಿರ್ ದುದಿನ್‌ಸ್ತೇವ್. ಹಿರಿಯರಿಗಾಗಿ ಬರೆಯಲಾಗಿರುವ ಈ ಕಿರು ಕಾದಂಬರಿ ಮನುಕುಲಕ್ಕೆ ಮಹತ್ವದ ಸಂದೇಶವನ್ನು ಪರಿಣಾಮಕಾರಿ ರೀತಿಯಲ್ಲಿ ನೀಡುತ್ತದೆ.**

ನಾನಿರುವ ನಗರ ಪುರಾಣಪ್ರಸಿದ್ಧವಾದುದಾದರೂ ಅದು ನನ್ನ ಕಲ್ಪನೆಯ ಸೃಷ್ಟಿ. ಅಲ್ಲಿಯ ನಿವಾಸಿಗಳಿಗೆ ಅಪೂರ್ವ ಅನುಭವಗಳು ಆಗುವುದುಂಟು. ಅವುಗಳಲ್ಲೆಲ್ಲಾ ನನಗೂ ಪಾಲು. ಹಳೆಯ ವರ್ಷ ಸತ್ತರೆ ಹೊಸ ವರ್ಷದ ಹುಟ್ಟು. ಹುಟ್ಟಿನ ಹೊಸತರಲ್ಲಿ, ಇತರ ಕಾಲದಲ್ಲಿ ಸಾಧ್ಯವೇ ಇಲ್ಲ ಎನ್ನುವಂತಹುದನ್ನೂ 'ಇರಬಹುದು' ಎಂದು ಸುಲಭವಾಗಿ ಒಪ್ಪಿ ತಲೆದೂಗುವುದು ಸಾಮಾನ್ಯ ಪರಿಪಾಠ. ಅದಕ್ಕೆಂದೇ ಈ ಕಥೆಗೆ ಇದೇ ಸೂಕ್ತಕಾಲವೆಂದು ನಾನು ಉದ್ದೇಶಪೂರ್ವಕವಾಗಿಯೇ ಆರಿಸಿಕೊಂಡಿದ್ದೇನೆ.

ಕಾಲರಾಯನೆಂದರೆ ನಮಗೆ ಅಮಿತ ಅಭಿಮಾನ. ಅವನ ಪವಾಡಗಳೆಂದರೆ ಪಂಚಪ್ರಾಣ. ಅನಂತನಾದ ಅವನು ಎಡೆಯಿಂದೆಡೆಗೆ ಬದಲಾಗಿ ತೋರುವ ಬಹುರೂಪಿ. ಓದುವಾಗ ನಿಮ್ಮದೇ ಸ್ವಂತ ಬಾಳಿನ ಅನುಭವವಿದು ಎಂದು ಎನಿಸಿದರೆ ಕ್ಷಮಿಸಿ.

ನನ್ನ ನಗರದೊಳಕ್ಕೆ ರಹಸ್ಯಮಯ ಪಕ್ಷಿಯೊಂದು ಹಾರಿ ಬಂತು. ಅನೇಕರನ್ನು ಅದು ಸಂದರ್ಶಿಸಿತ್ತು. ಅದು ಮೊದಲು ಸಂದರ್ಶಿಸಿದ ವ್ಯಕ್ತಿ ನನ್ನ ನಿರ್ದೇಶಕ—ಸೂರ್ಯನ ಬಗ್ಗೆ ವಿಶೇಷ ಅಧ್ಯಯನ ನಡೆಸುತ್ತಿದ್ದ ವಿಜ್ಞಾನಿಗಳ ಗುಂಪಿನ ನಾಯಕ. ಎರಡನೆಯವ ನನ್ನ ಸಹಪಾಠಿಯಾಗಿದ್ದು ಈಗ ನರದೌರ್ಬಲ್ಯದ ಕಾಯಿಲೆಗಳನ್ನು ಗುಣಪಡಿಸುವುದರಲ್ಲಿ ವಿಶೇಷ ಪರಿಣತಿ ಪಡೆದಿರುವ ನನ್ನ ಮಿತ್ರ. ಮೂರನೆಯವನು ನಾನೇ. ನಿಜವಾಗಿಯೂ ಅದೊಂದು ಅಪೂರ್ವ ಪಕ್ಷಿ. ಅದರ ಬಗ್ಗೆ ಯಾರೂ ಲಕ್ಷ್ಯವನ್ನೇ ಕೊಡದೆ ಕೊನೆಗೆ ಅದರ ಚಿತ್ರವೂ ಮಕ್ಕಳಿಗೆ ಕಾಣದಂತೆ ದೂರಮಾಡಿ, ಅದರ ಹೆಸರನ್ನು ವ್ಯಂಗ್ಯವಾಗಿ ಬಳಸಿ ಅದಕ್ಕೆ ಮನುಷ್ಯ ಅಪಚಾರ ಮಾಡುತ್ತಿದ್ದಾನೆ; 'ಗೂಬೆ' ಎಂದು ಕರೆಯುತ್ತಾನೆ.

ಅದು ನನ್ನನ್ನು ಕಾಣುವ ವೇಳೆಗೆ ಸೂರ್ಯರಶ್ಮಿಯ ಬಗ್ಗೆ ಹಲವು ಕೃತಿಗಳನ್ನು ಪ್ರಕಟಿಸಿದ್ದೆ. ಓದಿನಲ್ಲಿ ಉನ್ನತ ಪಟ್ಟವನ್ನೇ ಪಡೆದಿದ್ದೆ. ಹಲವು ಸಮಿತಿಗಳಲ್ಲಿ ಕೆಲಸ ಮಾಡಿದ್ದೆ. ಬೇಗ ನಾನೂ ಖ್ಯಾತಿ ಗಳಿಸಿ ಪಂಡಿತೋತ್ತಮ ಎನಿಸಿಕೊಳ್ಳಬೇಕೆಂಬ ಆತುರ. ಯಾರಾದರೂ ಒಂದು ಪ್ರಶ್ನೆ ಕೇಳಿದರೆ ಸ್ವಲ್ಪ ಕಾಲ ಯೋಚಿಸುವವನಂತೆ ಎತ್ತಲೋ ನೋಡುತ್ತಾ ಅನಂತರ ತೂಕವಾದ ಮಾತಿನಲ್ಲಿ ಉತ್ತರಿಸುವುದನ್ನು ಅಭ್ಯಾಸ ಮಾಡಿಕೊಂಡಿದ್ದೆ. ನನ್ನ ಉಡುಪು ಚೆನ್ನಾಗಿರುವಂತೆ ಸದಾ ಜಾಗ್ರತನಾಗಿರುತ್ತಿದ್ದೆ.

ನನ್ನಲ್ಲಿಯ ಪ್ರತಿಭೆಯನ್ನು ಸಕ್ರಮವಾಗಿ

ಅಭಿವೃದ್ಧಿಗೊಳಿಸಲು ವಿದ್ವಾಂಸರೊಬ್ಬರ ಸಲಹೆಯ ಮೇರೆಗೆ ನನ್ನ ಮನದಲ್ಲಿ ಹಾದು ಹೋಗುವ ಎಲ್ಲಾ ಅನಿಸಿಕೆಗಳನ್ನೂ ಬರೆದಿರಿಸುವ ಹವ್ಯಾಸವನ್ನೂ ಬೆಳೆಸಿಕೊಂಡೆ. ದಿನವೆಲ್ಲಾ ಮೇಜಿನ ಮುಂದೆ ಕುಳಿತು ಬರೆಯಲು ಪ್ರಯತ್ನಿಸಿ ಬರೆಯುವ ಬರಹವೇ ಸಫಲ ಚಿಂತನೆಗಳಾಗಿರದೆ ಎಂದೋ ರಸ್ತೆಯ ಬದಿಯಲ್ಲಿ ಸುತ್ತಾಡುವಾಗ ಮಿಂಚಿನಂತೆ ಮೂಡುವ ಅನಿಸಿಕೆಗಳೇ ಅಮೂಲ್ಯವಾಗಿರುವುದು ಸಾಮಾನ್ಯ. ಇಂತು ಮನಕ್ಕೆ ತೋಚಿದ್ದನ್ನು ಗೀಚಿದ್ದ ಕಾಗದಗಳನ್ನೆಲ್ಲಾ ಮೇಜಿನಲ್ಲಿ ತುರುಕಿದೆ. ಒಮ್ಮೆ ಮನೆಯನ್ನು ಸ್ವಚ್ಛ ಮಾಡುವಾಗ ಕೆಲಸದವಳು ಇವನ್ನೆಲ್ಲಾ ಒಲೆಗೆ ಹಾಕಿದ್ದೂ ಉಂಟು.

ಈಗಾಗಲೇ ನನ್ನ ನಿಷ್ಠುರತೆಯ ಪರಿಚಯ ನಿಮಗಾಗಿರಬೇಕು. ದಾಕ್ಷಿಣ್ಯಕ್ಕೆ ಕಟ್ಟು ಬಿದ್ದು ನಾನು ಯಾರನ್ನೂ ಸುಮ್ಮನೆ ಬಿಡಲಾರೆ. ನನ್ನನ್ನೂ ನಾನು ಬಿಡುವುದಿಲ್ಲ. ನನ್ನ ಮೊದಲ ವಿಮರ್ಶಕ ನಾನೇ. ಈ ದೃಷ್ಟಿ ಬಂದದ್ದು ಇತ್ತೀಚೆಗೆ—ನಿರ್ದಿಷ್ಟವಾಗಿ ಹೇಳಬೇಕೆಂದರೆ ಗೂಬೆಯನ್ನು ಕಂಡ ನಂತರವೇ.

ನಾನು 'ಸ'ನೊಡನೆ ಕಾದ ಜಗಳವನ್ನೂ ಈಗ ಸಂಪೂರ್ಣವಾಗಿ ಹೊಸ ದೃಷ್ಟಿಯಲ್ಲಿ ನೋಡುತ್ತೇನೆ. ಸ ಕೂಡ ಸೈನ್ಸ್ ಅಕಾಡಮಿಯ ಸದಸ್ಯ. ಐದು ವರ್ಷಗಳ ಹಿಂದೆ ಸ ಬರೆದ ಒಂದು ಲೇಖನದಲ್ಲಿ ನನ್ನ ಮುಖ್ಯ ಅನ್ವೇಷಣಾಕೃತಿಯೊಂದನ್ನು 'ಕಾಲಕ್ಷೇಪಕ್ಕಾಗಿ ಬರೆದಿರಿಸಿದ ತಲೆ ಬಾಲವಿಲ್ಲದ ಕಲ್ಪನಾವಿಲಾಸ' ಎಂದು ತೆಗಳಿದ್ದ. ಇದಕ್ಕೆ ನಾನು ಉತ್ತರಿಸುವುದು ಅನಿವಾರ್ಯವಾಗಿತ್ತು. ಅದಕ್ಕೆ ಚುಟುಕಾಗಿ 'ಅದನ್ನೇ ಡಾ. ಸ ಅವರು ಪ್ರಮಾಣಪಡಿಸುವಲ್ಲಿ ಪ್ರಯತ್ನಿಸಿ ಸಂಪೂರ್ಣವಾಗಿ ವಿಫಲರಾಗಿರುವುದು' ಎಂದು ಬರೆದೆ. ಕೂಡಲೇ ಸ ನಾನು ನನ್ನ ತತ್ವವನ್ನು ಸಾಧಿಸಲು ಬುದ್ಧಿಪೂರ್ವಕವಾಗಿ ಪ್ರಯೋಗಗಳಲ್ಲಿ ವ್ಯತ್ಯಾಸಗಳನ್ನು ನಡೆಸಿರುವೆ ಎಂದು ಆರೋಪಣೆ ಮಾಡಿ ಪ್ರತ್ಯುತ್ತರ ಬರೆದ. ಈಚಿನ ಸೂರ್ಯಾವಲೋಕನಗಳನ್ನು ಆಧರಿಸಿದ ಒಂದು ವಿವರಣಾತ್ಮಕ [illegible] ಲೇಖನ ಪ್ರಕಟಿಸಿದೆ. ಅವು ನನ್ನ ತತ್ವವನ್ನೇ ಸರಿಯೆಂದು ಸಾರಿ ಹೇಳುತ್ತಿದ್ದವು. ಈ ಲೇಖನದಿಂದ ಸ ಸಂಪೂರ್ಣ ನಿರಸ್ತ್ರನಾಗುವನೆಂಬ ಭರವಸೆಯಿಂದಲೇ ನಾನು ಸ ಎಂದು ಹೇಳುವುದಕ್ಕೆ ಬದಲಾಗಿ 'ಕೆಲವು ಲೇಖಕರು' ಎಂದು ಮಾತ್ರ ಬರೆದಿದ್ದೆ. ಸ ನಿರಸ್ತ್ರನಾಗಲಿಲ್ಲ. ಮತ್ತೆ ಅದಕ್ಕೂ ಉತ್ತರಿಸಲು ಉಳಿದುಕೊಂಡಿದ್ದ!...

ಐದು ವರ್ಷಗಳ ಕಾಲ ಈ ವಿವಾದ ನಡೆದಿತ್ತು. ಇದರಿಂದ ನನ್ನ ಮನಃಸ್ಥಿತಿ ಕದಡಿತ್ತು.

ನನ್ನ ಕತೆ ಅಲ್ಲೇ ನಿಂತು ವಿಷಯಾಂತರವಾಯಿತು, ಕ್ಷಮಿಸಿ. ಅಂದು ಬೆಳಗ್ಗೆ ಪ್ರಯೋಗಾಲಯದಲ್ಲಿ ನಾವೆಲ್ಲಾ ಸೇರಿದ್ದೆವು. ಕೆಲಸ ಪ್ರಾರಂಭಿಸುವುದಕ್ಕೆ ಮೊದಲು ಮಾಮೂಲಿನಂತೆ ಐದು-ಹತ್ತು ನಿಮಿಷಗಳ ಹರಟೆ. ಅಂದಿನ ಮಾತು ಪ್ರಾರಂಭಿಸಿದ್ದು ನಮ್ಮ ನಿರ್ದೇಶಕ. ಆತ ತನ್ನ ಬಿಡುವಿನ ವೇಳೆಯಲ್ಲಿ ಹಳೆಯ ಗ್ರಂಥಗಳನ್ನು, ನಾಣ್ಯಗಳನ್ನು, ಕಲ್ಲಿನ ಆಯುಧಗಳನ್ನು ಸಂಗ್ರಹಿಸುತ್ತಿದ್ದ.

"ಈ ಚಿತ್ರವನ್ನು ನೋಡಿ. ಇತ್ತೀಚೆಗೆ ಒಂದು ಸಮಾಧಿಯ ಮೇಲಣ ಶಿಲೆಯನ್ನು ಪರೀಕ್ಷಿಸುತ್ತಿದ್ದೆ. ಅದರಲ್ಲಿ ಈ ಚಿತ್ರ ಲಾಂಛನವಿತ್ತು," ಎಂದು ಆತ ಒಂದು ಕಾಗದವನ್ನು ತೋರಿದ. ಇಂಡಿಯನ್ ಇಂಕ್‌ನಲ್ಲಿ ಗೂಬೆಯೊಂದನ್ನು ಅದರಲ್ಲಿ ಚಿತ್ರಿಸಲಾಗಿತ್ತು.

ಒಂದೆರಡು ನಿಮಿಷಗಳ ಮೌನದ ನಂತರ ಹೆಮ್ಮೆಯ ನೋಟ ಬೀರುತ್ತಾ, "ಅದರಲ್ಲಿದ್ದ ಬರಹವನ್ನೂ ನಾನು ಓದಿದೆ. ಯಾರದೋ ಹೆಸರಿನ ಮುಂದೆ ಒಂಭೈನೂರು ವರ್ಷಗಳ ಕಾಲ ಜೀವಿಸಿದ್ದ ಎಂದು ಕೆತ್ತಲಾಗಿತ್ತು!" ಎಂದ.

ನಮ್ಮಲ್ಲಿ ಒಬ್ಬ, "ಒಂಭೈನೂರಿಗಿಂತಲೂ ನಾನ್ನೂರು ಎಂದರೆ ನಂಬಬಹುದೇನೋ!" ಎಂದ.

"ಅದೇಕೆ?" ಎಂದ ನನ್ನ ಪಕ್ಕದಲ್ಲಿಯೇ ಕುಳಿತಿದ್ದ ವ್ಯಕ್ತಿ. ತೆಳುವಾಗಿ ಎತ್ತರವಾಗಿದ್ದ ಆತ ಸಾಮಾನ್ಯವಾಗಿ ಮಾತನಾಡುತ್ತಿರಲಿಲ್ಲ. ಉಡುಪಿನಲ್ಲೂ ಅವ್ಯವಸ್ಥೆ. ನಿರಂತರವಾಗಿ ವಿಶ್ರಾಂತಿಯೇ ಇಲ್ಲದೆ ಕೆಲಸ ಮಾಡುವ ಏಕಾಗ್ರತೆ, ಅಸಾಮಾನ್ಯ ಸಹಿಷ್ಣುತೆ ಆತನದಾಗಿತ್ತು. "ನಿಮಗೇಕೆ ನಾಲು

ನಾಗ ಆತನ ಸ್ವಭಾವದ ಇನ್ನೊಂದು ಮುಖ ನೊದಲ ಬಾರಿಗೆ ತೋರಿಬಂತು.

ಎರಡು ವರ್ಷಗಳಿಂದ ಒಂದೇ ಕೋಣೆಯಲ್ಲಿ ಪಕ್ಕಪಕ್ಕದಲ್ಲಿಯೇ ಕುಳಿತಿದ್ದೆವು. ಆದರೂ ಆತನ ಬಗ್ಗೆ ನನ್ನ ತಿಳಿವು ಎಷ್ಟು ಕಡಿಮೆ! ಅವನಲ್ಲಿ ನಾವು ಗಮನಿಸಿದ್ದೆಂದರೆ— ಅವರೂಪಕ್ಕೆ ಗಡ್ಡ ಬೋಳಿಸುತ್ತಿದ್ದ; ಇಸ್ತ್ರಿ ಮಡಿಕೆಗಳೇ ಇಲ್ಲದ ಬಟ್ಟೆಗಳನ್ನು ಅವನು ತೊಡುತ್ತಿದ್ದ; ಗುಂಡಿಗಳು ಕಿತ್ತು ದಾರ ಹಾರಾಡುತ್ತಿದ್ದರೂ ಅವನ್ನು ಗಮನಿಸದೆ ಏನೋ ಯೋಚಿಸುತ್ತಾ ಓಡಾಡುತ್ತಿದ್ದ ; ಕೊನೆಗೆ ರಾಕ್ಷಸನಂತೆ ನಾಲ್ಕು ಮಂದಿಯ ಕೆಲಸವನ್ನು ಮಾಡಿ ಮುಗಿಸುತ್ತಿದ್ದ. ಆದರೆ ಅವನ ಅಂತರಂಗವನ್ನು ತಿಳಿಯಬೇಕೆಂಬ ಪ್ರಯತ್ನ ನಮ್ಮಲ್ಲಿ ಯಾರೂ ಮಾಡಿದಂತೆ ನನಗೆ ತಿಳಿಯದು.

"ಒಂದು ಕುತೂಹಲಕರ ಸಂಗತಿ ಹೇಳುತ್ತೇನೆ," ಎಂದಾಗಲೂ ಅವನು ತನ್ನ ಕೆಲಸದಲ್ಲಿ ನಿರತನಾಗಿದ್ದ. ಈ ಮನುಷ್ಯ ನಮ್ಮೊಂದಿಗೆ ಮಾತನಾಡುವುದರಲ್ಲಿ ವೇಳೆಯನ್ನು ಕಳೆಯಬಲ್ಲ ಎಂಬುದೇ ನಮ್ಮ ಪಾಲಿಗೆ ಆಶ್ಚರ್ಯವಾಗಿತ್ತು. ಆ ರೀತಿಯ ತಪ್ಪು ಅವನೆಂದಿಗೂ ಮಾಡಿದವನಲ್ಲ. ಆಯುಃಪ್ರಮಾಣದ ಚರ್ಚೆ ಅವನನ್ನು ಅಷ್ಟೊಂದು ವಿಚಲಿತಗೊಳಿಸೀತೆಂದು ನಾವಾರೂ ನಿರೀಕ್ಷಿಸಿರಲಿಲ್ಲ.

"ನೆಲಮಾಳಿಗೆಗೆ ಹೋಗಿ ಅಲ್ಲಿ ಪ್ರಯೋಗಕ್ಕೆ ಬೇಕಾಗುವ ವಸ್ತುಗಳನ್ನು ಕಾಯಿಸಲು ಸಿದ್ಧಗೊಳಿಸಿ ಒಂದು ಕ್ಷಣದಲ್ಲಿ ಬರುತ್ತೇನೆ," ಎನ್ನುತ್ತಾ ಹೊರಕ್ಕೆ ಓಡಿದ.

"ಅದೆಲ್ಲ ಮರುಳೋ ?" ಎಂದೊಬ್ಬ ಕೇಳಿದ.

"ಹಾಗೆ ಭಾವಿಸಬೇಡಿ. ನಾನು ಅವನ ಮನೆಯ ಪಕ್ಕದಲ್ಲಿಯೇ ಇರುತ್ತೇನೆ. ಅವನನ್ನು ನೋಡಲು ಒಬ್ಬಾಕೆ ಬರುತ್ತಾಳೆ. ಆಕೆ ಸುಂದರಿ, ತರುಣಿ ಎಂದರೆ ನೀವು ನಂಬುವಿರಾ? ಒಮ್ಮೆ ಅವಳ [illegible] ನೋಡಿದೆ. ಪ್ರೇಮ ಅವಳನ್ನು ಕುರುಡಾಗಿಸಿತ್ತು. ನನ್ನನ್ನು ಗಮನಿಸದವಳಂತೆ ನೇರವಾಗಿ ಅವನ ಮನೆಯನ್ನು [illegible]." ಎಂದನೊಬ್ಬ.

"[illegible] ಒಂದು ಗ[illegible]-

ವಿದೆ. ತುಂಬಾ ನಿಧಿರವಾಗಿ ಅದು ಕಾಲವನ್ನು ಅಳೆಯುತ್ತದೆ. ಅದಕ್ಕೆ ವರ್ಷಕ್ಕೊಂದು ಬಾರಿ ಮಾತ್ರ ಕೀಲಿ ಕೊಟ್ಟರೆ ಸಾಕು," ಎಂದ ನಿರ್ದೇಶಕ.

"ಅಲ್ಲಿಯ ಕೆಲಸ ಮುಗಿಯಿತು," ಎನ್ನುತ್ತಾ ಆತ ಬಂದು ತನ್ನ ಮೇಜಿನ ಬಳಿ ಸ್ಲೈಡ್‌ರೂಲ್ ಹಿಡಿದು ಕುಳಿತ. "ಐಂಫ್ಟೈನೂರು ವರ್ಷಗಳು ಎಂದಿರಿ...ಕಾಲದ ವೇಗದಲ್ಲಿ ಹೆಚ್ಚು ಕಡಿಮೆ-ಆಗಬಲ್ಲದು ಎಂದು ನೀವು ತಿಳಿದಿರಬೇಕು. ನೀವು ಪ್ರೇಮಿಸಿರುವ ಹೆಣ್ಣಿಗಾಗಿ ಕಾಯುತ್ತಾ ಕುಳಿತಿರುವ ಅನುಭವ ನಿಮಗೆ ಇರಬೇಕು..."

"ಹೌದು, ಆಗ ಕಾಲ ತುಂಬಾ ನಿಧಾನವಾಗಿ ಓಡುತ್ತಿದೆ ಎನಿಸುತ್ತದೆ."

"ನಿಧಾನವೇನು, ಕಾಲ ಸಂಪೂರ್ಣವಾಗಿ ನಿಂತೇ ಹೋಗಬಲ್ಲದು. ಎರಡು ಸಾವಿರ ವರ್ಷಗಳ ಹಿಂದಿನ ಗೋರಿಯಿಂದ ಹೊರಕ್ಕೆ ತೆಗೆದ ತಾವರೆಯ ಬೀಜಗಳಿಂದ ಸಸಿಗಳನ್ನು ಬೆಳೆಸಿದ ಸುದ್ದಿ ಓದಿದ್ದು ನೆನಪಿದೆಯೆ ? ಆ ಬೀಜಗಳ ಪಾಲಿಗೆ ಕಾಲ ಸ್ಥಗಿತವಾಗಿತ್ತು. ಆದ್ದರಿಂದ ಕಾಲವನ್ನು ನಿಧಾನವಾಗಿಸಬಹುದು, ತ್ವರಿತಗೊಳಿಸಬಹುದು; ಅಂತೆಯೇ ನಿಲ್ಲಿಸಲೂಬಹುದು," ಎಂದು ಹೇಳಿ ಕೈಯಲ್ಲಿದ್ದ ಸ್ಲೈಡ್‌ರೂಲನ್ನು ನೋಡಿ ಏನೋ ಬರೆದುಕೊಂಡ. ಮಾತನಾಡುವಾಗಲೂ ತನ್ನ ಕೆಲಸ ಮುಂದುವರಿಸಲು ಪ್ರಯತ್ನಿಸುತ್ತಿದ್ದನಾತ.

"ನಾನು ಹೇಳಲಿರುವ ಕತೆ ಇದೇ ವಿಷಯವನ್ನು ವಿವರಿಸುತ್ತದೆ. ಅದರಲ್ಲಿಯ ತತ್ವವನ್ನು ನೀವು ನಿರ್ಲಕ್ಷಿಸಿದರೂ ಅದು ಕುತೂಹಲಕರ ಕತೆ ಎಂದೆನಿಸುವುದು ಖಂಡಿತ."

ಅವನು ನನ್ನತ್ತ ತಿರುಗಿ ತನ್ನ ಮಾತೆಲ್ಲಾ ನನ್ನನ್ನು ಕುರಿತದ್ದೇ ಎನ್ನುವಂತೆ ಪ್ರಾರಂಭಿಸಿದ :

"ಒಂದಾನೊಂದು ಕಾಲದಲ್ಲಿ ತುಂಬಾ ದೂರವಿರುವ ಒಂದು ರಾಜ್ಯದಲ್ಲಿ...ಇವೆಲ್ಲವನ್ನೂ ಬಿಟ್ಟು ಸ್ಪಷ್ಟವಾಗಿ ಹೇಳಬೇಕೆಂದರೆ ಹಲವು ವರ್ಷಗಳ ಹಿಂದೆ, ಇದೇ ನಗರದಲ್ಲಿ ಇದು ನಡೆಯಿತು. ಒಂದು ಭಾನುವಾರ ಬೆಳ್ಳಿಗೆ ಉಡುಪು ತೊಟ್ಟು [illegible]
[illegible]
[illegible]
[illegible] ಕಾಲ [illegible] — ಅದನ್ನು [illegible]

ಎನ್ನುವುದೇ ಸರಿ—ಸೋದರರ ಸಭೆಯು ಕಾರ್ಯ ಕಲಾಪದ ಅಂಗ. ಸೋದರರ ಸಭೆಯನ್ನು ಸುಲಭವಾಗಿ ಎಲ್ಲರೂ ಅರ್ಥಮಾಡಿಕೊಳ್ಳುವಂತೆ ಹೇಳಬೇಕೆಂದರೆ ಕಳ್ಳರ ಮತ್ತು ಪ್ರಘಾರಿಗಳ ಕೂಟ. ಆ ರೀತಿಯ ಸಂಘಗಳು ತಮ್ಮದೇ ಆದ ಕೆಲ ವಿಶಿಷ್ಟ ನಿಯಮಗಳನ್ನು ರೂಪಿಸಿಕೊಂಡಿರುತ್ತವೆ. ನಿಯಮೋಲ್ಲಂಘನಕ್ಕಲ್ಲಿ ಶಿಕ್ಷೆ ಮರಣ."

"ಇದಕ್ಕೂ ನಾವು ಚರ್ಚಿಸುತ್ತಿದ್ದ ಕಾಲಕ್ಕೂ ಏನು ಸಂಬಂಧ?" ಎಂದು ಕೇಳಿದ ನಿರ್ದೇಶಕ.

"ಹೌದು, ಕಾಲಕ್ಕೂ ಇದಕ್ಕೂ ತುಂಬಾ ಹತ್ತಿರ ಸಂಬಂಧವಿರುವುದರಿಂದಲೇ ಹೇಳುತ್ತಿರುವುದು. ಆ ಕಳ್ಳರ ಕೂಟದಲ್ಲಿ ಆರು ಮಂದಿಗೆ ಮರಣದಂಡನೆ ವಿಧಿಸಲಾಯಿತು. ಐದು ಮಂದಿಯನ್ನು ಕೊಂದರು. ಆರನೆಯ ವ್ಯಕ್ತಿಯನ್ನು ಕೊಲ್ಲಲು ಸಾಧ್ಯವಾಗಲಿಲ್ಲ. ಅವರು ಅವನನ್ನು ಕರೆಯುತ್ತಿದ್ದುದು 'ಪ್ರಧಾನಿ' ಎಂದು. ಅವನು ದೂರದ ಸೆರೆಮನೆಯೊಂದರಲ್ಲಿ ಬಂದಿಯಾಗಿದ್ದ. ಸೆರೆಯಲ್ಲಿ ಒಂಟಿಯಾಗಿದ್ದಾಗ 'ಬಾಳಿನಲ್ಲಿ ತಾನು ಸಾಧಿಸಿದ್ದೇನು?' ಎಂದು ಚಿಂತಿಸಿದ. ಬಾಳಿಗೆ ಅವನು ಕೊಟ್ಟಿದ್ದಾಗಲಿ, ಅದರಿಂದ ಅವನು ಗಳಿಸಿಕೊಂಡಿದ್ದಾಗಲಿ ಶೂನ್ಯ. ಇನ್ನು ಬದುಕಿಗೆ ಹೆಚ್ಚು ಅವಧಿಯೂ ಉಳಿದಿರಲಿಲ್ಲ. ಅವನಿಗೆ ಅನಿಸಿದ್ದು—ದರೋಡೆಕೋರನ ಜೀವನದ ಉದ್ದೇಶವೆಲ್ಲಾ ಅತಿ ಸುಲಭ ಮಾರ್ಗದಲ್ಲಿ ಅನ್ಯರ ಸಿರಿಸಂಪತ್ತನ್ನು ತನ್ನದಾಗಿಸಿಕೊಳ್ಳುವುದು. ಆದರೆ ಅವನು ತನ್ನದಾಗಿಸಿ-ಕೊಳ್ಳುವ ಸಂಪತ್ತಿನ ಮೌಲ್ಯ ಮತ್ತು ಪ್ರಾಮುಖ್ಯ ಜನಜೀವನ ರಂಗದಲ್ಲಿ ತುಂಬಾ ವೇಗ ಇಳಿಯುತ್ತಿದೆ."

"ನಿಮ್ಮ ಕಳ್ಳರ ಪ್ರಧಾನಿ ಒಳ್ಳೇ ತಾರ್ಕಿಕ ಎನಿಸುತ್ತದೆ!" ಎಂದ ಪರ್ಸನೆಲ್ ಆಫೀಸರ್.

"ಹೌದು, ಅವನು ಶುದ್ಧ ವ್ಯಾಪಾರಿ," ಎಂದ ವಿಚಿತ್ರ ವ್ಯಕ್ತಿ ತಲೆದೂಗುತ್ತಾ. "ಸಮಾಜಕ್ಕೆ, ದೇಶಕ್ಕೆ ಅಪಾರ ಹಾನಿಯನ್ನುಂಟುಮಾಡಿದ್ದ ಈ ಅಪರಾಧಿ ಸೆರೆಮನೆಯಲ್ಲಿ ತುಂಬಾ ಬದಲಾಗಿದ್ದ. ರಾಶಿರಾಶಿ ಪುಸ್ತಕಗಳನ್ನು ಓದಿ ಮುಗಿಸಿದ್ದ. ಕೂಟದ ಪ್ರಧಾನಿಯಾಗಿದ್ದುದರಿಂದ ಅವನು ಬಯಸಿದ ಪುಸ್ತಕವನ್ನು ಕಳ್ಳತನವಾಗಿ ತರಿಸಿಕೊಳ್ಳುವ ಅವಕಾಶವಿತ್ತು. ಸಂಪತ್ತು ತುಂಬಾ ವೇಗವಾಗಿ ತನ್ನ ಮೌಲ್ಯವನ್ನು ಕಳೆದುಕೊಳ್ಳುತ್ತಿದೆ ಎಂಬುದನ್ನು ಕಂಡುಕೊಂಡ.

"ಒಂದಾನೊಂದು ಕಾಲದಲ್ಲಿ ರಾಜಕುಮಾರರೂ ಐಶ್ವರ್ಯವಂತರೂ ತಮ್ಮ ಕೊಳಗಳಲ್ಲಿಯ ಹಾವು ಮೀನುಗಳಿಗೆ ಗುಲಾಮರ ಮಾಂಸವನ್ನು ಆಹಾರವಾಗಿ ಹಾಕಿ ಸಾಕುತ್ತಿದ್ದರು. ಅಂತಹ ಹಾವು ಮೀನಿನ ಅಡಿಗೆಯನ್ನು ಪಾರ್ಟಿಯೊಂದರಲ್ಲಿ ಕೊಟ್ಟರೆ ಅದಕ್ಕಿಂತಲೂ ರುಚಿಕರ ಭಕ್ಷ್ಯ, ಅಪೂರ್ವದ ಊಟ ಬೇರಿಲ್ಲ ಎಂದು ಭಾವಿಸಲಾಗುತ್ತಿತ್ತು. ಈಗ ಇದನ್ನು ಕಲ್ಪಿಸಿಕೊಂಡರೂ ಮೈ ಜುಂ ಎನ್ನುತ್ತದೆ. ಚಿನ್ನ ಬೆಲೆಯುಳ್ಳ ಲೋಹ ಎಂಬುದೂ ತಿಳಿಯದೆ ಮಣ್ಣಿನಲ್ಲಿ ಬಿದ್ದಿದ್ದ ಕಾಲವೂ ಒಂದಿತ್ತು. ಅನಂತರ ಮನುಷ್ಯನೇ ಅದಕ್ಕೆ ಹೆಸರು, ಬೆಲೆ ಎರಡನ್ನೂ ಕೊಟ್ಟ. ಆ ಚಿನ್ನ ಆಭರಣಗಳಾಗಿ, ಅಲಂಕಾರ ವಸ್ತುವಾಗಿ ಬಳಸುವುದು ಸಿರಿತನದ ಅವಶ್ಯಕತೆ ಎಂದು ತಿಳಿಯಲಾಗಿತ್ತು. ಆದರೆ ಇಂದು ನಮ್ಮಲ್ಲಿ ಯಾರೂ ಅದನ್ನು ಲಘುವಾಗಿ ಬಳಸಲಾರರು. ಚಿನ್ನದ ಒಡವೆ ಮೈಮೇಲಿದ್ದರೆ ಮೈಯೆಲ್ಲಾ ಕಣ್ಣುಮಾಡಿಕೊಂಡು ಅದನ್ನು ಕಾಯುತ್ತಾರೆ. ಈಗ ಚಿನ್ನದ ಘನತೆ ಕುಂದಿದೆ. ತುಂಬಾ ಬೆಲೆ ಬಾಳುವ ಚಿತ್ರ ಚಿತ್ತಾರದ ಉಡುಪು ಧರಿಸುವುದೂ ಈಗ ಹಿಂದುಳಿದಿರುವುದರ ದ್ಯೋತಕ."

"ಅವನ ಯೋಚನೆ ತುಂಬಾ ಲಕ್ಷಣವಾಗಿದೆ! ಎಲ್ಲಾ ವಸ್ತುಗಳ ಬೆಲೆಯನ್ನೂ ಒಮ್ಮಲೇ ಕತ್ತರಿಸಿದರೆ ನಂತರ ಅವುಗಳ ಸ್ಥಳ ಆಕ್ರಮಿಸುವ ವಸ್ತುಗಳು ಯಾವುವು ಸ್ವಲ್ಪ ಹೇಳಿ," ಎಂದ ಪರ್ಸನೆಲ್ ಆಫೀಸರ್. ಹೆಚ್ಚು ಬೆಲೆಯ ಸೂಟ್ ತೊಟ್ಟಿದ್ದರಿಂದಲೇ ಅವನಿಗೆ ಈ ಮಾತು ಖೇದವಾಗಿದ್ದಿರಬೇಕು.

"ನೀವು ಯಾವ ವಸ್ತುಗಳ ಬಗ್ಗೆ ಕೇಳುತ್ತೀರಿ ಎಂಬುದರ ಮೇಲೆ ಇದನ್ನು ನಿರ್ಧರಿಸಬೇಕು. ಕೊಳ್ಳಲು, ಕೊಲ್ಲಲು, ಆಗದ ಅಂತರಂಗದ ಅನಂತ ಸೌಂದರ್ಯದರ್ಶನದ ಲಾಭದ ಮುಂದೆ ಐಹಿಕ ವಸ್ತುಗಳ ರಂಗು, ಸಿರಿತನದ ಸೊಬಗು ಸೋಲುತ್ತದೆ. ಹೆದರಿಕೆಯಿಂದ, ಬಲವಂತದಿಂದ

ಯಾರೇನೇ ಬಲ್ಲಾಕೆ ನಿಮ್ಮನ್ನು ಪ್ರೇಮಿಸುವಂತೆ ಮಾಡಲು ಸಾಧ್ಯವಿಲ್ಲ. ಅಂತರಾತ್ಮದ ಭಾವ ವ್ಯಕ್ತವಾದುದು. ಬಂಗಾರದ ಬಯಕೆ, ಸುಖದ ಆಸೆ ಬಿಟ್ಟೊಡನೆಯೇ ಆತ್ಮಕ್ಕೆ ಒಂದು ಸ್ಥಾನ ದೊರೆಯುತ್ತದೆ. ಬೆಲೆ ಬಾಳುವ ಉಡುಪು, ಆಭ-ರಣಗಳನ್ನು ಹೊತ್ತ ಹೆಣ್ಣನ್ನು ನೋಡಿದವರು ಆಕೆ ತನ್ನ ಅಂತರಂಗದ ಶೂನ್ಯವನ್ನು ಈ ರೀತಿ ಮುಚ್ಚಿ ಮೋಸ ಮಾಡಲು ಪ್ರಯತ್ನಿಸುತ್ತಿದ್ದಾಳೆ ಎಂದು ಅರಿತು ಮರುಕ ತೋರುತ್ತಾರೆ.

"ಇದನ್ನೇ ದರೋಡೆಕೋರರ ಗುಂಪಿನ ಪ್ರಧಾನಿ ಗುರುತಿಸಿದ್ದು. ಅದುವರೆಗಿನ ಬಾಳಿನಲ್ಲಿ ಅವನ ಮಿತ್ರರು ಗುರುತಿಸುವಂತಹ, ಗುರುತಿಸಿ ಮೆಚ್ಚುವಂತಹ ಮಧುರ ಸ್ನೇಹದ ವಸ್ತುಗಳನ್ನು ಅವನು ಗಳಿಸಿರಲೇ ಇಲ್ಲ. ಮೌಲ್ಯವಿಹೀನ ವಸ್ತುಗಳನ್ನು ವಶಪಡಿಸಿಕೊಳ್ಳುವುದರಲ್ಲಿಯೇ ಕಾಲವನ್ನು ಕಳೆದಾಗಿತ್ತು...." ಗಂಟಲನ್ನು ಸರಿಪಡಿಸಿಕೊಂಡು ತನ್ನ ಮಾತು ಮುಂದುವರಿಸಿದ: "ಅವನನ್ನು ಬಯಸಿದ ವ್ಯಕ್ತಿಗಳ ಮೈತ್ರಿ, ಮಮತೆ ಅವನ ಪಾಲಿಗೆ ಇನ್ನೂ ಇತ್ತು. ಅವರನ್ನು ಅವನು ಅರಿತಿದ್ದ. ಅವನನ್ನು ಪ್ರೇಮಿಸುವ ಹೆಣ್ಣೂ ಒಂದಿತ್ತು; ಆದರೆ ಆಕೆಗೆ ಅವನು ತನ್ನ ಮುಖವನ್ನೂ ತೋರುವಂತಿರಲಿಲ್ಲ. ಹೊರಕ್ಕೆ ಬಂದು ಅವರೊಂದಿಗೆ ಬೆರೆಯುವುದೂ ಸಾಧ್ಯವಿರಲಿಲ್ಲ."

"ತನ್ನೆಲ್ಲಾ ಯೋಚನೆಗಳನ್ನೂ ಒಂದು ಪತ್ರ ರೂಪದಲ್ಲಿ ಸೋದರ ಸಭೆಯ ಮುಂದಿರಿಸಿದ. ಪ್ರಧಾನಿಯ ಪಟ್ಟಕ್ಕೆ ರಾಜೀನಾಮೆ ಸಲ್ಲಿಸಿದ. ಅದುವರೆವಿಗಿನ ಬಾಳಿನಲ್ಲಿ ಸಾಧಿಸಲಾರದೆ ಇರುವುದನ್ನೂ ತನ್ನ ಮುಂದಿನ ಬಾಳಿನಲ್ಲಿ ಸಾಧಿಸಬೇಕೆಂದಿರುವ ಆಶಯವನ್ನೂ ವ್ಯಕ್ತಪಡಿಸಿದ. ಸೆರೆಮನೆಯ ಅಧಿಕಾರಿಗಳಿಗೆ ತಲುಪಿಸಿದ ಈ ಪತ್ರವನ್ನವರು ಪ್ರಚುರಪಡಿಸಿದರು. ಅದು ಅವರ ಪಾಲಿಗೆ ಅತ್ಯಂತ ಮುಖ್ಯದಾಖಲೆ.

"ಆದರೆ ಆ ದರೋಡೆಕೋರರ ಪ್ರಧಾನಿ ಸಿಕ್ಕಿಕೊಂಡ ಪರಿಸ್ಥಿತಿ ನೋಡಿ. ಅದುವರೆಗೂ ಅನೇಕ ಕೊಲೆಗಳಿಗಾಗಿ ವಿಧಿಸಿದ್ದ ಶಿಕ್ಷೆಯ ಅವಧಿ ಇನ್ನೂ ನೂರು ವರ್ಷಗಳಷ್ಟಾಗುತ್ತಿತ್ತು. ಅದ್ದರಿಂದ ಸರ್ಕಾರ ಅವನನ್ನು ಕ್ಷಮಿಸಿ ಬಿಡುಗಡೆ ಮಾಡುವುದು ಸಾಧ್ಯವಿರಲಿಲ್ಲ. ಒಂದು ದೇಶ ಸೆರೆಮನೆಯಿಂದ ಹೊರಬಂದರೆ ಸೋದರರ ಸಭೆಯ ನಿಯಮಗಳನ್ನು ಉಲ್ಲಂಘಿಸಿದ್ದಕ್ಕಾಗಿ ಸಭೆಗೆ ಸೇರಿದ ಯಾರಾದರೊಬ್ಬರು ಕತ್ತಿ ಮಸೆಯುತ್ತಾ ಅವನ ಬೇಟೆಯಾಡುವುದು ಖಂಡಿತ. ಸುಖದ ಬಯಕೆಯನ್ನು ಪೂರೈಸಲು ಇನ್ನೂ ಕೆಲವು ವರ್ಷಗಳು ಬಾಳುವುದು ಅವಶ್ಯಕವಾಗಿತ್ತು. ಅದ್ದರಿಂದ ಸೋದರ ಸಭೆ ಮರಣದಂಡನೆ ವಿಧಿಸುವುದಕ್ಕೂ ಮೊದಲೇ ಸೆರೆಯಿಂದ ಹೊರಕ್ಕೆ ನುಸುಳಿಕೊಂಡ. ಹಣ ಸಾಕಷ್ಟಿತ್ತು. ಚತುರ ವೈದ್ಯರ ನೆರವಿನಿಂದ ತನ್ನ ರೂಪವನ್ನೇ ಬದಲಿಸಿಕೊಂಡ. ಮುಖದ ಮೇಲೆ ಬೇರೆ ಚರ್ಮ ಕೂಡಿಸಿದರು. ತಲೆಗೂದಲು ಬದಲಿಸಿದರು. ಕೈಗಳನ್ನೂ ಬದಲಿಸಿದರು. ಕೊನೆಗೆ ಅವನ ಕಂಠವೂ ಬದಲಾಯಿತು. ವೈದ್ಯರು ಈ ವಿದ್ಯೆಯಲ್ಲಿ ನಿಷ್ಣಾತರಾಗಿದ್ದರು.

"ಹೊಸ ಹೆಸರಿನಲ್ಲಿ ಹೊಸ ಐಡೆಂಟಿಟಿ ಕಾರ್ಡ ಪಡೆದುಕೊಂಡು ಅವನು ಹೊಸ ವ್ಯಕ್ತಿಯಾದ. ಮೂರು ವರ್ಷಗಳಲ್ಲಿ ಎರಡು [illegible]

ಗಳಲ್ಲಿ ಪದವಿಗಳನ್ನು ಗಳಿಸಿದ. ಈಗ ಬೃಹತ್ ಸಾಧನೆಗಾಗಿ ಅವನು ಕೆಲಸ ಮಾಡುತ್ತಿರುವ. ಮಾನವಕುಲಕ್ಕೇ ಹಿರಿಯ ಉಡುಗೊರೆ ಕೊಡ ಬೇಕೆಂದಿದ್ದಾನೆ..."

ನನ್ನತ್ತಲೇ ಅವನು ನೋಡುತ್ತಿದ್ದುದರಿಂದ, "ಇದೆಲ್ಲಾ ಸರಿ. ಇದಕ್ಕೂ ನಮ್ಮ ಮಾತಿಗೂ ಯಾವ ಸಂಬಂಧ? ಕಾಲದ ವೇಗದ ಬಗ್ಗೆ ಮಾತಾಡುತ್ತಿದ್ದೆವು. ಒಂಭೈನೂರು ವರ್ಷದ ಬದುಕು ಕೂಡ ಬಂದಿತ್ತು," ಎಂದು ನಾನು ಕೇಳಿದೆ.

"ಕಾಲಕ್ಕೂ ಇದಕ್ಕೂ ಸಂಬಂಧವಿಲ್ಲವೇನು? ಸಾವಿನ ಮುಷ್ಟಿಗೆ ಸಿಕ್ಕಿಬಿದ್ದ ಆ ವ್ಯಕ್ತಿ. ಹುಡು- ಕುತ್ತಾ ಅವನಿಗಾಗಿ ಸುತ್ತಾಡುವ ಯಮನ ಭಟರು. ಅವನ ಪಾಲಿಗೆ ಉಳಿದಿದ್ದ ಕಾಲ ಅಲ್ಪ. ಅಲ್ಪ ಎಂದರೆ ಅರ್ಥವಾಯಿತಲ್ಲ... ಆ ವ್ಯಕ್ತಿ ತನ್ನ ಬಾಳನ್ನೆಲ್ಲಾ ಆ ಅಲ್ಪ ಕಾಲದಲ್ಲಿ ಮತ್ತೆ ಬಾಳಲು ಪ್ರಯತ್ನಿಸುತ್ತಿದ್ದ. ಒಂದು ವೇಳೆ ಅದೇ ವ್ಯಕ್ತಿ ಅದೇ ರೀತಿಯಲ್ಲಿ ತನ್ನ ಬಾಳೆಲ್ಲ ವನ್ನೂ ಮೊದಲಿನಿಂದಲೇ ಅಂತೆಯೇ ಸಾಗಿಸಿದ್ದಿ- ದ್ದರೆ ಸುಲಭವಾಗಿ ಒಂಭೈನೂರು ವರ್ಷಗಳಿಗೂ ಹೆಚ್ಚು ಕಾಲ ಬದುಕುತ್ತಿದ್ದ."

"ಅವನ ಬಾಳುವೆಯ ಮಾರ್ಗದ ಬಗ್ಗೆ ಹೇಳು ತ್ತಿದ್ದೀರಿ, ಅವನ ಆಯುಷ್ಯದ ಬಗ್ಗೆ ಅಲ್ಲ," ಎಂದು ನಿರ್ದೇಶಕ ಎಚ್ಚರಿಸಿದ.

"ಕಾಲವ್ಯಯದ ಬಗ್ಗೆ ಯಾವ ಸೂತ್ರವೂ ನಿಮ್ಮಲ್ಲಿಲ್ಲ. ಕಾಲದ ಮಹತ್ವ ಅರಿತವರು ಇಲ್ಲವೇ ಇಲ್ಲ," ಎಂದ ಆತ ಉದ್ವಿಗ್ನನಾಗಿ. "ಬಾಳು- ವೆಯ ಮಾರ್ಗ... ನಾವು ಕಾಲದ ಬಟ್ಟಲಿನಲ್ಲಿ ಏನು ತುಂಬುವೆವೋ ಅದರ ಬಗ್ಗೆ ನಾನು ಹೇಳು ತ್ತಿದ್ದೆ. ಮನುಷ್ಯನ ಆಯುಸ್ಸಿನ ಬಟ್ಟಲಿನಲ್ಲಿ ಸುಖ, ಸಂತೋಷ, ಆನಂದಾತಿರೇಕದ ಅನು- ಭೂತಿ ಇವೇ ತುಂಬಿರಬೇಕೆಂಬುದು......"

ಪರ್ಸನೆಲ್ ಆಫೀಸರ್ ಒಡನೆಯೇ ಮಾತು ತಡೆಯುವನಂತೆ, "ಆಂ, ಇಲ್ಲಿ ಸಿಕ್ಕಿಬಿದ್ದಿರಿ. ನೀವು ಶುದ್ಧ ಸ್ವಾರ್ಥದ ಉಪದೇಶ ಮಾಡುತ್ತಿ- ದ್ದೀರಿ. ಸುಖ–ಸಂತೋಷಗಳೇ ನಮ್ಮವಾಗ ಬೇಕೆಂದುಕೊಂಡರೆ ಸಾಕೇ? ಜನತೆಯ ಅಭ್ಯುದ ಯಕ್ಕಾಗಿ, ರಾಷ್ಟ್ರದ ಹಿತಕ್ಕಾಗಿ ಸ್ವಲ್ಪವಾದರೂ ದುಡಿಯಬೇಕು ಎನಿಸದೇ? ಈ ಬಗ್ಗೆಯೂ ನೀವೇಕೆ ಯೋಚಿಸಬಾರದು?" ಎಂದು ಕೇಳಿದ.

"ಪ್... ನೀವು ಇನ್ನೂ ತುಂಬಾ ಹಿಂದೆಯೇ ಉಳಿದುಕೊಂಡಿದ್ದೀರಿ. ನಿಮ್ಮನ್ನು ಬೇರೊಬ್ಬರು ಮುಂದಕ್ಕೆಳೆದೊಯ್ಯಬೇಕು. ಸಂತೋಷವಾಗು ವುದು ಯಾವುದೋ ಕಾರ್ಯದಿಂದ. ಆ ಕಾರ್ಯ ಪಾಪ ಎನಿಸಿದ್ದರೆ? ಆ ಪಾಪವನ್ನು ಎಲ್ಲರ ಕಣ್ತಪ್ಪಿಸಿ ನಾಲ್ಕು ಗೋಡೆಗಳ ಮಧ್ಯೆ ನಡೆಸಿ ಆನಂದಿಸುವುದೇ ಆಗಿದ್ದರೆ? ಆಗ ನಿಮ್ಮ ದುಡಿತ, ಜನತೆಯ ಅಭ್ಯುದಯ, ರಾಷ್ಟ್ರದ ಹಿತ ಎಲ್ಲಾ ತೋರಿಕೆಗಾಗಿ, ಜನಮೆಚ್ಚಿಕೆಗಾಗಿ ಎನಿಸದೆ? ನಿಮ್ಮೊಂದಿಗೆ ನನ್ನ ದರೋಡೆಕೋರರ ಪ್ರಧಾನಿಯನ್ನು ಹೋಲಿಸಿದಾಗ ಅವನೇ ಮುಂದುವರಿದ ಬುದ್ಧಿಜೀವಿ ಅನಿಸುತ್ತಾನೆ. ಅವನು ನಿಮ್ಮೆಲ್ಲಾ ಸಂತೋಷ ಸಾಧನಗಳನ್ನೂ ಅನುಭವಿಸಿ ಪರೀಕ್ಷಿಸಿ ಪರಿಣತನಾಗಿದ್ದ. ಅವು ಎಂದರೆ ಅವನಿಗೆ ಜುಗುಪ್ಸೆ...."

ಒಂದೆರಡು ಕ್ಷಣಗಳ ಮೌನದ ನಂತರ, "ಈ ಎಲ್ಲಾ ವಿವರಗಳೂ ನಿಮಗೆ ಹೇಗೆ ಗೊತ್ತು? ಅವನು ಮುಖ ಬದಲಿಸಿಕೊಂಡಿದ್ದ, ಹೆಸರೂ ಬದಲಿಸಿಕೊಂಡಿದ್ದ. ಪರಿಸರ ಬದಲಾಗಿತ್ತು. ತನ್ನ ರಹಸ್ಯವನ್ನು ಹೇಳಿ ಬಯಲು ಮಾಡುವ ಮೂರ್ಖ ಅವನಲ್ಲ. ಅದೂ ಅಪರಿಚಿತರಿಗೆ ಈ ವಿಷಯ ಹೇಳುವುದು ಸಾಧ್ಯವೇ ಇಲ್ಲ," ಎಂದು ಕೇಳಿದೆ.

"ಅವನು ನನಗೆ ಅಪರಿಚಿತನಲ್ಲ."

"ಇದು ನಿಜವೇ ಆಗಿದ್ದರೆ, ಸತ್ಪ್ರಜೆಯಂತೆ ಒಡ- ನೆಯೇ ಈ ಅಪರಾಧಿಯ ಇರುವನ್ನು ಪೋಲೀಸಿಗೆ ತಿಳಿಸಬೇಕು," ಎಂದ ಪರ್ಸನೆಲ್ ಆಫೀಸರ್ ಇದ್ದಕ್ಕಿದ್ದಂತೆಯೇ.

"ಅಪರಾಧಿ ಅಲ್ಲ,... ಈಗ ಅವನು ಅಪರಾಧಿ ಅಲ್ಲ. ಅವನಿಂದ ಯಾರಿಗೂ ಅಪಾಯವಿಲ್ಲ. ತನ್ನ ಸಾಧನೆ ಮುಗಿಸಿದ ನಂತರ ಅವನೇ ಪೋಲೀಸರಿಗೆ ಶರಣು ಬರುತ್ತಾನೆ," ಎನ್ನುತ್ತಾ ತನ್ನ ಒಳ ಜೇಬಿಗೆ ಕೈಹಾಕಿದ. ತೂಕ ವಾದ ಹಳೆಯ ಕಾಲದ ಗುಂಡಾದ ಗಡಿಯಾರ ವನ್ನು ಹೊರತೆಗೆದ. ಅದಕ್ಕೆ ಉಕ್ಕಿನ ಸರಪಳಿ ಯಿತ್ತು. "ಕ್ಷಮಿಸಿ, ಹೊತ್ತಾಯಿತು. ನಾನು

ಹೋಗಿ ಬರಬೇಕು," ಎಂದು ಹೊರಟೇಬಿಟ್ಟ.

ಹೋಗುತ್ತಿದ್ದವನು ಇದ್ದಕ್ಕಿದ್ದಂತೆಯೇ ನಿಂತು, "ನನ್ನ ಕಥೆಯ ಬಗ್ಗೆ ಯೋಚಿಸಿ. ಅದರಲ್ಲೂ ನೀವು ವಿಶೇಷವಾಗಿ ಚಿಂತಿಸಬೇಕು," ಎಂದು ನನ್ನತ್ತ ನೋಡಿದ. "ಅಸ್ಥಿರ ಬಾಳಿನ ಅನುಭವಗಳನ್ನು ಅರ್ಥ ಮಾಡಿಕೊಂಡು ವ್ಯರ್ಥ ಕಾಲಹರಣ ನಿಲ್ಲಿಸುವುದು ಜಾಣತನ. ಸನೊಡನೆ ನೀವು ನಡೆಸುತ್ತಿರುವ ಈ ವ್ಯವಹಾರ ಜಾಣನ ಕೆಲಸವಲ್ಲ..."

೨

ನನಗೆ ಏನೋ ಸಂಶಯ. ಅದನ್ನು ಪರಿಹರಿಸಿಕೊಳ್ಳಲೆಂದೇ ನೆಲಮಾಳಿಗೆಯೊಳಗೆ ಹೊರಟೆ. ಅಲ್ಲಿ ಅವನು ತನ್ನ ಸುತ್ತಲೂ ಗಾಜಿನ ಪರಿಕರಗಳನ್ನು ಹರಡಿಕೊಂಡಿದ್ದ. ಬಾಗಿಲು ಕಿರ್ ಎನ್ನುತ್ತಲೇ ಬಗ್ಗಿದ ರಭಸಕ್ಕೆ ಅಲ್ಲಿದ್ದ ಹಲವು ಪ್ರನಾಳಗಳು ಚೂರು ಚೂರಾದವು. ನಾನೇ ಔಪಚಾರಿಕವಾಗಿ, "ಕ್ಷಮಿಸಿ," ಎಂದೆ.

ಎದ್ದು ಸರಿಯಾಗಿ ನಿಲ್ಲಲು ಪ್ರಯತ್ನಿಸುತ್ತಾ, "ನಿಮ್ಮ ತಪ್ಪನ್ನು ತಿದ್ದಿಕೊಳ್ಳಲೆಂದೇ ಬಂದಿರಾ?" ಎಂದು ಕೇಳಿದ.

"ನೀವು ತುಂಬಾ ಒರಟು..."

"ನಿಮ್ಮ ಭಯ ನನಗೇನು?" ಎನ್ನುತ್ತಾ ತನ್ನ ಕಾರ್ಯದತ್ತ ತಿರುಗಿದ.

ಇದುವರೆಗೂ ಹೇಳದೆ ಇದ್ದ ಹಲವಾರು ಸಂಗತಿಗಳ ಅರ್ಥ ನನಗೀಗ ಸ್ಫುರಿಸಿತು.

ನನ್ನಲ್ಲಿ ಯಾರೋ ತುಂಬಾ ಕುತೂಹಲಗೊಂಡಿದ್ದರು. ನೆರಳಿನಂತೆ ಹಿಂಬಾಲಿಸುತ್ತಿದ್ದರು. ಬೆನ್ನು ಹತ್ತಿದ್ದವರನ್ನು ನಾನು ನೇರವಾಗಿಯೇ ನೋಡಿದೆನಾದರೂ ಅದು ಅವನೋ, ಅವಳೋ, ತಿಳಿಯಲಿಲ್ಲ. ಮುಖದ ಗುರುತೂ ದೊರೆಯಲಿಲ್ಲ. ಆ ವ್ಯಕ್ತಿ ಮೊದಲು ಮರೆಯಾದ ಎಡೆಯಲ್ಲಿ ಅಡಗಿ ನೋಡುತ್ತಿದ್ದು ಈಗ ಧೈರ್ಯವಾಗಿ ನನ್ನ ಕಣ್ಮುಂದೆಯೇ ಕಾಣಿಸುತ್ತಿತ್ತು. ನನ್ನ ಜೇಬಿಗೆ

ಕನ್ನಡಕಕ್ಕಾಗಿ ಕೈ ಹಾಕಿದಾಗ ವ್ಯಕ್ತಿ ಒಡನೆಯೇ ಮರೆಯಾಗುತ್ತಿತ್ತು. ನನ್ನನ್ನು ಅನುಸರಿಸುತ್ತಿರುವ ವ್ಯಕ್ತಿಯ ಛಾಯೆ ಕಾಣಿಸುತ್ತಲೇ ಓಡಿ ಹೊರಗೆ ನೋಡಿದರೆ ಯಾರೂ ಕಾಣಿಸುತ್ತಿರಲಿಲ್ಲ. ಕೆಲವು ದಿನಗಳ ಹಿಂದೆ ಮೊದಲಿನ ಮಂಜಿನ ಮಳೆ ಪ್ರಾರಂಭವಾದಾಗ ಸಂಜೆಯಾಗಿತ್ತು. ರಸ್ತೆ ಬರಿದು. ಹಿಂದೆ ಹೆಜ್ಜೆ ಸಪ್ಪಳ ಕೇಳಿಸುತ್ತಲೇ ಅದು ಯಾರದೆಂಬುದನ್ನು ನಾನು ಊಹಿಸಿದೆ. ನಾನು ಹಿಂತಿರುಗಿ ನೋಡಿದಾಗ ಕಾಣಿಸಿದ್ದು ಓವರ್‌ಕೋಟಿನ ಅಂಚು–ಆಗಲೇ ವ್ಯಕ್ತಿ ಪಕ್ಕದ ತಿರುವಿನಲ್ಲಿ ಮರೆಯಾಗಿತ್ತು. ಹುಚ್ಚನಂತೆ ಅದರ ಹಿಂದೆ ಓಡಿದೆ. ರಸ್ತೆಗಳಲ್ಲೆಲ್ಲಾ ಸುತ್ತಾಡಿದೆ. ಎಲ್ಲೂ ಒಬ್ಬ ವ್ಯಕ್ತಿಯೂ ಕಾಣಿಸಲಿಲ್ಲ. ಆದರೆ ಅನಂತರ ದೊಡ್ಡ ಕೋಳಿಯ ಹೆಜ್ಜೆಯಂತೆ ಶಿಲುಬೆಯಾಕಾರದ ಗುರುತುಗಳು ಕರಗಿ ಮಂಜಿನಲ್ಲಿ ಸೇರುತ್ತಿದ್ದುದನ್ನು ಕಂಡಿದ್ದೆ.

ನೆಲಮಾಳಿಗೆಯಲ್ಲಿ ಆತನಿಗೆ ಇದೆಲ್ಲಾ ನಾನು ವಿವರಿಸಿದೆ. ಅವನು ತಲೆದೂಗಿ, "ನಾನೇ ಕೆಲವನ್ನು ಗುರುತಿಸಿರುವೆ. ಈಗ ಹೊರಡಿ. ನೀವೇ ನೋಡುತ್ತಿರುವಂತೆ ನನಗೆ ಇರುವ ಸಮಯ ಕಡಿಮೆ. ನೀವೂ ಎಚ್ಚರಗೊಂಡು ಸಮಯದ ಮೌಲ್ಯ ಅರಿತು ಕಾರ್ಯತತ್ಪರರಾದರೆ ಒಳ್ಳೆಯದು. ಮುಂದಿನ ಕ್ಷಣದಲ್ಲಿ ಏನೂ ಆಗಬಹುದೆಂಬುದನ್ನು ಚೆನ್ನಾಗಿ ನೆನಪಿಡಿ," ಎಂದ.

ನಾವಿಬ್ಬರೂ ಒಂದೇ ಸಮಸ್ಯೆಯ ಬಗ್ಗೆ ಸಂಶೋಧನೆ ನಡೆಸುತ್ತಿದ್ದೆವು—ಎರಡು ಭಿನ್ನ ಕೋನಗಳಿಂದ. ಇಬ್ಬರಲ್ಲಿ ಯಾರೋ ಒಬ್ಬರು ತಪ್ಪು. ತಪ್ಪು ಯಾರದೆಂದು ತಿಳಿದರೂ ಮುಂದಿನ ಅನ್ವೇಷಣೆಗೆ ಅನುಕೂಲವೇ. ಸಂಶೋಧನಾ ವಿಷಯದ ಮಹತ್ವ ಅಂತಹುದು–ಸೂರ್ಯರಶ್ಮಿಯನ್ನು ಕೇಂದ್ರೀಕರಿಸುವುದು. ಇದರಿಂದ ಸೂರ್ಯನನ್ನೇ ಕಾಣದ ದೂರದ ಭೂಖಂಡಗಳಿಗೆ ಪ್ರಕಾಶಮಾನವಾದ ರಶ್ಮಿ, ಅದರೊಂದಿಗೆ ಹಿತವಾದ ಬಿಸಿಯನ್ನು ಕೊಡುವುದು ಸಾಧ್ಯವಾಗುತ್ತಿತ್ತು. ಹೆಪ್ಪುಗಟ್ಟಿಕೊಂಡು ನಿರಂತರ ನಿಶೆಯ ಗರ್ಭದಲ್ಲಿ ಹುದುಗಿ ಹೋಗಿರುವ ಭಾಗಗಳಿಗೆ ಮುಕ್ತಿ ಕರುಣಿಸಬಹುದಾಗಿತ್ತು. ಈ ಪ್ರಮುಖ ಸಮಸ್ಯೆಯನ್ನು ಬಿಡಿಸುವುದರಲ್ಲಿ ನಿರತನಾಗಿದ್ದ ಅವನನ್ನು ಮತ್ತೆ ನೋಡಿದೆ. ಒಡನೆಯೇ ಅವನ ಗುರುತು ಹತ್ತಿತು–ದರೋಡೆಖೋರರ ಪ್ರಧಾನಿ ತನ್ನ ಬಾಳನ್ನೆಲ್ಲಾ ಅಲ್ಪಾವಧಿಯಲ್ಲೇ ಬಾಳಲೆತ್ನಿಸುತ್ತಿದ್ದ. ಅವನ ಮಹಾ ಸಾಧನೆಗೆ ಒಂದೆರಡು ವರ್ಷಗಳು ಸಾಕೇ ?

ಯಾವ ಸಮಸ್ಯೆಯಾದರೂ ಅದರ ಪೂರ್ವಾಪರ ವಿಚಾರಿಸಿ ಅದಕ್ಕೆ ನಾನು ಎಷ್ಟು ವ್ಯಯ ಮಾಡಬೇಕು ಎಂಬುದನ್ನೂ ಲೆಕ್ಕಿಸುತ್ತೇನೆ. ಈ ಸಂಶೋಧನೆಯ ಪ್ರಾರಂಭ ಯಾವ ಕಡೆಯಿಂದ ಆರಂಭಿಸಬೇಕೆಂಬುದನ್ನೇ ತೀರ್ಮಾನಿಸಲು ಸಾಧ್ಯವಾಗದೆ ಯೋಚನೆಯಲ್ಲಿಯೇ ವರ್ಷಗಳನ್ನು ಕಳೆದಿದ್ದೆ. ನನ್ನ ಸಂಶೋಧನೆ ಈ ದಿಕ್ಕಿನಲ್ಲಿ ತಿರುಗಿದರೆ ಉಳಿದೆಲ್ಲವನ್ನೂ ಕಡೆಗಣಿಸಿ ಮುಂದಿನ ಹತ್ತು ವರ್ಷಗಳ ಕಾಲ ಈ ವಿಷಯದಲ್ಲಿಯೇ ಮುಳುಗುವುದು ಅನಿವಾರ್ಯ. ಎಲ್ಲರೂ ಇದೇ ವಿಷಯದ ಬಗ್ಗೆ ಸಂಶೋಧನೆ ನಡೆಸುವುದು ಸಾಧ್ಯವಾಗಿದ್ದರೆ... ಈ ವಿಷಯವನ್ನು ಮೂಲಭೂತವಾಗಿ ವಿರೋಧಿಸುತ್ತಿದ್ದವರೇ ಹೆಚ್ಚಾಗಿದ್ದರು. ಈ ಬಗ್ಗೆ ಮಾತನಾಡುವ ನಾವೆಲ್ಲಾ ಹುಚ್ಚರು ಎಂದು ಅವರು ನಿರ್ಧರಿಸಿದ್ದರು ಕೂಡ. ಇನ್ನು ಸಾಮೂಹಿಕ ಸಂಶೋಧನೆಯ ಪ್ರಶ್ನೆ ಎಲ್ಲಿಯದು ?

ಅವನ ಆಯಸ್ಸು ಎರಡು ವರ್ಷಗಳಷ್ಟು ಅಲ್ಲ, ಕೆಲವು ಗಂಟೆಗಳದಾಗಿತ್ತು ಎಂಬುದು ಮರುದಿನ ಆಸ್ಪತ್ರೆಯಿಂದ ಫೋನ್ ಬಂದಾಗ ತಿಳಿಯಿತು. ದರೋಡೆಖೋರರ ಈ ವಿಚಿತ್ರ ಪ್ರಧಾನಿ ಮನೆಯ ಬಾಗಿಲ ಬಳಿ ಪ್ರಜ್ಞಾಶೂನ್ಯನಾಗಿ ಬಿದ್ದಿದ್ದನಂತೆ. ಅವನ ಬೆನ್ನಿನಲ್ಲಿ ಚೂರಿಯ ಬಲವಾದ ಇರಿತಗಳಿಂದ ರಕ್ತ ಕಾರಿ ಅವನು ಬದುಕುವುದು ಸಾಧ್ಯವಿಲ್ಲ ಎನಿಸುತ್ತಿತ್ತು. ಅವನನ್ನು ಉಳಿಸಲು ವಿಶೇಷ ತಜ್ಞರ ನೆರವನ್ನೂ ಪಡೆಯಲಾಯಿತು. ಆದರೂ ಸಾಧ್ಯವಾಗಲಿಲ್ಲ. ಮಧ್ಯಾಹ್ನದ ವೇಳೆಗೆ ಅವನ ಅಂತ್ಯಕ್ರಿಯೆಗಾಗಿ ಇನ್‌ಸ್ಟಿಟ್ಯೂಟಿನ ಹಲವು ಸದಸ್ಯರು ಓಡಾಡುತ್ತಿದ್ದರು.

ತನ್ನ ಸಾವನ್ನು ನಿರೀಕ್ಷಿಸಿದವನಂತೆ ಅವನಾಡಿದ ಮಾತುಗಳು ನಮ್ಮನ್ನು ವಿಚಲಿತರನ್ನಾಗಿಸಿತ್ತು. ಈ ಬಗ್ಗೆ ಎಲ್ಲರೂ ಮಾತನಾಡುತ್ತಿದ್ದರು, ಚರ್ಚಿಸುತ್ತಿದ್ದರು. ನಾನು ಹೆದರಿದೆ. ನನ್ನ

ತೂಕವೂ ಇಳಿಯಿತು. ಬೇರಾರ ಮಾತೂ—ಅದು ನನ್ನ ಕೆಲಸಕ್ಕೆ ಸಂಬಂಧಿಸಿದ್ದಲ್ಲ ಎನಿಸಿದರೆ—ಅಸಹ್ಯವಾಯಿತು. ಕೆಲಸದ ವಿನಾ ಮತ್ತೇನೂ ಕಾಣಿಸುತ್ತಿರಲಿಲ್ಲ.

ಪತ್ರಿಕೆಯ ಹೊಸ ಸಂಚಿಕೆ ಬಂದಾಗ ಅದರಲ್ಲಿಯ ಲೇಖಕರಲ್ಲಿ ಸನ ಹೆಸರಿತ್ತು. ಪತ್ರಿಕೆಯ ಅಚ್ಚಿನ ಪುಟದ ವಿನಾ ಮತ್ತೆಲ್ಲಾ ಕಾಣದಾಯ್ತು. ನಡುಗುವ ಬೆರಳಿನಿಂದ ಪುಟಗಳನ್ನು ತಿರುವಿದೆ. ಸಣ್ಣ ಅಕ್ಷರಗಳಲ್ಲಿ ಪುಟದ ಕೆಳಭಾಗದಲ್ಲಿ ಅಚ್ಚು ಮಾಡಿದ್ದ ಟಿಪ್ಪಣಿ ಕಾಣಿಸಿತು. ಅತಿ ಹೀನಾಯ ಮಾನವಾದ ಬೈಗುಳಕ್ಕೆ ಅದೇ ಸ್ಥಳ. ಅದರಲ್ಲಿ ನನ್ನ ಹೆಸರು. ತುಂಬಾ ನಾಜೂಕಾದ ಮಾತು, ಆದರೆ ನೇರವಾಗಿ ಎದೆ ಸೀಳುವಂಥದು. ಮತ್ತೆ ಒಂದು ತಿಪ್ಪರಲಾಗ ಹೊಡೆದು ನನ್ನ ಹಳೆಯ ಗೂಡಿನಲ್ಲಿ ಬಂದು ಸೇರಿದೆ.

ನನ್ನ ಕೆಲಸವನ್ನು ಮೂಲೆಗೊತ್ತಿದೆ. ನನ್ನ ಬೆಂಬಲಿಗರ ಪ್ರೋತ್ಸಾಹದಿಂದ ಒಂದು ಲೇಖನ ಬರೆದೆ. ಅದರಲ್ಲಿ ಮೂರು ಟಿಪ್ಪಣಿಗಳನ್ನು ಸೇರಿಸಿದ್ದೆ. ಇದರಿಂದ ಸನಿಗೆ ಸಮಾಧಿ ಕೊಟ್ಟ ತೆಯೇ.

ಮತ್ತೆ ಅದೇ ಪರಿಚಿತ ಹಾದಿಯಲ್ಲಿದ್ದೆ. ನನ್ನನ್ನೇ ಅನುಸರಿಸುತ್ತಾ ಕಾಯುತ್ತಿದ್ದ ವ್ಯಕ್ತಿ ಈಗ ನನ್ನ ನೆನಪಿನಿಂದ ಮರೆಯಾಗಿತ್ತು. ಅವನ ಅಂತ್ಯಸಂಸ್ಕಾರದೊಂದಿಗೇ ಆ ವ್ಯಕ್ತಿಯ ಸುಳಿವೂ ಮತ್ತೆ ಸಿಕ್ಕಿರಲಿಲ್ಲ. ದರೋಡೆಖೋರರ ಗುಂಪಿನ ವ್ಯಕ್ತಿಯೇ ಅದಿರಬೇಕೆಂದುಕೊಂಡೆ.

ನನ್ನ ಉತ್ತರವನ್ನು ಹೊಂದಿದ್ದ ಸಂಚಿಕೆಯ ಪ್ರತಿಯನ್ನು ತೆಗೆದುಕೊಂಡ ಸ್ವಲ್ಪ ಕಾಲದ ನಂತರ—ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ, ಸಂಪಾದಕನಿಂದ ಮತ್ತೊಂದು ಲೇಖನ ಬರೆಯ ಬೇಕೆಂಬ ಆಮಂತ್ರಣ ಸ್ವೀಕರಿಸಿ ಆತನ ಕಛೇರಿ ಯಿಂದ ಹೊರಬರುತ್ತಿದ್ದಾಗ- ನನ್ನನ್ನು ಯಾರೋ ಗಮನಿಸುತ್ತಿದ್ದಾರೆ ಎನಿಸಿತು. ಹಿಂತಿರುಗಿ ನೋಡಿದೆ, ಯಾರೂ ಕಾಣಿಸಲಿಲ್ಲ. ನೆಲಸಮ ಗೊಳಿಸುತ್ತಿದ್ದ ಕಟ್ಟಡದ ಗೋಡೆಗಳ ಹಿಂದೆ ನೆರಳು ಮರೆಯಾಗುತ್ತಿತ್ತು.

ಅಂದು ನನ್ನ ಮುವ್ವತ್ತನೆಯ ಜನ್ಮದಿನ. ಹಲವು ಮಿತ್ರರೊಂದಿಗೆ ಅಂದಿನ ಸಂಜೆ ಕಳೆಯ ಬೇಕೆಂಬುದು ನಿರ್ಧಾರವಾಗಿತ್ತು. ನಡು ಹಗಲಲ್ಲೇ ಈ ನೆರಳಿನ ಛಾಯೆ ನನ್ನ ಸಂಜೆಯ ಜನ್ಮ ದಿನದ ಕೂಟದ ಮೇಲೆ ಬಿದ್ದಾಗ ನನ್ನ ಮನಃಸ್ಥಿತಿಯನ್ನು ನೀವೇ ಊಹಿಸಿ.

ನೇರವಾಗಿ ಮನೆಗೆ ನಡೆದೆ. ನನಗಾಗಿ ನನ್ನ ಮಿತ್ರನೊಬ್ಬ ಕಾಯುತ್ತಿದ್ದ. ಹೊರ ಮೊಗಸಾಲೆಯಲ್ಲಿ ಟೆಲಿವಿಷನ್ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಾ ಸಂಜೆಯನ್ನು ಕಳೆಯುವುದು ನನ್ನ ವಾಡಿಕೆ. "ಸಂಜೆಯ ಪಾರ್ಟಿಗೆ ಸಿದ್ಧತೆ?" ಎಂದು ಕೇಳಿದ ಮಿತ್ರ.

"ಆರೋಗ್ಯ ಸರಿಯಿಲ್ಲ. ಪಾರ್ಟಿ ಈಗ ಬೇಡ."

"ಇಂಥಾ ದಿನ ಹೀಗೆ ಮೂಲೆಯಲ್ಲಿ ಕುಳಿತಿರುವುದು ಸರಿಯೇ? ಮನುಷ್ಯನಿಗೆ ಮುವ್ವತ್ತನೆಯ ವರ್ಷ ಅಪೂರ್ವವಾದುದು," ಎಂದು ವರ್ಣ ರಂಜಿತ ಟೈಯನ್ನು ತೀಡುತ್ತ ಮೆಲ್ಲನೆ, "ಬನ್ನಿ, ಅತ್ಯುತ್ತಮ ವೈನ್ ತಂದಿರುವೆ," ಎಂದ.

ನಾವು ಮಾತನಾಡುತ್ತಿದ್ದಾಗ ದೂರದ ಮೂಲೆ ಯಲ್ಲಿ ಒಂದು ಹೆಣ್ಣು ಕುಳಿತಿದ್ದು ಗಮನಕ್ಕೆ ಬಂತು. ಆಕೆ ಪರಿಚಿತಳಲ್ಲ. ನೋಡಿದ ನೆನಪೂ ಇರಲಿಲ್ಲ. ತುಂಬಾ ಹೊತ್ತಿನಿಂದ ಆಕೆ ಕಾಯುತ್ತಾ ಕುಳಿತಿರಬೇಕೆನಿಸಿತು. ಎದ್ದು ನನ್ನತ್ತ ಎರಡಡಿ ಇರಿಸಿದಳು. ನನ್ನ ಮಿತ್ರನ ಮಾತು ನನಗೆ ಕೇಳಿಸಲಿಲ್ಲ. ಮೂವತ್ತರ ಅಂಚಿನಲ್ಲಿದ್ದ ಸುಂದರಿ. ಅವಳ ಮುಖದ ಉಬ್ಬು ತಗ್ಗುಗಳು ತುಂಬಾ ಮುದ್ದಾಗಿದ್ದವು. ಆದರೂ ಅವಳ ಕಣ್ಣಲ್ಲಿ ದುಃಖದ ನೆರಳು. ಮುಖದಲ್ಲಿ ನೀರಸ ಭಾವ. ಮಾತನಾಡಿದಾಗಲೂ ಸೌಂದರ್ಯ ಅವಳ ಮೆಲು ನುಡಿಯಲ್ಲಿ ಪ್ರತಿಧ್ವನಿಸುತ್ತಿತ್ತು.

ಘಟಿಕಾಯಂತ್ರದಿಂದ ಜಾರಿ ಬಂದು ನೆನಪಿ ನಿಂದ ಅಳಿಸಿಹೋದ ಆ ಸ್ವರ್ಣಕಣ ಮತ್ತೊಮ್ಮೆ ನೆನಪಾಯಿತು. ಅದು ಸ್ಮೃತಿಯಿಂದ ದೂರವಾಗಿತ್ತು; ಅದು ಇರಲೇ ಇಲ್ಲ ಅನಿಸಿತ್ತು. ಆದರೆ ಈಗ ಈ ಹೊಸ ಘಳಿಗೆ ನನ್ನನ್ನು ವರಿಸುತ್ತಿದೆ.

"ಜನ್ಮದಿನಕ್ಕಾಗಿ ಇದನ್ನು ನಿಮಗೆ ಅರ್ಪಿಸ ಬೇಕೆಂದು ಹೇಳಿದ್ದಾರೆ," ಎಂದ ಅವಳ ಧ್ವನಿಯಲ್ಲಿ ನಿರ್ಲಿಪ್ತತೆ, ಮಾರ್ದವ ಇತ್ತು. ಸ್ಟೀಲ್ ಚೈನಿನ ತೂಕವಾದ ಗಡಿಯಾರವನ್ನು ನನ್ನ ಕೈಯಲ್ಲಿರಿಸುತ್ತಾ, "ಇದು ಕೂಡ ನಿಮಗೆ

ಕೊಡ ಹೇಳಿದ್ದಾರೆ," ಎಂದು ತನ್ನ ಬ್ಯಾಗಿನಿಂದ ಒಂದು ಲಕೋಟೆ ತೆಗೆದು ಕೊಟ್ಟಳು.

"ಅವರಿಂದಲೇ?"

"ಹೌದು."

ಕೊಳ್ಳಲಾರದ, ಕೊಳ್ಳೆ ಹೋಗಲಾರದ ಪ್ರೇಮ, ಸತ್ಯವಾದ ನಿಷ್ಠಾವಂತ ಪ್ರೇಮ ಸತ್ತು ಇಲ್ಲವಾಗಿರುವ ಅವನಿಗೆ ತಿಳಿದಿತ್ತೇ? ಅಂತಹುದು ಅವರ ಮಧ್ಯೆ ಇತ್ತೆ? ಎಂದು ಕೇಳಬೇಕೆಂದು ಕೊಂಡೆ. ನಾನು ಬಾಯ್ತೆರೆಯುವ ಮೊದಲೇ ಅದನ್ನು ನನ್ನ ಮುಖದ ಲಕ್ಷಣದಿಂದಲೇ ಗ್ರಹಿಸಿ ನನ್ನ ಮಾತು ತಡೆಯುವವಳಂತೆ ಕೈ ತೋರಿ, "ಹೌದು. ಇತ್ತು, ಇದೆ, - ಇರುತ್ತದೆ. ಆದರೆ ಅವರಿಗೇ ನಂಬಿಕೆ ಇರಲಿಲ್ಲ. ನಾನು ಆಟವಾಡುತ್ತಿರುವೆ ಎಂದೇ ಅವರ ಭಾವನೆಯಾಗಿತ್ತು. ಅರ್ಥವಾಯಿತೇ? ಆಸ್ಪತ್ರೆಯಲ್ಲಿ ಅವರೊಂದಿಗೆ ಮಾತನಾಡಲು ಅವಕಾಶ ಕೊಟ್ಟಾಗ ಒಂದು ಗಂಟೆಯ ಕಾಲ 'ಹೌದು...ಹೌದು...ಹೌದು..' ಎಂದು ಹೇಳುತ್ತಲೇ ಇದ್ದೆ. ಆದರೆ ಯಾವುದೂ ಅವರ ಕಿವಿಗೆ ಬೀಳಲೇ ಇಲ್ಲ," ಎಂದಳು.

ತಲೆ ತಗ್ಗಿಸಿದೆ. ಅವನನ್ನು ನಾನು ಬಲ್ಲೆ. ಅಭಾಗ್ಯ ಮಿತ್ರ!

ಗಡಿಯಾರವನ್ನು ಜೇಬಿನಲ್ಲಿರಿಸಿ ಆಕೆಯನ್ನು ಬೀಳ್ಕೊಟ್ಟು ಹಿಂದಕ್ಕೆ ಬಂದೆ.

ದರೋಡೆಕೋರರ ಪ್ರಧಾನಿಯನ್ನು ನೋಡಲು ಬರುತ್ತಿದ್ದ ಹೆಣ್ಣು ಈಕೆಯೇ. ಆಕೆಗೆ ನನ್ನ ಪರಿಚಯವಿಲ್ಲ. ಯಾವುದನ್ನೂ ಎಂದೂ ಆಕೆ ಗಮನಿಸುವವಳಲ್ಲ. ದಾರಿಗೆ ಅಡ್ಡವಾಗಿ ನೀವೇ ನಿಂತಿದ್ದರೂ ಅದನ್ನು ಗಮನಿಸದೆ ನೇರವಾಗಿ ಹೆಜ್ಜೆ ಹಾಕುತ್ತಾ ಬರುತ್ತಾಳೆ. ಪ್ರೇಮ ಅವಳನ್ನೂ ಕುರುಡಾಗಿಸಿದೆ.

ನನ್ನ ಅಧ್ಯಯನಾಗಾರಕ್ಕೆ ಹೋಗಿ ಕುಳಿತು ಲಕೋಟೆಯನ್ನು ತೆರೆದೆ:

**"ನನ್ನ ಕೊಲೆ ಆದರೆ ಈ ಪತ್ರ ನಿನಗೆ ತಲುಪುತ್ತದೆ. ನಿನ್ನಲ್ಲಿ ಪ್ರತಿಭೆ ಇದೆ, ವಿದ್ವತ್ತಿದೆ. ನನ್ನನ್ನು ಇತರರಿಗಿಂತಲೂ ನೀನೇ ಹೆಚ್ಚಾಗಿ ತಿಳಿದಿರುವುದರಿಂದ ನಿನಗೇ ಈ ಪತ್ರ ಬರೆಯುತ್ತಿರುವೆ. ಕಾಲದ ಮೌಲ್ಯದ ಬಗ್ಗೆ ಅವಶ್ಯವಾದ ತಿಳಿವು ನಿನ್ನಲ್ಲಿ ಮೂಡಲಿ. ಬಾಳು ನಮಗೆ ಒಮ್ಮೆ ಮಾತ್ರ ದೊರೆಯುತ್ತದೆ. ಆಗ ಉಸಿರಾಡಲೂ ಕಾಲ ವ್ಯರ್ಥ ಮಾಡದೆ ಗಬಗಬನೆ ರಾಕ್ಷಸ ತುತ್ತುಗಳನ್ನು ನುಂಗಿ ಜೀರ್ಣಿಸಿಕೊಳ್ಳಬೇಕು; ಅತ್ಯಂತ ಪ್ರಮುಖವಾದ ಹೆಚ್ಚು ಮೌಲ್ಯದ ಕಾರ್ಯದಲ್ಲಿ ನಿರತರಾಗಬೇಕು. ಅದು ಯಾವುದು ಎಂದು ಈಗಾಗಲೇ ನಾನು ಹೇಳಿದ್ದೇನೆ. ಅಮೂಲ್ಯವಾದುದು ಸುಖ-ಸಂಪತ್ತುಗಳಲ್ಲ. ಆ ಪರಮಾನಂದವನ್ನು ಅನುಭವಿಸಲು ನೀನು ಉಳಿದಿರುತ್ತೀ ಎಂದೇ ನಂಬಿದ್ದೇನೆ. ಕೋಟ್ಯಂತರ ಮಂದಿಗೆ ನರಕವಾಸವಾಗಿರುವ ಕತ್ತಲೆಯ ಖಂಡವನ್ನು ನೆನಪು ಮಾಡಿಕೋ. ಈ ಕಾಗದ ನಿನ್ನ ಕೈಸೇರಿದ ದಿನವೇ ನಿನ್ನ ನಿಜವಾದ ಹುಟ್ಟುದಿನವಾಗಲಿ........"**

ಸಿಡಿಲಿನಂತೆ ಬಂದೆರಗಿದ ಸಂತೋಷದ ಆವೇಶದಿಂದ ನನ್ನ ಓದು ನಿಂತಿತು. ಅವನಿಗಿಂತ ನಾನೇ ಅದೃಷ್ಟವಂತ ಎನಿಸಿತು. ನನ್ನ ಬಾಳು ನನ್ನ ಈಗಿನ ವಯಸ್ಸಿನಷ್ಟೆ ಅಥವಾ ಎರಡರಷ್ಟು ಉಳಿದಿದೆ ಎನಿಸಿತು.

ಅದೇ ಕ್ಷಣದಲ್ಲಿ ನೆರಳೊಂದು ಕಿಟಕಿಯಲ್ಲಿ ಅಡ್ಡವಾಯಿತು. ಕಿಟಕಿಗೆ ಯಾರೋ ಬಣ್ಣ ಬಳಿಯುತ್ತಿರಬಹುದೆಂದುಕೊಂಡೆ. ಕಾಗದ ಹಿಡಿದೇ ಬೆಳಕಿಗಾಗಿ ಕಿಟಕಿಯ ಬಳಿ ಹೋದೆ.

ವರ್ಷದ ಈ ಕಾಲದಲ್ಲಿ ಮನೆಯ ಹೊರಗೆ ಬಣ್ಣ ಬಳಿಯುವವರು ಏನು ಮಾಡುತ್ತಿದ್ದಾರು ಎಂಬ ಸಂದೇಹದಿಂದ ತಲೆ ಎತ್ತಿ ನೋಡಿದೆ. ಹೊರಗೆ ಕಬ್ಬಿಣದ ಸರಳಿನ ಮೇಲೆ ದೊಡ್ಡ ಗೂಬೆ ನಿಮಿರಿದ ಕಿವಿ, ಕೆದರಿದ ಗರಿಗಳಿಂದ ಪುರಾತನ ಶಿಲ್ಪದಂತೆ ರೂಪಗೆಟ್ಟು ಕುಳಿತಿತ್ತು. ಅದು ನನ್ನ ಗೂಬೆ. ಮೊದಲ ಬಾರಿಗೆ ಅದನ್ನು ಸಾಕಾರ ರೂಪದಲ್ಲಿ ಕಂಡಿದ್ದೆ. ಕಾಗದ ಹಿಡಿದಿದ್ದ ಕೈಯನ್ನು ಅಡಿಸಿದೆ. ಅದು 'ಘೂಬ...ಎಂ...' ಎಂದು ಮೌನವಾಯಿತು. ನಾನೇನು ಮಾಡಿದರೂ ಅದರ ಮೇಲೆ ಯಾವ

ಪರಿಣಾಮವೂ ಆಗಲಿಲ್ಲ.

ಮೈ ನಡುಗಿ ಬೆವರನ್ನು ಸುರಿಸುತ್ತಿತ್ತು. ಏದುಸಿರಿಡುತ್ತಾ ಕರವಸ್ತ್ರವನ್ನು ತೆಗೆದು ಬೆವರನ್ನು ಒರಸಿದೆ. ಮತ್ತೊಮ್ಮೆ ಆಳವಾಗಿ ಉಸಿರೆಳೆದು ನೋಡಿದೆ. ಗೂಬೆ ನಿಶ್ಚಲವಾಗಿ ಕುಳಿತಿತ್ತು. ಬೆವರನ್ನು ಮತ್ತೆ ಒರೆಸಿದೆ. ಮೆಲ್ಲನೆ ಮನೆಯಿಂದ ಹೊರಕ್ಕೆ ಹೆಜ್ಜೆ ಇಟ್ಟರೆ ಕೊರೆಯುವ ಛಳಿ. ಹೋಗುವುದೆಲ್ಲಿಗೆ? ನರ ದೌರ್ಬಲ್ಯ ಚಿಕಿತ್ಸಾನಿಪುಣನಾದ ನನ್ನ ಹಳೆಯ ಮಿತ್ರನನ್ನೇಕೆ ನೋಡಬಾರದು? ನನ್ನ ಸಮಸ್ಯೆಗೆ ಅವನಿಂದ ಪರಿಹಾರ ಖಂಡಿತ ಸಿಗುವುದು.

ಸಂಜೆಗತ್ತಲ ಛಾಯೆ. ಅಲ್ಲಿ ಹೂಗಳ ಕೆಂಪು ತುಂಬಿದ ರಸ್ತೆಯಲ್ಲಿ ವೇಗವಾಗಿ ಸಾಗಿದೆ. ನನ್ನ ಹಿಂದೆಯೇ ಏನೋ ಹಾರಿದ ಸಪ್ಪಳ. ಹಿಂತಿರುಗಿ ನೋಡಿದರೆ ಕೆದರಿದ ಗರಿಯ ನಿಮಿರಿದ ಕಿವಿಯ ಪ್ರಾಣಿ ಬಿಳಿಯ ಮರದ ಕೊಂಬೆಗಳ ಮಧ್ಯೆ ಕಾಣಿಸಿತು–ನನ್ನಷ್ಟೇ ಗಾತ್ರದ ಗೂಬೆ!

ವೈದ್ಯಮಿತ್ರ ತುಂಬಾ ವ್ಯಸ್ತನಾಗಿದ್ದ. ಅವನ ಕನ್ಸಲ್ಟಿಂಗ್ ರೂಮಿನ ಬಿಳಿಯ ಬಾಗಿಲ ಮುಂದೆ ತುಂಬಾ ಹೊತ್ತು ಕುಳಿತಿದ್ದೆ. ಬಾಗಿಲ ಹಿಂದೆ ಹೆಜ್ಜೆಯ ಸಪ್ಪಳ ಒಂದೇ ಸಮನೆ ಕೇಳಿಸುತ್ತಿತ್ತು. ಕೊನೆಗೊಮ್ಮೆ ಬಾಗಿಲು ತೆರೆದುಕೊಂಡು ಬಿಳಿಯ ಬಟ್ಟೆಗಳಲ್ಲಿ ಹೊರಬಂದ. ನೆತ್ತಿಯ ಮೇಲಿದ್ದ ಟೊಪ್ಪಿಗೆಯನ್ನು ಹುಬ್ಬುಗಳನ್ನು ಮುಚ್ಚುವಂತೆ ಕೆಳಗೆ ಎಳೆಯಲಾಗಿತ್ತು. ಮುಖ ಬಿಳಿಚಿಕೊಂಡು ರಾತ್ರಿ ನಿದ್ದೆ ಇಲ್ಲದವನಂತೆ ಕಾಣಿಸುತ್ತಿದ್ದ.

"ಈಗ ಹೇಗಿದೆ?" ಎಂದು ಬೇರೆ ಕೋಣೆಯಿಂದ ಯಾರೋ ಕೇಳಿದರು.

"ಹಾಗೇ ಇದೆ." ನರಗಳ ಸೆಳೆತದಿಂದ ಮುಖವೆಲ್ಲಾ ಮುದುಡಿಸಿಕೊಂಡು, "ಉಪಯೋಗವೇ

ಇಲ್ಲ," ಎಂದ.

ಎದ್ದು ನಿಂತೆ. ನನ್ನತ್ತ ಬಂದು ಗುರುತಿಸಿ ಕೈ ಚಾಚಿದ. "ಲೋಕಾಭಿರಾಮವಾಗಿ ಮಾತಾಡಲು ಬಂದಿದ್ದರೆ ಇದು ಸಮಯವಲ್ಲ."

"ಅದಕ್ಕಲ್ಲ. ರೋಗಿಯಾಗಿ ಬಂದಿರುವೆ."

"ಹಾಗಿದ್ದರೆ ಸರಿ, ಬಾ," ಎಂದು ನನ್ನ ಬೆರಳ ತುದಿಗಳನ್ನು ನೋಡುತ್ತಾ, "ನಿನ್ನ ವಯಸ್ಸು?" ಎಂದು ಕೇಳಿದ.

"ಮೂವತ್ತು."

"ನಮ್ಮಿಬ್ಬರ ವಯಸ್ಸೂ ಒಂದೇ ಎಂಬುದೇ ಮರೆತಿತ್ತು. ನಿನಗೆ ಯಾವುದರ ಚಿಂತೆ? ನಿನ್ನ ಬೆನ್ನ ಹಿಂದೆ ಯಾರಾದರೂ ಇದ್ದಾರೇನು?"

"ಅದು ಯಾರೆಂದು ಹೇಳಿದರೆ ನೀನು ನಂಬಲಾರೆ. ನಕ್ಕು ನನ್ನನ್ನು ಹುಚ್ಚನೆನ್ನುವೆ."

"ನನಗೆ ಗೊತ್ತು. ನಾನೇ ತೋರಿಸಲೇ? ಒಳಗೆ ಬಾ."

ಅವನ ಕೋಣೆಯ ಕಿಟಕಿಯ ಬಳಿಗೆ ಕರೆದೊಯ್ದು, "ಅದೇ ಗೂಬೆ," ಎಂದೆ ಮೆಲ್ಲನೆ. ಅದು ಹೊರಗೆ ಕುಳಿತಿತ್ತು.

"ಹೌದು. ಅದು ನಿನ್ನದು ಮಾತ್ರವಲ್ಲ, ನನ್ನದು ಕೂಡ. ಎಲ್ಲಿ ನಿನ್ನ ಕೈ ಇನ್ನೊಮ್ಮೆ ನೋಡೋಣ. ಹೌದು...ಹೌದು..."

ತನ್ನ ಮೇಜಿನ ಕಡೆ ನಡೆದು ನನ್ನ ಕಡೆ ಬೆನ್ನು ಮಾಡಿ ಸ್ವಲ್ಪ ಕಾಲ ನಿಂತಿದ್ದು ನಂತರ ನನ್ನ ಕಡೆಗೆ ತಿರುಗಿ, "ಇಂದೋ ನಾಳೆಯೋ ನಿನಗೆ ತಿಳಿದೇ ತಿಳಿಯುತ್ತೆ. ಅದನ್ನು ನಾನೇ ಹೇಳಿಬಿಡಲೇ?...ಇನ್ನೊಂದು ವರ್ಷ ಕಾಲ ಮಾತ್ರ ನೀನು ಇರುತ್ತೀ..." ಎಂದ ಗಂಭೀರವಾಗಿ.

ಕಾಲಿಗಾಧಾರವಾಗಿದ್ದ ನೆಲವೇ ಕುಸಿಯಿತು. ಅವನು ನನ್ನನ್ನು ಹಿಡಿದು ಕುರ್ಚಿಯ ಮೇಲೆ ಕೂರಿಸದಿದ್ದರೆ ನಾನು ಕುಸಿದು ಬೀಳುತ್ತಿದ್ದೆ.

ಸಾವಿಗೆ ಹೆದರದ ಜನರೂ ಇರುವರು. ಅದು ನನಗೂ ಗೊತ್ತು. ಸಾವಿನಿಂದ ಅವರೇನೂ ಕಳೆದುಕೊಳ್ಳುವುದಿಲ್ಲ. ಆದರೆ ನಾನು ಸಾವಿಗೆ ತುಂಬಾ ಹೆದರಿದ್ದೆ. ನನ್ನ ಕಾರ್ಯ ಮುಗಿದೊಡನೆಯೇ ಸಾಯಲು ಸಿದ್ಧ. ಆದರೆ ಈಗ?

"ನಿನ್ನ ಮಾತು ನಂಬಲಾರೆ." ಎಂದೆ ಮೆಲ್ಲನೆ.

"ಮನೆಗೆ ಓಡು. ಒಂದು ವರ್ಷ ಪೂರ್ತಿ ನಿನ್ನದು. ಓಡು," ಎಂದ. ವೈದ್ಯನ ಹುಬ್ಬು ಏರಿತ್ತು, ಸ್ವರದಲ್ಲಿ ಆತುರವಿತ್ತು.

"ನನಗೆ ನಂಬಿಕೆ ಇಲ್ಲ."

"ಹೊರಗೆ ನಡೆ. ನನ್ನ ಕಾಲವನ್ನೇಕೆ ಹಾಳು ಮಾಡುತ್ತೀ. ನನಗಿನ್ನು ಹದಿನೆಂಟು ತಿಂಗಳ ವ್ಯವಧಿ ಮಾತ್ರವಿದೆ ಗೊತ್ತೇ?" ಎಂದಬ್ಬರಿಸಿದ.

ಹೊರಕ್ಕೆ ಹೋಗುತ್ತಿದ್ದಂತೆಯೇ ತಡೆಯುತ್ತಾ ತುಂಬಾ ತೀವ್ರವಾಗಿ ಒದರಿದ: "ಇದು ಎಲ್ಲರೂ ಬಲ್ಲ ಖಾಯಿಲೆ. ಸಾಮಾನ್ಯವಾಗಿ ಸೃಜನಶೀಲರು, ಕಲಾವಿದರು, ವಿಜ್ಞಾನಿಗಳು ಇದಕ್ಕೆ ತುತ್ತಾಗುತ್ತಾರೆ. ಅವರಲ್ಲಿಯೇ ಈ ಖಾಯಿಲೆ ತುಂಬಾ ಪ್ರಖರವಾಗಿರುವುದು. ಸಾಮಾನ್ಯರಲ್ಲಿ ಈ ಸೋಂಕು ಇತರರ ಗಮನಕ್ಕೆ ಬರದಂತಿದ್ದು ಬೇರೆಯವರು ಗಮನಿಸುವುದಕ್ಕೆ ಮೊದಲೇ ಸಾಯುತ್ತಾರೆ."

"ಇದಕ್ಕೆ ಔಷಧಿ ಕಂಡುಹಿಡಿದಿಲ್ಲವೇ?..."

"ಈ ರೋಗದ ಬಗ್ಗೆ ತುಂಬಾ ತಿಳಿದುಕೊಂಡಿದ್ದೇವೆ. ಆದರೆ ಇದಕ್ಕೆ ಮದ್ದು ಸಿಕ್ಕಿಲ್ಲ. ಆದರೂ ಒಂದೆರಡು ಸಂಗತಿಗಳು ಗೊತ್ತು," ಎಂದವನು ಅರ್ಥವಾಗದ ಈ ಮಾತು ಸೇರಿಸಿದ: "ಗೂಬೆಯನ್ನು ಸ್ಪಷ್ಟವಾಗಿ, ಶುದ್ಧವಾಗಿ ಕಂಡವರು ಅರ್ಧ ಬದುಕಿದಂತೆ."

ನನ್ನ ಹಿಂದೆಯೇ ಬಾಗಿಲು ಮುಚ್ಚಿತು.

ಗೂಬೆ ನನಗೆ ಸ್ಪಷ್ಟವಾಗಿ ಕಾಣಿಸುತ್ತದೆಯೇ? – ಅದನ್ನು ನೋಡಿ ಪರೀಕ್ಷಿಸಬೇಕು.

ಮೌನವನ್ನು ಆಲಿಸುತ್ತಾ ನಿಂತೆ. ದರೋಡೆಕೋರರ ಪ್ರಧಾನಿಯ ಗಡಿಯಾರದ 'ಟಿಕ್... ಟಿಕ್' ನನ್ನ ಜೇಬಿನಿಂದ ಹೊರಕ್ಕೆ ಸಿಡಿಯುತ್ತಿತ್ತು. ಸೆಕೆಂಡುಗಳನ್ನು ಎಣಿಸುವ ಕಾರ್ಯ ಸಾಗಿಸಿತ್ತು. ಅದನ್ನು ಜೇಬಿನಿಂದ ಹೊರತೆಗೆದು ಕೀಲಿ ಕೊಟ್ಟೆ. ಇಪ್ಪತ್ತು ಸುತ್ತು ತಿರುಗಿತು. ಒಂದು ವರ್ಷ ಕಾಲ ಅವಿಚ್ಛಿನ್ನವಾಗಿ ನಿರಂತರವಾಗಿ ನಡೆಯಲು ಅದು ಈಗ ಸಿದ್ಧವಾಗಿತ್ತು.

'ನಾನು ಎಲ್ಲಾ ಬೇಗ ಬೇಗ ಮುಗಿಸಬೇಕು. ಎಲ್ಲವನ್ನೂ ಯೋಚಿಸಿ ನಡೆಸಬೇಕು,' ಎಂದುಕೊಂಡೆ. ನನ್ನ ಬಾಳಿನಲ್ಲಿ ಮೊದಲ ಬಾರಿಗೆ ನಾನು ಆತುರದಿಂದ ವರ್ತಿಸುತ್ತಿದ್ದೆ. ಕಾರ್ಯ ಮುಗಿಸಬೇಕೆಂಬ ಇಚ್ಛೆಯಿಂದ ದೃಢ ಮನ

ಸ್ಥಿರ ಹೆಜ್ಜೆ ಇರಿಸುತ್ತಿದ್ದೆ.

ಮಂಜು ಕವಿದ ಸಂಜೆ ಮಬ್ಬು ನನ್ನನ್ನು ಆಹ್ವಾನಿಸಲು ದೀಪಮಾಲೆ ಹೊತ್ತಿಸಿತ್ತು. ದೂರದ ನಕ್ಷತ್ರಗಳ ಮಿಣುಕು. ಭರ್ರನೆ ಸಾರಿ ಹೋಗುವ ವಾಹನಗಳ ದೀಪ. ಮೀನಿಗಾಗಿ ಒಂಟಿಕಾಲಿನಲ್ಲಿ ನಿಂತು ಒಂದು ಕಣ್ಮುಚ್ಚಿ ತಪವನ್ನಾಚರಿಸುವ ಕೊಕ್ಕರೆಗಳಂತೆ ಸಾಲಾಗಿದ್ದ ರಸ್ತೆಯ ದೀಪದ ಕಂಬಗಳು.

ಸರಿ. ಮಾಂಸದ ಈ ಮುದ್ದೆ ಸಾಯುತ್ತದೆ; ಕೊಳೆತು, ಹುಳಿತು ಮಣ್ಣಾಗುತ್ತದೆ. ಹಾಳಾಗಲಿ. ಅಂತರಾತ್ಮ– ಅಂತರಂಗದ ಚೇತನ ನಾಶವಾಗುತ್ತದೆಯೇ? ಕಣ್ಮುಚ್ಚಿದೆ. 'ನಾನು ನಾಶವಾಗುವುದಿಲ್ಲ,' ಎಂದಿತು ಅಂತರಾತ್ಮ, ಕತ್ತಲಲ್ಲಿ. ನನ್ನ ಮನಸದ ತಳಮಳದ ಕಾವು ಅದಕ್ಕೆ ತಟ್ಟಿರಲಿಲ್ಲ, ಶಾಂತವಾಗಿತ್ತು. ಗಂಭೀರವಾಗಿತ್ತು. 'ನಾಗರಿಕ ಮನುಷ್ಯನಿಗೆ ಸಾವಿರಾರು ವರ್ಷಗಳ ಇತಿಹಾಸವಿದೆ. ಆದರೂ ಮನುಷ್ಯನಿರ್ಮಿತ ವಸ್ತುಗಳು ಎಷ್ಟು ಕಾಲ ಉಳಿದಿರುತ್ತವೆ? ಚಿಂತಿಸು. ಬಟ್ಟೆ, ಪರಿಕರಗಳು, ಯಂತ್ರ, ಕಟ್ಟಡ ಎಲ್ಲವೂ ಕೆಲವು ದಶಕಗಳಲ್ಲಿ ನಾಶವಾಗುತ್ತವೆ. ಆದರೂ ನಾವು ನೋಡುತ್ತಿರುವುದನ್ನೆಲ್ಲಾ ಹೇಗೆ ಪಡೆದೆವು? ಉತ್ತರ ಸುಲಭ: ಇದೆಲ್ಲಾ ಸಂಚಿತ ಭಾವನೆಗಳ ಸಾಕಾರ– ಬುದ್ಧಿಜೀವಿಯ ಪ್ರಜ್ಞೆ, ವೈದ್ಯಶಾಸ್ತ್ರದ ಜ್ಞಾನ, ಅನುಭವ, ತಾಂತ್ರಿಕ ಪರಿಣತಿ, ಕಲಾಪ್ರತಿಭೆ. ಎಲ್ಲಾ ಗ್ರಂಥಗಳನ್ನು ಸುಟ್ಟು ಬೂದಿ ಮಾಡಿ, ಎಲ್ಲವನ್ನೂ ನಾಶಮಾಡಿ, ಮನುಷ್ಯ ತನ್ನ ಜ್ಞಾನವನ್ನೆಲ್ಲಾ ಮರೆಯುವಂತೆ ಹಲವು ವರ್ಷಗಳು ಪ್ರಯತ್ನಿಸಿದರೂ ಮಾನವ ಮತ್ತೆ ಕಲ್ಪಿಸಿದ ಆಯುಧಗಳಿಂದ ಅದೇ ನಾಗರಿಕತೆಯ ವಿಕಾಸದ ಹಾದಿ ಹಿಡಿಯುತ್ತಾನೆ. ನಿನ್ನ ಮಗ–ಮೊಮ್ಮಗನ ತನಕ ಕಾಯುವ ಅವಶ್ಯಕತೆಯೇ ಇಲ್ಲ–ನಿನ್ನ ಚಿಕ್ಕಂದಿನಲ್ಲಿ ಆಟಕ್ಕೆ ನೀನೇ ತಯಾರಿಸಿದ ಗಾಳಿ ಚಕ್ರವನ್ನು ಅಗೆದು ಹೊರತೆಗೆದು ಏನೋ ಅದ್ಭುತ ಎಂದು ಅದಕ್ಕೆ ತಲೆ ಬಾಗುತ್ತಾನೆ.'

ಯಾವುದೋ ಕಾಣದ ಲೌಡ್‌ಸ್ಪೀಕರಿನಿಂದ ಸಂಗೀತ ಧ್ವನಿ ಹೊರಬಂದು ನಗರವನ್ನೆಲ್ಲಾ ತುಂಬುತ್ತಿತ್ತು. ಆ ಸ್ವರಸಂಯೋಜಕ ಯಾರೋ ತಿಳಿದಿರಲಿಲ್ಲ. ನಿಜವಾಗಿಯೂ ಆ ರಾಗ ನಾನು ಕೇಳಿರಲಿಲ್ಲ. ಅದರಲ್ಲಿ ಬ್ಯಾಂಡಿಲ್ಲ, ಪಿಟೀಲಿಲ್ಲ, ಮತ್ತೆ ಯಾವುದೇ ವಾದ್ಯವಿಲ್ಲ. ನನ್ನ ಭಾವನೆಗಳ ಧ್ವನಿಯೇ ಅದು. ಈ ಧ್ವನಿಯು ಕಿರಿದಾದ ಪೆಟ್ಟಿಗೆಯಲ್ಲಿ—ನನ್ನ ಬಾಳಿನ ಅಲ್ಪ ಕಾಲಾವಧಿಯ ಕಿರುಗಾತ್ರದಲ್ಲಿ—ಸೇರಿಕೊಂಡು ಹಾಡುತ್ತಿರುವುದೇ ಈ ರಾಗ ಎನಿಸಿತು.

ಅದೃಶ್ಯ ರಾಗಸಂಯೋಜಕ ನುಡಿಸಿದ ಗೀತೆ: 'ಇದ್ದೆ ನಾನೂ ಮನುಕುಲದಲಿ: ನೂರ್ಕಾಲ ಬಿಟ್ಟು ಬಂದೆ ಅನುಭವ ಸ್ವರ ನಿನ್ನ ನೆರವಿಗೆ. ಕೇಳು ನೇಹಿಗ: ಬಾಳು ಕಿರಿದಾದವನ ಬಾಳ್ಜ್ಯೋತಿ ಪ್ರಖರ, ಪ್ರಜ್ವಲ. ಪಡೆದು ಆಶಿಸದೆ ಇರುವ ಬಾಳಿಗಿಂತ ಆಶಿಸಿ ಪಡೆವ ಬಾಳೇ ಲೇಸು. ಪ್ರಿಯವೆನಗೆ ಜೀವನ. ಆ ಪ್ರೇಮ ನಿನ್ನ ಉಡಿಯಲ್ಲಿರಿಸಿ ತೂಗಲೇ?'

ಕವಿಯ ಕಂಠ ಕೇಳಿಸಿತು: 'ಉತ್ತರಿಸು ಮಿತ್ರ. ನಾನೂ ಅಲ್ಪಾಯುವೇ, ಆದರೂ ಸಂತೋಷದಿಂದಿದ್ದೆ. ನಿನ್ನ ಬಾಳು? ಕೃತಜ್ಞತೆಯಿಂದ ಇದುವರೆಗೆ ಯಾರಾದರೂ ನಿನಗೆ ಕೈಬೀಸಿದ್ದಾರೆಯೇ? ನಿನ್ನ ಹೃದಯ ಎಂದಾದರೂ ಭಾವ ತುಂಬಿ ಯಾರಿಗಾಗಿಯಾದರೂ ಸ್ಪಂದಿಸಿದೆಯೇ? ನಿನ್ನತ್ತ ಪ್ರೇಮಪೂರಿತರಾಗಿ ನೋಡಿ ನಿನಗಾಗಿ ಯಾರಾದರೂ ಪರಿತಪಿಸಿದ್ದಾರೆಯೇ?'

ಇವಾವೂ ನನ್ನ ಅನುಭವಕ್ಕೆ ಬಂದಿರಲಿಲ್ಲ. ಗರಬಡಿದವನಂತಾದೆ. ನಾನು ಪ್ರೇಮಿಸಿದ್ದೆ, ನಿಜ. ಆದರೆ ಯಾರೂ ನನ್ನನ್ನು ಆ ದೃಷ್ಟಿಯಲ್ಲಿ ನೋಡಿರಲಿಲ್ಲ. ಮೈತ್ರಿಯ ಮಧುರ ಬಾಂಧವ್ಯದ ಸವಿ ದಕ್ಕಿರಲಿಲ್ಲ. ಯಾರ ಮಮತೆಯನ್ನೂ ನಾನು ಗಳಿಸಿರಲಿಲ್ಲ. ತಲೆ ತಗ್ಗಿಸಿ ಈ ಸಂಗೀತ ಕೇಳುವುದನ್ನು ನಿಲ್ಲಿಸಿದೆ. ನಗರದ ದೀಪಗಳು ನನ್ನ ಸುತ್ತಲೂ ಮಂಕಾಗಿ ಹರಡಿಕೊಳ್ಳುತ್ತಿದ್ದವು.

ಈಗ ನನಗೆ ಕೇಳಿಸುತ್ತಿದ್ದುದು ಒಂದೇ ಧ್ವನಿ– ಸಂತೋಷದ ಸಂಗೀತ. ನನ್ನ ಗಡಿಯಾರದ ಕರ್ತವ್ಯಪ್ರಜ್ಞೆಯ ತಾನ. ದರೋಡೆಕೋರರ ಪ್ರಧಾನಿ ನನಗೆ ಉಡುಗೊರೆಯಾಗಿ ಕಳುಹಿಸಿದ್ದ ಗಡಿಯಾರ. ಈಗ ಅದು ನನ್ನ ಬಾಳಿನ ಸೆಕೆಂಡುಗಳನ್ನು ಕತ್ತರಿಸಿ ಹಾಕುತ್ತಿತ್ತು.

ಓಡುತ್ತಾ ಹೋಗಿ ಟ್ಯಾಕ್ಸಿಯಲ್ಲಿ ಹಾರಿ,

"ಬೇಗ ಲ್ಯಾಬೊರೇಟರಿಗೆ ನಡೆ...ಬೇಗ..." ಎಂದೆ.

ಟ್ಯಾಕ್ಸಿಯನ್ನು ಕೆಳಗೆ ಕಾಯಲು ಹೇಳಿ ಮೆಟ್ಟಲೇರಿ ಬೆಂಕಿಯ ಮುಂದೆ ಕುಳಿತಿದ್ದ ಮುದುಕಿಯನ್ನು ಎಚ್ಚರಿಸಿ, "ನನ್ನ ಕಾಗದ ಗಳನ್ನು ಕೊಡು. ಬೇಗ...ಈ ಬೆಳಿಗ್ಗೆ ಕೊಟ್ಟೆ ನಲ್ಲಾ ಅವು..." ಎಂದೆ.

"ಇನ್ನೂ ಅದು ನೆನಪಿದೆಯಾ ಬಿಡಯ್ಯಾ!" ಎಂದಳು ನಸುನಗೆ ಬೀರುತ್ತಾ, ಆ ವೃದ್ಧೆ.

'ಅಯ್ಯೋ' ಎಂದುಕೊಂಡು ಉರಿಯುತ್ತಿದ್ದ ಬೆಂಕಿಯಲ್ಲಿ ಅದರ ಉಳಿಕೆಗಾಗಿ ಹುಡುಕಿದೆ.

"ಅದೆಲ್ಲಾ ಸುಟ್ಟಾಯಿತು. ಒಳ್ಳೇ ಹಿತವಾದ ಬೆಂಕಿ. ಅಷ್ಟು ಚೆನ್ನಾಗಿ ಸುಡುವುದು ನಿಮ್ಮ ಪೇಪರ್ಸ್. ಆ ಹಿತವಾದ ಶಾಖಕ್ಕೆ ನಾನೇ ನಿದ್ರಿಸಿದೆ!"

"ಟಿಕ್–ಟಿಕ್, ಟಿಕ್–ಟಿಕ್, ಟಿಕ್–ಟಿಕ್" ಎನ್ನುತ್ತಿತ್ತು, ಜೇಬಿನಲ್ಲಿದ್ದ ಅವನ ಗಡಿಯಾರ.

ಹಲ್ಲು ಕಚ್ಚುತ್ತಾ ಹೋಗಿ ಅಲ್ಲಿದ್ದ ಪರಿಕರ ಗಳನ್ನೆಲ್ಲಾ ಟ್ಯಾಕ್ಸಿಯಲ್ಲಿ ತುಂಬಿದೆ.

ಎರಡು ಕೈಗಳಲ್ಲೂ ಪರಿಕರಗಳ ಪೊಟ್ಟಣ ಗಳನ್ನು ಹಿಡಿದು ಪಡಸಾಲೆಗೆ ಬರುವ ವೇಳೆಗೇ ನಿತ್ಯವೂ ಬರುವವರೆಲ್ಲಾ ಆಗಲೇ ಸೇರಿದ್ದರು. "ಪಾರ್ಟಿ ಮುಂದೂಡೋಣವೇ?" ಎಂದು ಕೇಳಿದ ಆ ಮಿತ್ರ. ಗುಂಡಿಯನ್ನು ತಿರುಗಿಸಿದೊಡನೆಯೇ ಫುಟ್‌ಬಾಲ್ ಆಟಗಾರರ ಕಾಲುಗಳು ಟೆಲಿವಿಷನ್ ತೆರೆಯ ಮೇಲೆ ಕಾಣಿಸಿಕೊಂಡವು. ಅವರೆಲ್ಲರ ಕಣ್ಣುಗಳು ಅರಳಿ ತೆರೆಯ ಮೇಲೇ ನೆಟ್ಟಿದ್ದವು. ಗಡಿಯಾರದ 'ಟಿಕ್‌ಟಿಕ್' ನಾದ ನನ್ನನ್ನು ಎಚ್ಚರಿಸಿತು. ಎರಡು ಸಾವಿರ ವರ್ಷಗಳ ಕಾಲ ಆ ಆಟ ನಡೆದರೂ ಅವರು ಅದೇ ರೀತಿ ಕುಳಿತು ತಾವರೆ [illegible] ಕಾಲ ಕಳೆದುಕೊಂಡು [illegible]ರು. ಅವರನ್ನು ತಪ್ಪಿಸಿ [illegible] ನನ್ನ ಕೋಣೆಗೆ ಸೇರಿಸಿದೆ.

[illegible] ಗೂಬೆ ಇತ್ತು. [illegible]

ಪರಸ್ಪರ ನೋಡಿದೆವು. ಗೂಬೆ ಒಂದು ಘಳಿಗೆಯ ನಂತರ ಅತ್ತಿತ್ತ ನಡೆಯತೊಡಗಿತು—ವೃಗಾಲಯಗಳಲ್ಲಿ ಮರದ ಕೊಂಬೆಯ ಮೇಲೆ ಗೂಬೆ ಪತಪಥ ಸುತ್ತುವಂತೆ. ಮುಂದಕ್ಕೆ ಬಗ್ಗಿ ಅರಸಿನ ದಲ್ಲಿ ಅದ್ದಿ ತೆಗೆದಂತಿದ್ದ ಮೂರು ಬೆರಳಿನ ದೊಪ್ಪ ಕಾಲನ್ನು ಎತ್ತಿ ಕೊಕ್ಕನ್ನು ಉಜ್ಜಿತು. ನಂತರ ಮತ್ತೆ ಅದೇ ರೀತಿ [illegible], ಸಿಪಾಯಿಯಂತೆ ನೆಟ್ಟಗೆ ಕುಳಿತು ತನ್ನ ದುಂಡು ಕಣ್ಣುಗಳನ್ನು ನನ್ನ ಮೇಲೆ ನೆಟ್ಟಿತು. ನನ್ನ ಗೂಬೆ ಸ್ಪಷ್ಟವಾಗಿ ಕಾಣಿಸುತ್ತಿದೆ ಎನಿಸಿತು.

ತಂದಿದ್ದ ಪರಿಕರಗಳನ್ನೆಲ್ಲಾ ಒಂದೆಡೆ ಕೂಡಿಸಿ ನನ್ನ ಕಾರ್ಯದಲ್ಲಿ ನಿರತನಾದೆ.

ಈಗ ಮಾಡುವುದೇನು? ನನ್ನ ಕೆಲಸಕ್ಕೆ ಕನಿಷ್ಠ ಹತ್ತು ವರ್ಷಗಳಾದರೂ ಬೇಕು. ಮುದುಕಿಯನ್ನು ಬೆಚ್ಚಗಿರಿಸಲು ಉಪಯೋಗಿಸಲ್ಪಟ್ಟ ಕಾಗದಗಳಲ್ಲಿ ಎಂದೆಂದೋ ಬರೆದಿದ್ದ ಸ್ಫುರಣೆಗಳಲ್ಲಿ ಯಾವುದಾದರೂ ನೆನಪಿಗೆ ಬರುವುದೇನೋ ಎಂದು ಪ್ರಯತ್ನಿಸಿದೆ. ನೆನಪಾದುದನ್ನು ಬರೆದಿರಿಸೋಣವೆಂದುಕೊಂಡರೂ ಸಾಧ್ಯವಾಗಲಿಲ್ಲ. ನೆನಪಾದರೆ ತಾನೇ? ಆ ಕಾಗದಗಳು ದೊರೆತಿದ್ದರೆ ನನ್ನ ಕೆಲಸ ಅರ್ಧ ಕಡಿಮೆ ಮಾಡುತ್ತಿತ್ತು. ವಿಕಲಚಿತ್ತನಾಗಿ ಮೇಜು ಕುಟ್ಟಿದೆ.

ದರೋಡೆಕೋರರ ಪ್ರಧಾನಿಯ ಪತ್ರ ಬೆಳಗ್ಗೆ ನಾನು ಎಸೆದಿದ್ದ ಕಡೆಯೇ ನೆಲದ ಮೇಲೆ ಬಿದ್ದಿತ್ತು. ನಾನು ಓದದೆ ಬಿಟ್ಟಿದ್ದ ಸಾಲುಗಳು ನನ್ನನ್ನೇ ದುರುಗುಟ್ಟಿ ನೋಡುತ್ತಿದ್ದವು.

''....ನಾನು ನೆರವಾಗಬಲ್ಲೆ. ದರೋಡೆಕೋರನ ಕತೆ ನಿನಗೆ ಅರ್ಥವಾಯಿತೆ? ಆಗಿದ್ದರೆ ಈ ಕಾಗದವನ್ನು ತರುವ ಹೆಣ್ಣನ್ನು ಪುಸ್ತಕಕ್ಕಾಗಿ ಕೇಳು. ಅದರಲ್ಲಿ ನಿನ್ನ ಸ್ಫುರಣೆಗಳನ್ನೆಲ್ಲಾ ನಾನು ಬರೆದಿರಿಸಿದ್ದೇನೆ–ಅದು ನಿನಗೆ ತಿಳಿಯದಂತೆ ರಹಸ್ಯವಾಗಿ ಮಾಡುತ್ತಿದ್ದ ಕೆಲಸ. ಕಳೆದ ಎರಡು ವರ್ಷಗಳಿಂದ ಬೆಂಕಿಗೆ ಎಸೆಯುತ್ತಿದ್ದ ಕಾಗದಗಳಲ್ಲಿ ಇರುತ್ತಿದ್ದ ಸ್ಫುರಣೆಗಳು. ನಿನಗೆ ಅನಾವಶ್ಯಕವೆನಿಸಿದ್ದರಿಂದ ಅವನ್ನು ನಾನು ಉಪಯೋಗಿಸಿಕೊಳ್ಳಬೇಕೆಂದಿದ್ದೆ...''

"ಅವಳನ್ನು ಈಗ ನಾನು ಹುಡುಕುವುದೆಲ್ಲಿ?"

ಎಂದು ಅರಚಿದೆ, ಪತ್ರದ ಕೊನೆಯ ವಾಕ್ಯ-ವನ್ನು ಓದದೆಯೇ. ಕೊನೆಯಲ್ಲಿ :

"....ನಂಬರಿಗೆ ಫೋನ್ ಮಾಡಿದರೆ ಆಕೆ ಇರುತ್ತಾಳೆ."

ಮಕ್ಕಳ ಅದ್ಭುತ ಕತೆಗಳಲ್ಲಿ ಹೇಳುವಂತೆ ಕ್ಷಣಾರ್ಧದಲ್ಲಿ ಮತ್ತೆ ಪಡಸಾಲೆಯಲ್ಲಿದ್ದೆ. ಟೆಲಿವಿಷನ್ ನೋಡುತ್ತಿದ್ದವರು ವೇಗವಾಗಿ ಉಸಿರಾಡುತ್ತಾ ಕಣ್ತೆರೆದುಕೊಂಡೇ ನಿದ್ರಿಸಿದ್ದರು. ಫೋನ್ ಡಯಲ್ ಮಾಡಿದೆ. ನಾಲ್ಕಾರು ಬಾರಿ ಪ್ರಯತ್ನಿಸಿದ ನಂತರ ಅವಳ ಧ್ವನಿ ಕೇಳಿಸಿತು.

ನನ್ನ ಅಲ್ಪಾಯು ಜೀವನದ ಆ ಘಳಿಗೆ ಹೊಸ ಅಧ್ಯಾಯವನ್ನು ಪ್ರಾರಂಭಿಸಿತ್ತು. ನನ್ನ ನಿರ್ಲಕ್ಷ್ಯದಿಂದಾದ ತಪ್ಪಿನಿಂದಲೇ ಮಾತು ಪ್ರಾರಂಭಿಸಿದೆ : "ರಿಸೀವರ್ ಬೇಗ ತೆಗೆದುಕೊಳ್ಳ ಬಾರದೇ?" ನನ್ನ ಮಾತೆಷ್ಟು ರೂಕ್ಷವಾಗಿದೆ ಎಂಬ ದನ್ನು ಅರಿಯುವ ಮೊದಲೇ ಅದು ಹೊರಬರು ತ್ತಿತ್ತು. "ಪುಸ್ತಕ ಎಲ್ಲಿ? ಅದೇಕೆ ಕೊಡಲಿಲ್ಲ ?"

"ನನ್ನನ್ನು ಕೇಳಲಿಲ್ಲ! ಕೊನೆಗೆ ಕಾಗದವನ್ನು ಓದಲೂ ಇಲ್ಲವಲ್ಲ, ಅದರಲ್ಲಿಯೇ ನೀವು ಬೇಕಾದರೆ..."

ಮತ್ತೆ ತಪ್ಪು ಅವಳ ನೆತ್ತಿಗೇ ಸವರುತ್ತಾ, "ಕಾಲದ ಮೌಲ್ಯವೇ ನಿನಗೆ ತಿಳಿಯದು. ನಿಜ-ವಾಗಿಯೂ ಇದು ವಿಷಾದಪಡುವ ಸಂಗತಿ..." ಎಂದೆ.

ಫೋನ್ ಮೌನವಾಗಿತ್ತು.

"ಏನಾದರೂ ಬೇಗ ಹೇಳಬಾರದೇ? ಪುಸ್ತಕ ಎಲ್ಲಿ ? ಪುಸ್ತಕ..."

"ನಾನೇ ತರುತ್ತಿದ್ದೇನೆ," ಎಂದಿತು ಅವಳ ಇನಿದನಿ ಮೆಲ್ಲನೆ.

## ೩

ಪದರವ ಕೇಳಿಸಿದಾಗ ನಾನು ಕೇವಲ ಪುಸ್ತಕ ಕ್ಕಾಗಿ ಕಾಯುತ್ತಿಲ್ಲ ಎಂಬುದು ಮನವರಿಕೆ ಯಾಯಿತು. ಅವಳನ್ನು ನೋಡಿದ ಕ್ಷಣದಿಂದಲೂ ಪ್ರವಾಹದ ಸೆಳೆತಕ್ಕೆ ಸಿಕ್ಕವನಂತೆ ಅವಳತ್ತ ಸೆಳೆಯಲ್ಪಟ್ಟಿದ್ದೆ. ಘಟಿಕಾ ಯಂತ್ರದಿಂದ ಮತ್ತೊಂದು ಸ್ವರ್ಣಕಣ ಜಾರಿ ಬೀಳಲಿದೆಯೇ ?

ಆದದ್ದಾಗಲಿ. ಇವಾವೂ ನನ್ನ ಪಾಲಿಗೆ ಇರುವವಲ್ಲ. ಸುಂದರ ಸ್ತ್ರೀಯರು ತಮ್ಮ ಹಿಂದೆ ಗಂಡು ಪ್ರಾಣಿಗಳು ದುಂಬಾಲು ಬೀಳಬೇಕೆಂದು, ಅವರಿಗಾಗಿ ಎಲ್ಲವನ್ನೂ ತ್ಯಾಗ ಮಾಡಬೇಕೆಂದು ಬಯಸುತ್ತಾರೆ. ಅದಕ್ಕೆ ಅವರ ಒಲವು ಪಡೆ ಯಲು ತುಂಬಾ ಕಾಲ ಬೇಕು. ಅವರೂ ಸರಿ-ಯೇನೋ? ಸಾಯುತ್ತಿದ್ದವನು 'ಹೌದು ಹೌದು' ಎಂದು ತಲೆದೂಗುತ್ತಿದ್ದ ವ್ಯಕ್ತಿ-ಗಿಂತಲೂ ಈ ಕಾರ್ಯಕ್ಕೆ ಹೆಚ್ಚು ಅರ್ಹತೆ ಯಾರಿಗಿದೆ? ಅವನನ್ನು ಮರೆಯುವುದು ಅವ ಳಿಗೆ ಸಾಧ್ಯವೇ? ನನ್ನ ಸಾಮಾನ್ಯ ರೂಪು ಅನಿಶ್ಚಿತ ವ್ಯವಹಾರದ, ವಿಚಿತ್ರ ವರ್ತನೆಯ ಎರವಲು ಮುಖದ ವ್ಯಕ್ತಿಯ ನೆನಪನ್ನು ಹೊರ ದೂಡಬಲ್ಲದೇ? ಸಾಧ್ಯವಿಲ್ಲ. ಪ್ರೇಮದ ಪಾಲಿಗೆ ನಾನು ಸತ್ತಂತೆ, ಅಥವ ಹುಟ್ಟಲೇಯಿಲ್ಲ?

ಬಾಗಿಲು ತೆರೆದುಕೊಂಡು ಅವಳು ಒಳಕ್ಕೆ ಹೆಜ್ಜೆ ಇರಿಸಿದಳು– ಅದೇ ಶಾಂತ ವದನ, ಗಂಭೀರ ನೋಟ. ನನ್ನ ನರನಾಡಿಗಳು 'ನಿನ್ನನ್ನು ಪ್ರೇಮಿ ಸುತ್ತೇನೆ' ಎಂದು ಒಮ್ಮೆಲೇ ಬೊಬ್ಬಿಟ್ಟು ಕೂಗಿ ದವು. ನನ್ನ ಹೊಸ ಹುಟ್ಟಿನ ಬಾಲ್ಯ ಮುಗಿದು ತಾರುಣ್ಯ ಮೂಡಿತ್ತು. ಕಿಟಕಿಯ ಬಳಿಯಿದ್ದ ಬಿಸಿಗಾಳಿ ಊದುವ ಕೊಳವಿ ನನ್ನನ್ನು ಎಚ್ಚರಿ ಸಿತು. ಮತ್ತೆ ನಾನು ಅವಳತ್ತ ನೋಡಲಿಲ್ಲ.

ಅವಳನ್ನು ಸ್ವಾಗತಿಸದೆಯೇ ಕೈಯಿಂದ ಪುಸ್ತಕವನ್ನು ಕಸಿದುಕೊಂಡು ಅವಳತ್ತ ಬೆನ್ನು ತಿರುಗಿಸಿ ಪುಸ್ತಕದ ಪುಟ ತಿರುವಿದೆ. ಅದರ ತುಂಬಾ ಚಿತ್ರಗಳು. ಲೆಕ್ಕ, ಹಲವು ವರ್ಷ ಗಳಿಂದ ನಾನೇ ಬರೆದು ಸುಡುತ್ತಿದ್ದ ಸ್ಫುರಣೆ ಗಳು. ಪುಟ ತಿರುಗಿಸುತ್ತಿದ್ದಂತೆಲ್ಲಾ ನನಗೆ ಆಶ್ಚರ್ಯವೆನಿಸಿತು. ಈಗ ಆ ಕಾರ್ಯ ನಿರ್ವಹಿ ಸಲು ಹತ್ತು ವರ್ಷಗಳು ಬೇಕಾಗಿರಲಿಲ್ಲ; ಎಂಟೇ ಸಾಕು. ಮನೆಯಲ್ಲೂ ಇನ್‌ಸ್ಟಿಟ್ಯೂಟಿನಲ್ಲೂ ಕೆಲಸ ಮಾಡುವುದರಿಂದ ಇನ್ನೂ ಎರಡು ವರ್ಷ ಗಳು ಕಡಿಮೆ ಮಾಡಬಹುದು. ಸಂಶೋಧನೆಯ ಅನೇಕ ಮಾರ್ಗಗಳನ್ನು ಒಮ್ಮೆಲೇ ಅನುಸರಿಸ ಬೇಕು. ರಾತ್ರಿ ಹಗಲು ಶ್ರಮಿಸಬೇಕು.

"ಇದೇಕಿಷ್ಟು, ಆತುರ?" ಎಂದು ಕೇಳಿದಳು. ಆತುರದಿಂದ ತಂತಿಗಳನ್ನು ಜೋಡಿಸುತ್ತಿದ್ದ ನನ್ನನ್ನು ನೋಡುತ್ತಾ.

# ಸವಿರಾಮ್ ಎಂಟರ್ ಪ್ರೈಸಸ್

ಬೆಂಗಳೂರು-೧೧

## ಸ್ಪರ್ಧಿಗಳಿಗೆಲ್ಲಾ ಅಭಿನಂದನೆಗಳು

ಎಲ್ಲಾ ಪುಸ್ತಕಗಳ ಹೆಸರನ್ನು ಮುದ್ರಿಸದಿದ್ದುದಕ್ಕಾಗಿ ಕ್ಷಮೆ ಇರಲಿ.

### "ಪದಬಂಧ" ಸ್ಪರ್ಧೆಯ ಉತ್ತರಗಳು

೧. ರಂಗಭೂಮಿ; ಲೇ: ಕ. ಶಂಕರ: ಪ್ರ. ಸಂ. ೧೧೦. ಮೊದಲನೆಯ ಮುದ್ರಣ ೧೯೫೫. [ತಂಪು]

೨. ಅನುಗ್ರಹ; ಲೇ: ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ. ಎ.: ಪ್ರ. ಸಂ. ೭೧: ದ್ವಿತೀಯ ಮುದ್ರಣ ೧೯೪೯- [ಕಷ್ಟ]

೩. ನಿಸರ್ಗದ ಮಡಿಲು; ಲೇ: ಜಿ. ವೆಂಕಟಯ್ಯ; ಪ್ರ. ಸಂ. ೧೦೨; ಪ್ರಥಮ ಮುದ್ರಣ ೧೯೬೭. [ಜೇಲದ]

೪. ಗಾಜಿನ ಮನೆ; ಲೇ: ಅ. ನ. ಕೃ.; ಪ್ರ. ಸಂ. ೪೩; ಮೊದಲನೆಯ ಮುದ್ರಣ ೧೯೫೫. [ಗಿಡದೇ]

೫. ಅಮರಗಾನ; ಲೇ; ಶ್ರೀಧರ ಕೋಟೆಕಾರ; ಪ್ರ. ಸಂ. ೭೯; ದ್ವಿತೀಯ ಮುದ್ರಣ ೧೯೬೬. [ಮಂದ್ವಿಪ]

೬. ರೂಪ-ರಾಗ; ಲೇ: ವೈ. ಎಸ್. ಕುಮಾರಸ್ವಾಮಿರಾವ್, ಎಂ. ಎ.: ಪ್ರ. ಸಂ. ೧೪೫ ಪ್ರಥಮ ಮುದ್ರಣ ೧೯೭೧. [ರಾಗಶ್ರೀ]

೭. ನಿಸರ್ಗದ ಮಡಿಲು; ಪ್ರ. ಸು. ೫; [ಲಾಗದು]

೮. ಗಾಜಿನ ಮನೆ; ಪ್ರ. ಸಂ. ೧೯೨; [ಗೋಜಾದ]

೯. ಆತ್ಮಾರ್ಪಣೆ; ಲೇ: ಪ. ಸು. ಭಟ್ಟ, ಎಂ. ಎ.; ಪ್ರ. ಸಂ. ೧೧೪; ದ್ವಿತೀಯ ಮುದ್ರಣ ೧೯೬೭. [ಅಗತ್ಯ]

೧೦. ಅಕ್ಕಯ್ಯ; ಲೇ: ಅ. ನ. ಕೃ.; ಪ್ರ. ಸಂ. ೬೫; ಮೊದಲ ಮುದ್ರಣ ೧೯೬೫. [ಸಿವ್ಮಕ್ಕ]

೧೧. ಮೌನ ಗೌರಿ; ಲೇ: ಕೃಷ್ಣಮೂರ್ತಿ ಪುರಾಣಿಕ; ಪ್ರ. ಸಂ. ೪೪; ಮೊದಲ ಮುದ್ರಣ ೧೯೬೪. [ದಬ್ಬಿ ಬಿಡು]

೧೨. ಹೊನ್ನಿನ ಹಂಬಲ: ಲೇ: ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ. ಎ.; ಪ್ರಥಮ ಮುದ್ರಣ ೧೯೫೩.

೧೩. ಉದಯ ರಾಗ; ಲೇ: ಅ. ನ. ಕೃ.: ಪ್ರ. ಸಂ. ೮೪; ಆರನೆಯ ಮುದ್ರಣ ೧೯೭೦. [ಆರಂಭಿಸಿ]

೧೪. ಮೌನಗೌರಿ; ಪ್ರ. ಸ. ೧೩೭. [ಭಳೀರನೆ]

೧೫. ಸಂಧ್ಯಾರಾಗ; ಲೇ: ಅ. ನ. ಕೃ.; ಪ್ರ. ಸಂ. ೨೭: ಆರನೆಯ ಮುದ್ರಣ ೧೯೫೫. [ಬರುತ್ತಿದ್ದುದೇ]

೧೦೦೦/- ರೂಪಾಯಿ ಬಹುಮಾನದ "ಪದಬಂಧ" ಸ್ಪರ್ಧೆಗೆ ಮುಂದಿನ 'ಕಸ್ತೂರಿ' ಸಂಚಿಕೆಯನ್ನು ಕಾದಿರಿ.

---

ಕೆಲವೊಂದು ಅನಿವಾರ್ಯ ಕಾರಣಗಳ ಮೂಲಕ ಜನೇವರಿ ತಿಂಗಳದ ಸಂಚಿಕೆಯಲ್ಲಿ ಪ್ರಕಟಿಸಲು ಸಾಧ್ಯವಾಗಲಿಲ್ಲವೆಂಬುದನ್ನು ತಿಳಿಸಲು ವಿಷಾದಿಸುತ್ತೇವೆ.

"ನನಗೆ ಇರುವ ಕಾಲ ಸಾಲದು. ಬಾಳು ಕಿರಿದು. ಅಷ್ಟರಲ್ಲಿಯೇ ಮಾಡಬೇಕಾದ ಕೆಲಸ ಬಹಳವಾಗಿದೆ. ಅದಕ್ಕೇ ಈ ಆತುರ."

ಪ್ರಯೋಗಾಲಯದಲ್ಲಿ ಕೆಲಸ ಪ್ರಾರಂಭವಾಯಿತು. ಗಾಜಿನ ಬುರುಡೆಗಳಲ್ಲಿ ಬಣ್ಣಬಣ್ಣದ ದ್ರಾವಕಗಳು ಕುದಿಯುತ್ತಿದ್ದವು, ಖನಿಜಗಳು ಕರಗುತ್ತಿದ್ದವು, ದೀಪಗಳು ಮಿನುಗುತ್ತಿದ್ದವು.

ಗೂಬೆ ತಲೆಯನ್ನು ರೆಕ್ಕೆಗಳ ಮಧ್ಯೆ ಇರಿಸಿಕೊಂಡು ನಿದ್ರಿಸುತ್ತಿತ್ತು. ನನ್ನ ತಲೆಯನ್ನು ಕೊರೆಯುತ್ತಿದ್ದ ಸಂಶಯವನ್ನು ದೂರಗೊಳಿಸಲು, "ಕಿಟಕಿಯ ಹೊರಗಿರುವುದೇನು?" ಎಂದು ಕೇಳಿದೆ, ಗೂಬೆಯತ್ತ ಬೊಟ್ಟುಮಾಡಿ. ನನ್ನ ಈ ಮಾತಿಗೆ ಆ ಪಕ್ಷಿ ತಲೆ ಎತ್ತಿ ಕಣ್ಣಿನ ಹಳದಿ ಮಸೂರಗಳ ಮೂಲಕ ದಿಟ್ಟಿಸಿ ಹಲವು ಬಾರಿ ಕಣ್ಣವೆ ಹಾಕಿ ಮಿಕಮಿಕನೆ ನೋಡಿತು.

ಕಿಟಕಿಯ ತನಕ ಹೋಗಿ ತಲೆಯನ್ನು ಹೊರಗೆ ಹಾಕಿ ಅತ್ತಿತ್ತ ನೋಡಿ ಬಂದು, "ಯಾರೂ ಇಲ್ಲ," ಎಂದು ನಸುನಕ್ಕಳು. ನನ್ನತ್ತ ದಿಟ್ಟಿಸಿ ನೋಡುತ್ತಿದ್ದು ಇದ್ದಕ್ಕಿದ್ದಂತೆಯೇ ಏನೋ ಗುರುತಿಸಿದವಳಂತೆ ತುಟಿ ಕಚ್ಚಿಕೊಂಡಳು. "ನನಗೆ ಯಾರೂ ಕಾಣಿಸಲಿಲ್ಲ. ನಿಮಗೆ ಯಾರಾದರೂ ಕಾಣಿಸಿದರೇನು? ಯಾರಾದರೂ ಅನುಸರಿಸುತ್ತಿದ್ದಾರೆಯೇ?"

"ನೀನೇ ಇಲ್ಲ ಎಂದ ನಂತರ ಮತ್ತೆ ಯಾರೂ ಇರಲಾರರು," ಎಂದು ಮಾತನ್ನೇ ಹಾರಿಸಿದೆ.

ಪ್ರಶ್ನೆ ಕೇಳುವ ಸರದಿಯನ್ನು ಉಪಯೋಗಿಸಿಕೊಂಡು ಅವಳು ನನ್ನನ್ನು ದಿಗ್ಭ್ರಾಂತಿಗೆ ತುತ್ತು ಮಾಡಿದಳು: "ನೀವೇಕೆ ಕೋಟ್ ಬದಲಿಸಿದಿರಿ?"

ಬೆಪ್ಪುಗಣ್ಣುಗಳಿಂದ ಅವಳನ್ನು ನೋಡುತ್ತಿದ್ದೆ. ಹೊಸ ನಿಯಮಾವಳಿಗೆ ಬದ್ಧನಾಗಿ ಮೌನವಾಗಿದ್ದೆ. ಹಳೆಯ ಕ್ಯಾಲ್ಕುಲೇಟರಿನ ಕೈಯನ್ನು ಆಡಿಸುತ್ತಾ ಲೆಕ್ಕ ಮಾಡಲು ಪ್ರಾರಂಭಿಸಿದೆ. ಆಕೆ ಇನ್ನೂ ಕಾಯುತ್ತಲೇ ಇದ್ದಳು.

ಒಂದು ಗಂಟೆ ಯಾರೂ ಮಾತನಾಡಲಿಲ್ಲ. ಕೊನೆಗೂ ಅವಳಿಗೆ ಮೌನ ಸಹ್ಯವಾಗಲಿಲ್ಲ. ಮೆದುವಾಗಿ ನಕ್ಕು, "ಈ ಆತುರವೇಕೆ ಎಂಬುದಾದರೂ ನನಗೆ ಹೇಳಬಹುದಲ್ಲಾ?" ಕೇಳಿದಳು.

"ಇದೆಲ್ಲಾ ಏನು ಎಂದೇ? ಆ— ನಿನಗೆ ಆ ಬಗ್ಗೆ ಹೇಳಿಲ್ಲವೇನು?"

"ಹೌದು, ಹೇಳಿದ್ದ."

"ನಾನೂ ಅದಕ್ಕಾಗಿಯೇ ಬೇಗ ಬೇಗ ಕೆಲಸ ಮುಗಿಸಬೇಕಾಗಿದೆ. ಇದುವರೆಗಿನ ಬದುಕಿನಲ್ಲಿ ಏನೊಂದೂ ಸಾಧಿಸಿಲ್ಲ. ಜನರಿಗಾಗಿ ನಾನು ನಡೆಸಬಹುದಾದ ಕೆಲಸವೊಂದಿದೆ. ಕೃತಜ್ಞತೆಯಿಂದ ನನ್ನ ಕೈಕುಲುಕಿಸಿ ಹೃತ್ಪೂರ್ವಕವಾಗಿ ಅಭಿನಂದಿಸುವ ವ್ಯಕ್ತಿಯೊಬ್ಬನನ್ನು ನನ್ನ ಬಾಳಿನಲ್ಲಿ ನಾನು ಗಳಿಸಿಕೊಳ್ಳಲಾರದೆ ಹೋದರೆ ಈ ಭೂಮಿಯ ಮೇಲೆ ಹುಟ್ಟಿ ಏನು ಪುರುಷಾರ್ಥ ಸಾಧಿಸಿದಂತೆ? ನಾನು ಅವನಿಗಾಗಿಯೇ ಕೆಲಸ ಮಾಡುತ್ತಿರುವೆ. ಅವನು ಬಂದ ದಿನ ನಾನು ಅತ್ಯಂತ ಸುಖಿ."

ನಾನು ಹೇಳಿದ್ದನ್ನು ಕೇಳುತ್ತಾ ಸ್ವಲ್ಪಕಾಲ ಮೌನವಾಗಿದ್ದಳು. ಬಹುಶಃ ಈ ಮಾತು ಅವಳಿಗೆ ಸೂಕ್ತವೆನಿಸಿರಬೇಕು. ಅನಂತರ ಮತ್ತೆ ಪ್ರಾರಂಭಿಸಿದಳು: "ವ್ಯರ್ಥವಾಗಿ ಕಾಲವನ್ನೇಕೆ ಪೋಲು ಮಾಡುತ್ತೀರಿ? ವಿಚಿತ್ರ ಸ್ವಭಾವ. ಇನ್ನೂ ಕಾರ್ಯಕ್ಷಮವಾದ ಹೊಸ ಕ್ಯಾಲ್ಕುಲೇಟರ್ ಇರುವುದು ಮರೆತಿರಾ?"

ಅದು ನನಗೆ ಸುದ್ದಿಯಾಗಿತ್ತು. ನಾನು ಮೌನವಾಗಿದ್ದೆ. ನನ್ನ ಕೈಹಿಡಿದು ಬಾಗಿಲ ಬಳಿಗೆ ಎಳೆದೊಯ್ದಳು. "ಇದೇನು?" ಎಂದು ಕೈ ಕೊಡವಿ ನಿಂತೆ.

"ವ್ಯರ್ಥವಾಗಿ ಕಾಲ ಹಾಳು ಮಾಡಬೇಡಿ," ಎಂದಳು ನನ್ನ ಧ್ವನಿಯನ್ನೇ ಅನುಸರಿಸಿ. "ಕಾಲವನ್ನು ಉಳಿಸಲು ನಾನು ನೆರವಾಗುತ್ತೇನೆ ಬನ್ನಿ."

ಮೇಲಿನ ಅಂತಸ್ತಿನಲ್ಲಿದ್ದ ಇನ್ನೊಂದು ಕೋಣೆಗೆ ಕರೆದೊಯ್ದಳು. ನನ್ನ ವಿಚಿತ್ರ ಮಿತ್ರ— ಪರೋಪಕಾರದ ಸ್ವಭಾವ— ಒಂದು ತಿಂಗಳ ಹಿಂದೆ ತೆಗೆದುಕೊಂಡಿದ್ದ ಕೋಣೆ. ಅದರ ಬಾಗಿಲು ತೆರೆದು ದೀಪ ಹೊತ್ತಿಸಿದಳು. ಕೋಣೆಯ ತುಂಬಾ ಅತ್ಯಾಧುನಿಕ ಸಲಕರಣೆಗಳು. ನಾನು ಬಯಸಿದ್ದ, ನನಗೆ ಬೇಕಾಗಿದ್ದ ಸಲಕರಣೆಗಳು. ನನ್ನ ಸಂತೋಷ [illegible] ಹೋಯಿತು. ಅವಳು ತನ್ನ [illegible] ಮರೆಮಾಡುತ್ತಾ ಪಕ್ಕಕ್ಕೆ ಸರಿದಳು. [illegible] ನೋಡುತ್ತಾ ಅವಳ ಇರುವನ್ನು ಮರೆತೆ.

CHAITRA-CAFI-123 KAN

# ಬಹೂಪಯೋಗೀ



ಹೆಚ್ಚಿನ ವಸ್ತುಗಳು ಒಂದೇ
ಉದ್ದೇಶಕ್ಕೆ ಉಪಯುಕ್ತವಾಗುತ್ತವೆ.
ಕೆಲವು ಎರಡು ಉದ್ದೇಶಗಳಿಗೆ
ಉಪಯುಕ್ತವಾಗುತ್ತವೆ.
ಆದರೆ ಅದಕ್ಕಿಂತಲೂ ಹೆಚ್ಚು ಉದ್ದೇಶಗಳಿಗೆ
ಉಪಯುಕ್ತವಾಗುವ ವಸ್ತುಗಳು ಬಹಳ ಕಡಿಮೆ ಇರುತ್ತವೆ.

'ಟೆರೀನ್'® ಟ್ರೇಡ್‌ಮಾರ್ಕ್ ಈ ಮೂರನೆಯ ವರ್ಗಕ್ಕೆ
ಸೇರುತ್ತದೆ. ಅದು ಬಟ್ಟೆಗಳ ಗುಣಮಟ್ಟಕ್ಕೆ ಸಂಬಂಧಪಟ್ಟ ಹಲವಾರು
ಉದ್ದೇಶಗಳಿಗೆ ಉಪಯುಕ್ತವಾಗುತ್ತದೆ.
ಬಟ್ಟೆ 'ಟೆರೀನ್'ನಿಂದ ತಯಾರಿಸಲ್ಪಡುತ್ತದೆ ಎಂದು
ಅದು ಹೇಳುತ್ತದೆ. ಮಾತ್ರವಲ್ಲ,
ಬಟ್ಟೆ ಕಟ್ಟುನಿಟ್ಟಾದ ಗುಣಮಟ್ಟಗಳಿಗೆ ಸರಿಯಾಗುವಂತೆ
ತಯಾರಿಸಲ್ಪಡುತ್ತದೆ ಎಂದೂ
ವ್ಯಕ್ತಪಡಿಸುತ್ತದೆ. ಅದು ಬಟ್ಟೆ
ಕುಗ್ಗುವುದಿಲ್ಲ ಎಂದು ಮಾತ್ರವೇ ಹೇಳುವುದಿಲ್ಲ,
ಅದು ಸುಕ್ಕುಸುಕ್ಕಾಗುವುದಿಲ್ಲ,
ಮಸುಕಾಗುವುದಿಲ್ಲ, ಅದರ ನೆಯ್ಗೆ ಬಿಚ್ಚಿ
ಹೋಗುವುದಿಲ್ಲ ಮತ್ತು ತನ್ನ ಸೊಗಸುತನವನ್ನು
ಕಳೆದುಕೊಳ್ಳುವುದಿಲ್ಲ ಎಂದೂ ಹೇಳುತ್ತದೆ.

'ಟೆರೀನ್' ಟ್ರೇಡ್‌ಮಾರ್ಕ್ ಅನೇಕ ಉದ್ದೇಶಗಳನ್ನು
ಪೂರೈಸುತ್ತದೆ. ಆದರೆ ಎಲ್ಲಕ್ಕಿಂತ ಹೆಚ್ಚಿನದೆಂದರೆ,
ಅದು ನಿಮ್ಮ ಸೇವೆಯನ್ನು ಮಾಡುತ್ತದೆ.

TERENE

'ಟೆರೀನ್'– ಉತ್ತಮ ಮಿಲ್ಲುಗಳ ಜೊತೆಗೆ... ಉತ್ತಮ ಬಟ್ಟೆಗಳ ಮೇಲೆ

® 'ಟೆರೀನ್' - ಕೆಮಿಕಲ್ಸ್ ಅಂಡ್ ಫೈಬರ್ಸ್ ಆಫ್ ಇಂಡಿಯಾ ಲಿಮಿಟೆಡ್
ಅವರ ರಿಜಿಸ್ಟರ್ಡ್ ಟ್ರೇಡ್‌ಮಾರ್ಕ್ ಆಗಿದೆ

"ನಿಮಗೆ ನಾಚಿಕೆಯಾಗದೇನು? ಇವನ್ನು ನೋಡದವರಂತೆಯೇ ವರ್ತಿಸುತ್ತಿದ್ದೀರಿ?" ಎಂದು ಇದ್ದಕ್ಕಿದ್ದಂತೆಯೇ ಅವಳ ಧ್ವನಿ ಕೇಳಿಸಿತು.

ಮತ್ತೆ ಒಂದು ಬಗುಬು! "ಹಾಗೆಂದರೆ?" ಎಂದೆ ತೀಕ್ಷ್ಣವಾಗಿ ಅವಳನ್ನು ನೋಡಿ.

"ನಿಮ್ಮ ಮಿತ್ರನನ್ನು ನೋಡಲು ಬಂದಾಗ ಇದನ್ನೆಲ್ಲಾ ನೋಡಿರಲೇಬೇಕು ಎಂದುಕೊಂಡೆ. ಬಹುಶಃ ನೀವು ಇಲ್ಲಿಗೆ ಬಂದಿರಲೇ ಇಲ್ಲವೇನೋ!" ಎಂದಳು ಅವಳು ತನ್ನ ಮಾತಿನ ಒಂದಿನ ಸತ್ಯವನ್ನು ಮನಮಾಡುತ್ತಾ.

ನನಗೆ ಪರಿಚಯವಿಲ್ಲದ ದೊಡ್ಡ ಬಳ್ಳಿಯೊಂದು ಕಿಟಕಿಯ ಬಳಿಯ ಗಾಜಿನ ತೊಟ್ಟಿಯಲ್ಲಿ ಬೆಳೆದಿತ್ತು. ಅದನ್ನು ತೋರಿ, "ಅದೇನು ಗೊತ್ತೇ?" ಎಂದು ಪರೀಕ್ಷೆ ಮಾಡುವವಳಂತೆ ಕೇಳಿದಳು.

ಇದ್ದಕ್ಕಿದ್ದಂತೆಯೇ ನನಗೆ ನೆನಪಾಯಿತು. "ತಾವರೆ–ಗೋರಿಯಲ್ಲಿ ಎರಡು ಸಾವಿರ ವರ್ಷಗಳ ಕಾಲ ಬಂಧಿತವಾಗಿದ್ದ ಬೀಜದಿಂದ..."

"ಸರಿಯಾಗಿ ಹೇಳಿದಿರಿ. ನಿಮಗೆ ನೂರಕ್ಕೆ ನೂರು ಅಂಕಗಳು. ಇದು ಹೇಗಿದೆ?" ಎಂದಳು ಅವಳು ಹೆಮ್ಮೆಯಿಂದ.

ಹೊಸ ಮಾಡೆಲ್ಲಿನ ಕ್ಯಾಲ್ಕುಲೇಟರ್ ಅದಾಗಿತ್ತು - ಹಳೆಯ ಕ್ಯಾಲ್ಕುಲೇಟರನ್ನು ಇರಿಸಿಕೊಂಡು ಒಂದು ಕೋಣೆಯ ತುಂಬಾ ಸಹಾಯಕರು ಕುಳಿತಿದ್ದರೂ ಸಾಗುವ ಕೆಲಸವನ್ನು ಈ ಹೊಸ ಕ್ಯಾಲ್ಕುಲೇಟರಿನಲ್ಲಿ ನಾನೊಬ್ಬನೇ ನಿರ್ವಹಿಸುವುದು ಸಾಧ್ಯವಿತ್ತು.

"ಇದನ್ನು ನಾನು ತೆಗೆದುಕೊಳ್ಳಲೇ?"

"ವ್ಯರ್ಥವಾಗಿ ಕಾಲವನ್ನು ಹಾಳು ಮಾಡಬೇಡಿ," ಎಂದು ಆಡಿದ ಅವಳ ಕಂಠ ನನ್ನ ಕಂಠದ ಅನುಕರಣೆ ಅಥವಾ ಪರೋಪಕಾರದ ಪ್ರಧಾನಿಯ ಕಂಠದ ಅನುಕರಣೆ ನಾನರಿಯೆ. "ಇವೆಲ್ಲಾ ನಿಮ್ಮದೇ. ಇಲ್ಲಿಯ ಪದಾರ್ಥಗಳೆಲ್ಲಾ ನಿಮಗೆ ಸೇರಿದ್ದು. ಈ ತಾವರೆ ಕೂಡ ನಿಮ್ಮದೇ."

ಅವಳು ಯಾವುದೋ ಕಾರಣದಿಂದ ಕೋಪಗೊಂಡಿದ್ದಾಳೆ ಎನಿಸಿತು.

ಸ್ವಲ್ಪ ಕಾಲದ ನಂತರ ಗಟ್ಟಿಯಾಗಿ ತನ್ನಲ್ಲಿಯೇ ಮಾತನಾಡಿಕೊಳ್ಳುವವಳಂತೆ, "ನಿಮ್ಮ ಮನೆ ಬದಲಿಸುತ್ತೀರಿ. ದಿನ ಬದಲಿಸುತ್ತೀರಿ. ಕೋಣೆಗಳನ್ನು ಬದಲಿಸುತ್ತೀರಿ. ಯಾರಿಗೂ ಸುಳಿವೇ ಸಿಗಬಾರದೆಂದು ಇಷ್ಟೆಲ್ಲಾ ಪ್ರಯತ್ನ...ಕೊನೆಗೆ ಮಿತ್ರರನ್ನೂ ಬದಲಿಸುತ್ತೀರಿ..." ಎಂದೇನೇನೋ ಹೇಳಿಕೊಳ್ಳುತ್ತಿದ್ದಳು.

೪

ಒಂದೇ ರಾತ್ರಿಯಲ್ಲಿ ನಾನು ತುಂಬಾ ಮುಂದುವರಿದಿದ್ದೆ. ಮೊದಲಿನ ನನ್ನ ನಂಬಿಕೆಗಳೇ ಸರಿ ಎಂದು ಈಗ ನಿಶ್ಚಿತವಾಗಿತ್ತು. ಇದೇ ವೇಗದಲ್ಲಿ ನನ್ನ ಕೆಲಸ ಸಾಗಿದರೆ ಮೊದಲ ಫಲಿತಾಂಶ ಎಂಟು ತಿಂಗಳಲ್ಲಿ ಪಡೆಯುವುದು ಸಾಧ್ಯ.

ಮರುದಿನ ಬೆಳಗ್ಗೆ ನನ್ನ ಪರಿಸರವನ್ನೇ ಮರೆತು ಪ್ರಯೋಗಾಲಯವನ್ನು ಪ್ರವೇಶಿಸಿದೆ. ನಾನು ಹೆಜ್ಜೆ ಇರಿಸುತ್ತಲೇ ಮಾತು, ನಗೆಗಳ ಪೂರವೇ ಎದುರಾಯಿತು. ನನ್ನ ಪ್ರತಿಸ್ಪರ್ಧಿ ತನ್ನ ಉತ್ತರವನ್ನು ಅಚ್ಚು ಮಾಡಿಸಿದ್ದನಂತೆ.

"ಮತ್ತೆ ನಿನ್ನ ಪರೀಕ್ಷೆ!" ಎಂದ ನಿರ್ದೇಶಕ ವ್ಯಂಗ್ಯವಾಗಿ. ನನ್ನ ಬೆಂಬಲಿಗರು ಗಹಗಹಿಸಿ ನಕ್ಕರು. ಅವರೆಲ್ಲರೂ ನನ್ನ ಮೇಜಿನ ಸುತ್ತಲೂ ಸೇರಿದರು.

"ವೀರಯೋಧನೇ, ನಿನ್ನ ಕದನ ಪ್ರಾರಂಭವಾಗಲಿ," ಎಂದು ಉತ್ತರವನ್ನು ನನ್ನ ಮೇಜಿನ ಮೇಲೆ ಹಾಕಿದ ನಿರ್ದೇಶಕ.

ನಾನು ಸ ನ ಉತ್ತರವನ್ನೂ ಓದದೆ ಪಕ್ಕಕ್ಕೆ ಎಸೆದಿದ್ದು ಅಲ್ಲಿಯವರನ್ನು ಅಚ್ಚರಿಗೀಡು ಮಾಡಿತು. ಸ ಈಗ ನನ್ನ ಪಾಲಿಗೆ ನಿರುಪದ್ರವಿ ಅಜ್ಞಾನಿ ಬಾಲಕನಂತಿದ್ದ. ಅವನ ನೆನಪಾದಾಗ ನನ್ನ ಮನ ಕುದಿಯುತ್ತಿರಲಿಲ್ಲ. ಅವನನ್ನು ನೊಣದಂತೆ ಪಕ್ಕಕ್ಕೆ ತಳ್ಳಿದೆ. ಈಗ ಸ ಬಹುಕಾಲದ ತನಕ ತನ್ನ ಪತ್ರಗಳನ್ನು ಬರೆಯುತ್ತಲೇ ಇದ್ದ. ಕೊನೆಗೆ ಪತ್ರಗಳಲ್ಲಿ ನಾನು ಉತ್ತರಿಸಲಾರದ ಪ್ರಶ್ನೆಗಳನ್ನು ಅಲಕ್ಷ್ಯ-ಯಿಸಿದ್ದೇನೆ, ನಿಯಮವನ್ನೇ ಪಾಲಿಸಿದ್ದೇನೆ, ಉಷ್ಟ್ರಪಕ್ಷಿಯಂತೆ ತಲೆಯನ್ನು ಮರಳಿನಲ್ಲಿ ಹುದುಗಿಸಿಕೊಂಡಿದ್ದೇನೆ ಎಂದೇನೇನೋ ಬರೆದ.

ಅವನ ಉತ್ತರವನ್ನು ಪಕ್ಕಕ್ಕೆ ಸರಿಸಿದ್ದನ್ನು ಕಂಡ ನನ್ನ ಸಹೋದ್ಯೋಗಿಗಳು ... ಮುಖಗಳನ್ನು ...

# ಹೊಸ ವರ್ಷದ ಲೋಕಪ್ರಿಯ ಸ್ಪರ್ಧೆ

## ಪ್ರವೇಶ ಶುಲ್ಕವಿಲ್ಲ-ನೀವು ಒಂದು ಬಹುಮಾನ ಗೆಲ್ಲಬೇಕು

ಮೊದಲನೆ ಬಹುಮಾನ : ಒಂದು ಹೆಸ್ಸ್ ಸ್ಕೂಟರ್ ಅಥವಾ ಆಲ್ವಿನ್ ರೆಫ್ರಿಜರೇಟರ ೨ನೇ ಬಹುಮಾನ : ಒಂದು ಟೇಪ್ ರೆಕಾರ್ಡರ್ ಅಥವಾ ಅಟೋಮ್ಯಾಟಿಕ ಕ್ಯಾಮರಾ ಅಥವಾ ರೇಡಿಯೋಗ್ರಾಂ. ೩ನೇ ಬಹುಮಾನ (೧೦೦) ಟೋಕಿಯೋ ತಯಾರು ಜಪಾನ್ ೩ ಬ್ಯಾಂಡ್ ಆಲ್‌ವರ್ಲ್ಡ್ ಟ್ರಾನ್ಸಿಸ್ಟರ್ ಬೆಲೆ : ರೂ. ೨೬೫ ೪ನೇ ಬಹುಮಾನ (೧೦) ೩ ಬ್ಯಾಂಡ್ ಆಲ್‌ವರ್ಲ್ಡ್ ಟ್ರಾನ್ಸಿಸ್ಟರ್ ಬೆಲೆ : ರೂ. ೨೫೦

**ನೀವು ಮಾಡಬೇಕಾದ್ದೇನು ?**

ಸಂಖ್ಯೆ ೧೪ (ಹದಿನಾಲ್ಕು) ರಿಂದ ೨೯ (ಇಪ್ಪತ್ತೊಂಬತ್ತು) ರ ವರೆಗಿನ ೧ ಸಂಖ್ಯೆಯನ್ನು ಒಂದು ಸಲ ಉಪಯೋಗಿಸಿ ಅಡ್ಡಡ್ಡವಾಗಿ, ಮೇಲಿನಿಂದ ಕೆಳಕ್ಕೆ ಮೂಲೆಯಿಂದ ಮೂಲೆಗೆ ಯಾವ ರೀತಿ ಕೂಡಿದರೂ ಒಟ್ಟು ೮೬ (ಎಂಬತ್ತಾರು) ಬರುವಂತೆ ತುಂಬಬೇಕು.

**ಪ್ರವೇಶ ಶುಲ್ಕ** : ಪ್ರವೇಶ ಶುಲ್ಕ ಇಲ್ಲ   ಇದು ಜನಪ್ರಿಯ ಸ್ಪರ್ಧೆ

**ಕಡೇ ತಾರೀಖು : ೨೦-೩-೭೩.**   **ಫಲಿತಾಂಶ : ೨೫-೩-೭೩.**

ಸಹಾಯದ ನಮೂನೆ ಒಟ್ಟು ೮೨.

| | | | |
|---|---|---|---|
| ೧೭ | ೨೦ | ೨೩ | ೨೨ |
| ೨೪ | ೨೧ | ೧೮ | ೧೯ |
| ೨೬ | ೨೭ | ೧೬ | ೧೩ |
| ೧೫ | ೧೪ | ೨೫ | ೨೮ |

ಸ್ಪರ್ಧೆ ನಿಯಮಗಳು : (೧) ಎಂಟ್ರಿಗಳನ್ನು ಕಳುಹಿಸಲು ಖಾಲಿ ಕಾಗದ ಉಪಯೋಗಿಸಿ. (೨) ತಿದ್ದಿದ, ಹೊಡೆದುಹಾಕಿದ ಪ್ರವೇಶಗಳನ್ನು ಅಂಗೀಕರಿಸುವುದಿಲ್ಲ. (೩) ಪ್ರೊಮೋಟರುಗಳ ತೀರ್ಮಾನವೇ ಅಖೈರಾದದ್ದು ಹಾಗೂ ಕಾನೂನುಬದ್ಧ ಅನ್ವಯಿಸುತ್ತದೆ. (೪) ಅಧಿಕಾರಿಯುತ ಸೀಲಾದ ಉತ್ತರಕ್ಕೆ ಸರಿ ಹೋಗುವ ಉತ್ತರವೇ ಸರಿ ಎಂದು ಪರಿಗಣಿಸಲಾಗುವುದು. ಬಹುಮಾನಗಳನ್ನು ನಗದಾಗಿ ಕೊಡುವುದಿಲ್ಲ. (೫) ಮೊದಲು ಬಹುಮಾನ : [೧] ಅಧಿಕೃತ ಉತ್ತರಕ್ಕೆ ಸರಿಸಮಾನವಾಗಿರುವುದಕ್ಕೆ ಕೊಡಲಾಗುವುದು. (೬) ೨ನೇ ಬಹುಮಾನವನ್ನು (೧) ಮೇಲಿನ ಮೂರು ಅಡ್ಡ ಸಾಲುಗಳು ಸರಿಸಮಾನವಾಗಿದ್ದಲ್ಲಿ ಕೊಡಲಾಗುವುದು. (೭) ೩ನೇ ಬಹುಮಾನ (೧೦೦) ಯಾವುದೇ ಸಾಲು ಯಾವುದೇ ಅಂಕಿ ಎಲ್ಲಿಯೇ ಸರಿಸಮಾನವಿದ್ದಲ್ಲಿ ಕೊಡಲಾಗುವುದು. (೮) ೪ನೇ ಬಹುಮಾನ (೧೦) ಪ್ರೊಮೋಟರಿಗೆ ತೃಪ್ತಿಯಾಗಿ ಕಂಡುಬಂದವರಿಗೆ ನೀಡಲಾಗುವುದು. (೯) ಬಹುಮಾನಿತರು ಅಂಚೆ ವೆಚ್ಚ ಪ್ಯಾಕಿಂಗ್ ಲೈಸೆನ್ಸ್ ಫೀ ಮುಂತಾದುವುಗಳನ್ನು ಭರಿಸಬೇಕಾಗುವುದು. (೧೦) ೩ನೇ ಮತ್ತು ೪ನೇ ಬಹುಮಾನಿತರು ಈ ವೆಚ್ಚಗಳ ಜೊತೆಗೆ ಟ್ರಾನ್ಸಿಸ್ಟರು ಬೆಲೆಯ ಅರ್ಧದಷ್ಟು ಸಹ ಕೊಡಬೇಕಾಗುವುದು. (೧೧) ಫಲಿತಾಂಶ ಪ್ರಕಟವಾದ ನಂತರ ಲೈಸೆನ್ಸ್ ಫೀ ಇತ್ಯಾದಿಗಳನ್ನು ನೀವು ಕಟ್ಟಲು ವಿಜೇತರಿಗೆ ಪತ್ರ ಮುಖೇನ ತಿಳಿಸಲಾಗುವುದು. (೧೨) ಫಲಿತಾಂಶ ಕಳುಹಿಸಲು ೪೫ ಪೈಸೆ ಸ್ಟ್ಯಾಂಪ್ ಕಳುಹಿಸಿ. (೧೩) ನಿಮ್ಮ ವಿಳಾಸವನ್ನು ಇಂಗ್ಲೀಷ್ ಅಥವಾ ಹಿಂದಿಯಲ್ಲಿ ಬರೆಯಿರಿ. (೧೪) ಒಂದು ಕುಟುಂಬದಲ್ಲಿ ಒಂದು ಪ್ರವೇಶ ಪತ್ರ ಕಳುಹಿಸಬಹುದು. (೧೫) ಮುಂದಕ್ಕೆ ಬೇಕಾಗುವುದರಿಂದ ನಿಯಮಗಳನ್ನು ಕತ್ತರಿಸಿ ಇಟ್ಟುಕೊಳ್ಳಿ.

Director-Contest Department

**MUSIC & SOUND (MKH-86)**

P. O Box No 1576, DELHI 6

"ನೀವು ಆರೋಗ್ಯವಾಗಿರುವಿರಾ?" ಎಂದು ಕೇಳಿದ ಅವನು ಇತರರೊಂದಿಗೆ, "ಅವನನ್ನು ನೋಡಿ... ಷೇವ್ ಮಾಡಿಲ್ಲ! ಕೋಟನ್ನು ಕುರ್ಚಿಯ ಮೇಲೆ ಸುತ್ತಿ ಎಸೆದಿದ್ದಾನೆ. ಎರಡು ಗುಂಡಿಗಳು ಇಲ್ಲದ ಕೋಟು. ಇವೆಲ್ಲಾ ನೋಡಿದರೆ ಏನೆನಿಸುತ್ತದೆ? ಅವನು ಬದಲಾಗುತ್ತಿದ್ದಾನೆ ಎನಿಸದೆ? ಅವನಿದ್ದಾನಲ್ಲಾ ಅವನ ಹೆಸರೇನು.... ಪಕ್ಕದಲ್ಲಿಯೇ ಕುಳಿತಿದ್ದನಲ್ಲಾ... ಅವನಂತೆಯೆ ಇಲ್ಲವೆ?" ಎಂದು ಪಿಸುಪಿಸನೆ ಉಸಿರಿದ.

ಪರೋಂಡೆಯೋರರ ಪ್ರಧಾನಿಯ ಬರಿದಾದ ಮೇಜಿನತ್ತ ಎಲ್ಲರ ನೋಟಗಳು ಅರ್ಥಪೂರ್ಣವಾಗಿ ಹರಿದವು.

ನನ್ನ ನಡವಳಿಕೆ ತುಂಬಾ ಬದಲಿಸಿತ್ತು ಎಂಬುದು ನಿಜ. ನಾನು ಹಿರಿಯ ವಿಜ್ಞಾನಿಯ ಪಾತ್ರ ವಹಿಸುವುದನ್ನು ನಿಲ್ಲಿಸಿದ್ದೆ. ಮಾತನಾಡುವಾಗ ಪ್ರಯತ್ನಪೂರ್ವಕವಾಗಿ ಗಾಂಭೀರ್ಯವನ್ನು ತಂದುಕೊಳ್ಳುತ್ತಿರಲಿಲ್ಲ. ಸಣ್ಣ ಪುಟ್ಟ ಸಂಗತಿಗಳಿಂದಾಗಿ ದೊಡ್ಡ ರಾದ್ಧಾಂತ ಎಬ್ಬಿಸುತ್ತಿರಲಿಲ್ಲ. ಜ್ವರದ ತಾಪದಿಂದ ನರಳುತ್ತಿರುವವನಂತೆ ಆತುರದಿಂದ ಸಾಗುತ್ತಿದ್ದೆ. ಎಲ್ಲಕ್ಕಿಂತಲೂ ಮುಖ್ಯವಾದುದು ಸಂತೋಷದ ಬಗ್ಗೆ ನನ್ನ ಭಾವನೆ ಸಂಪೂರ್ಣವಾಗಿ ಬದಲಾಗಿತ್ತು.

ಈಗ ಸಂತೋಷ ಕೊಡುತ್ತಿದ್ದುದೇನು? ರೆಪ್ಪೆ ಬಡಿಯದೆ ಅವಳನ್ನು ನೋಡುವುದು. ಅವಳೂ ನನ್ನ ಕೋಣೆಯಲ್ಲಿಯೇ ಇದ್ದಳು. ತನ್ನ ಹಾಸಿಗೆ ಕೂಡ ಸಾಗಿಸಿದ್ದಳು. ನನ್ನ ಪ್ರಯೋಗಗಳಲ್ಲಿ ರಾತ್ರಿ–ಹಗಲು ನೆರವಾಗುತ್ತಿದ್ದಳು. ಅವಳು ನಿದ್ರಿಸುತ್ತಿದ್ದುದು ಯಾವಾಗ ಎಂಬುದೂ ನನಗೆ ತಿಳಿದಿರಲಿಲ್ಲ. ಮೇಜಿನ ಬಳಿ ತಲೆ ತಗ್ಗಿಸಿ ಕುಳಿತಿರುವ ಭಂಗಿಯಲ್ಲಿ ಅವಳನ್ನು ನೋಡುವುದೇ ಚಂದ. ತಾಯಿ ಮಗುವಿನತ್ತ ಬಗ್ಗಿರುವಂತೆ ತೋರುತ್ತಿತ್ತು.

ಅವಳ ಬೈತಲೆ, ಕಂಠ, ಹೆಗಲು, ಅನಂತರ ಉನ್ನತವಾದ ಶಿಖರದಂತಹ ಉಬ್ಬು—ಇಷ್ಟರಿಂದಲೇ ಅವಳನ್ನು ಅನೇಕ ಬಾರಿ ಗುರುತಿಸಿದ್ದೆ. ಅವಳು ಪ್ರತಿಯಾಗಿ ನನ್ನತ್ತ ನೋಡುವಳು ಎಂದು ಕಾಯುತ್ತಿದ್ದೆ. ನನ್ನ ಮೌನ ನಿವೇದನವನ್ನು ಊಹಿಸಿಕೊಂಡು ತಲೆಯನ್ನು ಓರೆಮಾಡಿ ನನ್ನತ್ತ ನೋಡುತ್ತಿದ್ದಳು. ಅಂತೆ ನೋಡಿದಾಗಲೆಲ್ಲಾ ಅವಳಲ್ಲಿ ಉತ್ತರ ಸಿಗದ ಪ್ರಶ್ನೆಯೊಂದು ಹಿಡಿದು ಮುಂದೆ ಬರುತ್ತಿತ್ತೇನೋ. ನನ್ನನ್ನೇ ದಿಟ್ಟಿಸಿ ಸ್ವಲ್ಪ ನೋಡಿ ಮತ್ತೆ ತನ್ನ ಕೆಲಸದಲ್ಲಿ ಲೀನವಾಗುತ್ತಿದ್ದಳು.

ನನ್ನನ್ನು ಇನ್ನೂ ಒಂದು ಪರೀಕ್ಷೆಗೊಡ್ಡಲು ಅವಳು ತೀರ್ಮಾನಿಸಿದಳು. ಒಂದೆರಡು ಗಂಟೆಗಳ ಬಿಡುವು ದೊರೆತಾಗ ಇಬ್ಬರೂ ಆರ್ಟ್‌ಗ್ಯಾಲರಿ, ನಾಟಕ ಅಥವ ಒಪೆರಾ ನೋಡಬೇಕೆಂದು ನಮ್ಮಲ್ಲಿಯೇ ಒಂದು ಒಪ್ಪಂದವಾಗಿತ್ತು.

ಒಂದು ಸಂಜೆ ಪ್ರಯೋಗವನ್ನು ಸಿದ್ಧಗೊಳಿಸಿ ಸ್ವಿಚ್ ಹಾಕಿ ನನ್ನ ಕೈಹಿಡಿದು, "ಒಂದು ಗಂಟೆ ಪೂರ್ಣವಾಗಿ ನಾವೇನೂ ಮಾಡಲಾರೆವು. ಆ ಕಾಲದಲ್ಲಿ ನನಗೊಂದು ಉಡುಗೊರೆ ಕೊಡುವಿರಾ?" ಎಂದು ಕೇಳಿದಳು.

ಯೋಚಿಸಿ ಮೆಲ್ಲನೆ, "ಆಗಲಿ," ಎಂದೆ.

ಇಬ್ಬರೂ ಹೊರಕ್ಕೆ ಹೊರಟೆವು. ನೇರವಾಗಿ ಸಾಗಿ ಸಾಲು ಮರಗಳಿಂದ ಕತ್ತಲಾವರಿಸಿದ್ದ ರಸ್ತೆಗೆ ಹೋದಳು. ಇದ್ದಕಿದ್ದಂತೆಯೇ 'ನೀವು' ಎನ್ನುವುದನ್ನು ಮರೆತು, "ನಿನಗೆ ಈ ದಾರಿ ನೆನಪಿರಬೇಕು," ಎಂದಳು.

ಈ ಪರೀಕ್ಷೆಗಳು ಸಾಕಷ್ಟಾಗಿತ್ತು. ನನಗೆ ಕೋಪ ಬಂದಿತ್ತು. "ಇನ್ನು ಮೇಲೆ 'ನೀನು' ಎಂದೇ ಮಾತಾಡೋಣ. ಆದರೆ ಈ ರೀತಿಯ ಪರೀಕ್ಷೆಗಳ ಕಣ್ಣುಮುಚ್ಚಾಲೆ ಮಾತ್ರ ಖಂಡಿತವಾಗಿ ನಿಲ್ಲಬೇಕು. ಇದನ್ನು ಎರಡು ತಿಂಗಳಿಂದ ನಡೆಸುತ್ತಿದ್ದೀ. ಇದರಿಂದ ಕಾಲ ಅಪವ್ಯಯವಾಗುತ್ತದೆ ಅಷ್ಟೆ."

"ಅಷ್ಟೊಂದು ಆತುರ ಏಕೆ?"

ಅದೇ ಕ್ಷಣದಲ್ಲಿ ರಸ್ತೆಯ ದೀಪ ಚೆಲ್ಲಿದ ಬೆಳಕಿನಲ್ಲಿ ನನ್ನ ಗೂಬೆಯ ಕಪ್ಪು ಆಕಾರ ಕಾಣಿಸಿತು. ಪಿಳಿಪಿಳನೆ ಮಿಟುಕಿಸುತ್ತಿದ್ದ ಅದರ ಕಣ್ಣು ಹೊಳೆಯುತ್ತಿತ್ತು. ಅದನ್ನು ನನ್ನ ಜೊತೆಗಾತಿಗೆ ತೋರಿಸೋಣವೆಂದುಕೊಂಡೆ. ಅವಳಿಗೆ ಕಾಣಿಸದು ಎಂಬುದು ನೆನಪಾಗಿ ಸುಮ್ಮನಾದೆ.

"ನಾನೇಕೆ ಅಷ್ಟೊಂದು ಆತುರವಾಗಿ ಸಾಗುತ್ತೇನೆ...ಅದು ನಿನ್ನ ಪ್ರಶ್ನೆ," ಎನ್ನುತ್ತಾ ಅವಳ ಪ್ರಶ್ನೆಯನ್ನು ವಿಶದಗೊಳಿಸಿದೆ. "ನಾನು



# ನಿಮ್ಮ ಮುದ್ದಿನ ಮಗು



ನಿಮ್ಮ ಪ್ರೀತಿಯ ಮಗು. ಅದರ ಏಳಿಗೆಗಾಗಿ ಶಕ್ತಿ ಮೀರಿ ದುಡಿಯಲು ನೀವು ಬಯಸುವಿರಿ. ಆದರೆ, ನಿಮಗೆ ಬಹಳ ಮಕ್ಕಳು ಇದ್ದರೆ, ಅವರೆಲ್ಲರಿಗಾಗಿ ಹೀಗೆ ಶಕ್ತಿಮೀರಿ ದುಡಿಯಲು ನಿಮಗೆ ಸಾಧ್ಯವೆ?

ಮೂರು ವರ್ಷಗಳನಂತರ ಎರಡನೇ ಮಗು. ನಿಮಗೆ ಅತಿ ಹತ್ತಿರದ ಕುಟುಂಬ ಕಲ್ಯಾಣ ಯೋಜನಾ ಕೇಂದ್ರಕ್ಕೆ ಭೇಟಿ ಕೊಡಿರಿ.

davp ..38

ಬದುಕಲು ಒಂದು ವರ್ಷಕ್ಕೂ ಕಡಿಮೆ ಅವಧಿ ಉಳಿದಿದೆ."

ನನ್ನ ಉತ್ತರ ಅವಳನ್ನು ವಿಚಲಿತಗೊಳಿಸಿತು. ನನಗೆದುರಾಗಿ ತಿರುಗಿ ನಿಂತು, ತನ್ನ ಕೈಗಳಿಂದ ಕೆನ್ನೆಗಳನ್ನು ಆವರಿಸಿ ಹಿಡಿದು, ನೀರು ತುಂಬಿದ ಕಣ್ಣುಗಳನ್ನು ನನ್ನ ಕಣ್ಣುಗಳಲ್ಲಿ ನೆಟ್ಟು, "ಅದು ನಿಜವೇ ಆಗಿದ್ದರೆ ನಮ್ಮಲ್ಲಿ ಈ ರಹಸ್ಯಗಳ ತಾಕಲಾಟವೇಕೆ?" ಎಂದಳು ಮೆಲ್ಲನೆ.

ನಾನು ಬಾಯ್ತೆರೆಯುವ ಮೊದಲೇ ನನ್ನ ತುಟಿಯ ಮೇಲೆ ಬೆರಳಿಟ್ಟು, "ಇದೂ ನಿಜವೇ. ನನಗೆ ಚೆನ್ನಾಗಿ ಗೊತ್ತು ಪ್ರಿಯಾ," ಎಂದಳು.

ಕೊನೆಗೂ ಬಗೆಯು ಬಿಡಿಸಿಕೊಂಡಿತು. "ನಾನು ಅವನೇ ಎಂದುಕೊಂಡಿದ್ದೀಯಾ?" ಎಂದು ಕೇಳಿದೆ.

"ಮತ್ತೆ ಮತ್ತೆ ನನ್ನನ್ನು ಚಿತ್ರಹಿಂಸೆಗೆ ಒಡ್ಡಬೇಡ. ಕಳೆದ ಬಾರಿ ನನ್ನಿಂದ ಹೇಗೆ ಮರೆಯಾಗಿರಲು ಪ್ರಯತ್ನಿಸಿದೆ ಎಂಬುದನ್ನು ನೆನಪು ಮಾಡಿಕೋ. ನನ್ನನ್ನೇಕೆ ಹೀಗೆ ದೂರ ತಳ್ಳುವೆ?"

"ನಿಜವಾಗಿಯೂ ನಿನ್ನಿಂದ ನಾನು ಬೇಗ ಬೇರೆಯಾಗಲಿದ್ದೇನೆ."

"ಅದು ಸುಳ್ಳು. ಮತ್ತೆ ನನ್ನಿಂದ ನೀನು ಓಡಿ ಹೋದರೂ, ನಿನ್ನ ಎತ್ತರ, ಮೈಕಟ್ಟು, ಬಣ್ಣ, ಮುಖ ಎಲ್ಲವನ್ನೂ ಬದಲಿಸಿದರೂ ನಾನು ನಿನ್ನನ್ನು ಕಂಡುಹಿಡಿಯಬಲ್ಲೆ!"

"ಇನ್ನು ನನ್ನ ಆಯುಸ್ಸು ಒಂದು ವರ್ಷಕ್ಕಿಂತಲೂ ಕಡಿಮೆ. ಇದು ಸತ್ಯ."

"ನಾ ನಂಬಲಾರೆ. ಎಷ್ಟೊ ವರ್ಷಗಳಿಂದ ಈ ಮಾತು ಹೇಳುತ್ತಿರುವೆ."

"ಅದನ್ನು ಹೇಳಿದವನು ಅವನು. ಅವನು ಕೊಲೆಯಾದ."

"ಅವನು ಸಾಯಲಿಲ್ಲ. ತುಂಬಾ ಚತುರ. ಎಲ್ಲವನ್ನೂ ಮೊದಲೇ ಯೋಚಿಸಿದ್ದ. ತನ್ನ ಎಲ್ಲಾ ವಸ್ತುಗಳು ನಿನ್ನ ಕೈಗೆ—ತನ್ನ ಎರಡನೆಯ ರೂಪಕ್ಕೆ ಬರುವಂತೆ ಅಣಿ ಮಾಡಿದ. ಅಬ್ಬ! ತುಂಬಾ ಚತುರ! ಅವರಿಗೆ ನೀನು ಖಂಡಿತ ದೊರೆಯಲಾರೆ..."

"ಇದೆಲ್ಲಾ ಏನು ಅರ್ಥಶೂನ್ಯ ಮಾತು!"

ಅವನೂ ಅವಳ ಮಾತನ್ನು ತಡೆಯಲು ಇದೇ ಮಾತು ಪ್ರಯೋಗಿಸುತ್ತಿದ್ದನೇನೋ. ಈ ಮಾತು ಕೇಳಿ ನಕ್ಕಳು.

"ಮತ್ತೆ ಈ ಬಗ್ಗೆ ಮಾತನಾಡುವುದಿಲ್ಲ. ಅದು ನಿನಗೆ ಇಷ್ಟವಿಲ್ಲವೆಂದ ನಂತರ ನಾನೇಕೆ ಮಾತನಾಡಲಿ? ಮೊದಲಿಗಿಂತ ಈಗ ನಿನ್ನೆಂದರೆ ನನಗೆ ಹೆಚ್ಚು ಮಮತೆ. ನಿನ್ನ ನಗೆ ಸುಂದರವಾಗಿರುತ್ತದೆ. ಮೊದಲಿನ ರೂಕ್ಷತೆ ಇಲ್ಲ. ಬರಬೇಕಾದ ವ್ಯಕ್ತಿಯ ಬಗ್ಗೆ ಅಷ್ಟು ಸುಂದರವಾಗಿ ಹೇಳುತ್ತೀ... ನಿನ್ನ ಕಾಲವನ್ನು ವ್ಯರ್ಥಗೊಳಿಸಿದೆ! ನನ್ನನ್ನೇಕೆ ಹೀಗೆ ಚುಡಾಯಿಸಿದೆ? ನಾನೇನು ಇಪ್ಪತ್ತರ ಯುವತಿಯೇ? ನಾನು ಹೇಳಬೇಕೆಂದು ನೀನು ಬಯಸಿದ ಪದವನ್ನೇ ಮತ್ತೆ ಗಟ್ಟಿಯಾಗಿ ಹೇಳಲೇ... ಹೌದು, ಹೌದು. ಈಗ ಕೇಳಿಸಿತೆ? ನಿನಗೆ ಕೇಳಿತೇ? ಹೇಳು...."

"ಕೇಳಿಸಿತು," ಎಂದೆ ಮೆಲ್ಲನೆ. ಪ್ರವಾಹಕ್ಕೆ ಎದುರಾಗಿ ಹೋರಾಡುವ ಚೈತನ್ಯ ನನ್ನಲ್ಲಿ ಇರಲಿಲ್ಲ. "ನಿನಗೆ ಯಾರೆಂದರೆ ಹೆಚ್ಚು ಮಮತೆ—ಗತಿಸಿದವನೋ? ಮುಂದೆ ನಿಂತಿರುವವನೋ?" ಎಂದು ಕೇಳಿದೆ.

"ನನ್ನ ಮುಂದೆ ನಿಂತಿರುವವನು."

ಆಕೆ ನನ್ನನ್ನು ಪ್ರೇಮಿಸುತ್ತಿದ್ದಳು. ಅವನ್ನು ಅವಳ ಕಣ್ಣಿನಲ್ಲಿಯೇ ಕಾಣುತ್ತಿದ್ದೆ. ತಲೆಯನ್ನು ಸ್ವಲ್ಪ ಬಲಕ್ಕೆ ತಿರುಗಿಸಿದೆ. ಆ ಕಣ್ಣುಗಳಲ್ಲಿ ಕಂಬನಿ ತುಂಬಿತ್ತು.

ದರೋಡೆಖೋರರ ಪ್ರಧಾನಿ ತೆರವು ಮಾಡಿದ್ದ ಸ್ಥಳ ನನ್ನದಾಗಿತ್ತು. ಈಗ ನಾನು ಯೌವನದಲ್ಲಿರಲಿಲ್ಲ, ಪ್ರಬುದ್ಧನಾಗಿದ್ದೆ.

೫

ವೈದ್ಯನ ಮಾತು ದಿಟ, ವೈದ್ಯನನ್ನು ನೋಡಿ ಬಂದ ಐದಾರು ತಿಂಗಳ ನಂತರ ಬೇಸಿಗೆಯ ಒಂದು ದಿನ ನಾನು ರೋಗಿ ಎನಿಸಿತು. ನಿಂತಿರುವುದೇ ಸಾಧ್ಯವಿಲ್ಲದಾಯಿತು. ನನ್ನ ಪ್ರೇಮಿಯತ್ತ ಅಪರಾಧಿ ನೋಟ ಬೀರಿದೆ. "ನನಗೆ ಮಲಗಬೇಕೆನಿಸುತ್ತಿದೆ. ಇನ್ನು ನೀನೇ ಇದನ್ನೆಲ್ಲಾ ನಿರ್ವಹಿಸಬೇಕು. ವೈರ್‌ಲೆಸ್ ಸ್ವಿಚ್ ಹಾಕು."

ಸ್ವಿಚ್ ಹಾಕಿದೊಡನೆಯೇ ಸದ್ದು—ಕತ್ತಲೆಯ ಒಳಹೊಕ್ಕಿದ್ದ ಸದ್ದು. ಕಳೆದ ಬಾರಿ ಬಂದುದಕ್ಕಿಂತಾ

ಶ್ರಮವಹಿಸಿ ಕೆಲಸಮಾಡುತ್ತಿದ್ದರು. ಅವರ ಅಪಾರ ಕೃತಕ ಬೆಳಕಿನಲ್ಲಿ ಬೆಳೆದ ಕೋಶ.

"ಇನ್ನೂ ಶ್ರಮಪಟ್ಟು ಕೆಲಸ ಮಾಡಬೇಕು. ತೀವ್ರವಾಗಿ ಮುಂದೆ ಸಾಗಬೇಕು." ಎಂದೆ.

ಪ್ರನಾಳಗಳಲ್ಲಿಯ ದ್ರವ ಇನ್ನೂ ತೀವ್ರವಾಗಿ ಕುದಿಯುತ್ತಿತ್ತು. ದೀಪಗಳು ಹೆಚ್ಚು ಪ್ರಜ್ವಲಿತಗೊಂಡವು.

ಸೆಪ್ಟೆಂಬರಿನಲ್ಲಿ ಮಳೆ. ಒಂದು ಪ್ರಯೋಗ ಮುಗಿಸಿದ್ದೆವು. ಕೈಯನ್ನು ಕೂಡ ಎತ್ತಲಾರದವನಂತೆ ಹಾಸಿಗೆಯಲ್ಲಿ ಬಿದ್ದಿದ್ದೆ. "ಮೊದಲ ಲೆಡ್ ಕಂಟೈನರ್ ತೆರೆ," ಎಂದು ಕೇಳಿದೆ.

ಮುದ್ರೆಯನ್ನು ಕಿತ್ತ ಅವಳು, "ಇದು ನಿರುಪಯೋಗಿ. ಈಗ ಸ್ವಲ್ಪ ಕಿಟ್ಟ ಮಾತ್ರ ಉಳಿದುಕೊಂಡಿದೆ ಅಷ್ಟೆ," ಎಂದಳು ಮೆಲ್ಲನೆ.

"ಅದು ನಿರುಪಯೋಗಿ ಅಲ್ಲ. ಅದು ಹೋಲಿಕೆಗಾಗಿ ಇದೆ ಅಷ್ಟೆ. ಉಳಿದೆಲ್ಲವನ್ನೂ ಬೇರೆ ಎರಡು ಪ್ರಯೋಗಗಳಲ್ಲಿ ಗಮನಿಸಿಕೊಳ್ಳಲಾಗುತ್ತದೆ. ಪ್ರದರ್ಶಿಸಲು ಈ ಕಿಟ್ಟವೇ ಸಾಕು...ಬೇರೆಯವರನ್ನೆಲ್ಲಾ ಕರೆಯಬೇಕು... ನಿರ್ದೇಶಕನಿಗೆ ಫೋನ್ ಮಾಡು..." ಎಂದೆ ನಾನು, ಶಾಂತ ಸ್ವರದಲ್ಲಿ.

ರೋಗಿಯ ಬಳಿಗೆ ಆಸ್ಪತ್ರೆಯಲ್ಲಿ ಸದ್ದು ಮಾಡದೆ ಬರುವವರಂತೆ ಅವರೆಲ್ಲಾ ಮೆಲ್ಲನೆ ಬಂದರು. ಅವರಿಗೆ ಇದೆಲ್ಲಾ ಏನು ಎಂದೇ ತಿಳಿದಿರಲಿಲ್ಲ. ಗೋಡೆಗಳ ಮೇಲಿದ್ದ ಲೆಕ್ಕಗಳು, ಪರಿಕರಗಳು ಅವರಿಗೆ ಅಚ್ಚರಿ ತಂದವು.

ಅನಂತರ ನನ್ನತ್ತ ನೋಡಿದರೂ, ನನ್ನ ರೂಪವೇ ಅವರಿಗೆ ಸಿಡಿಲೆರಗಿಸಿರಬೇಕು, ತುಂಬಾ ಗಂಭೀರವದನರಾಗಿದ್ದರು. ನನ್ನ ಹಳೆಯ ಮಿತ್ರ ನನ್ನ ಜತೆಗಾತಿಯನ್ನೇ ನೋಡುತ್ತಿದ್ದು ಏನೋ ನಿರ್ದೇಶಕನ ಕಿವಿಯಲ್ಲಿ ಉಸುರಿದ.

"ಹ್ಞೂ, ಅವರಿಗೆ ಹೇಳು," ಎಂದು ನಾನು ಅವಳತ್ತ ನೋಡಿದೆ.

ನಮ್ಮ ಕೆಲಸದ ಬಗ್ಗೆ ಹತ್ತು ನಿಮಿಷಗಳ ಕಾಲ ತರಬೇತಿ ಪಡೆದ ವಿದ್ಯಾರ್ಥಿಯಂತೆ ಮಾತನಾಡಿದಳು. ಅವರಿಗೆ ಕಿಟ್ಟವನ್ನು ತೋರಿಸಿದಳು. ಅದು ನಿರ್ದೇಶಕನ ಮೇಲೆ ತುಂಬಾ ಒಳ್ಳೆಯ ಪ್ರಭಾವ ಬೀರಿತು. ನನ್ನ ಕೈ ಕುಲುಕಿದವರಲ್ಲಿ ಆತನೇ ಮೊದಲಿಗ. ಅನಂತರ ಎಲ್ಲರೂ ಓಡಿ ಬಂದರು. ನನ್ನ ದುರ್ಬಲವಾದ ಕೈಯನ್ನು ಎಲ್ಲರೂ ಹಿಡಿದರು. ಅವರ ರಭಸಕ್ಕೆ ಯಾವ ಕ್ಷಣದಲ್ಲಿಯಾದರೂ ನನ್ನ ಹೃದಯ ಹೊರಕ್ಕೆ ಕುಪ್ಪಳಿಸಿ ಬರುತ್ತದೆ ಎನಿಸಿತು.

"ಇಂದಿನಿಂದ ನಾವೆಲ್ಲಾ ಒಟ್ಟಿಗೆ ಕೆಲಸ ಮಾಡೋಣ. ಎಲ್ಲರೂ ಇದೇ ಕಾರ್ಯದ ಬಗ್ಗೆ ಕೆಲಸ ಮಾಡುತ್ತಾರೆ," ಎಂದ ನಿರ್ದೇಶಕ.

ಇಬ್ಬರು ನನ್ನ ಕೋಣೆಯ ಪ್ರಯೋಗಾಲಯದಲ್ಲಿ ರಾತ್ರಿ ಹಗಲು ಕೆಲಸಕ್ಕಾಗಿ ಉಳಿದುಕೊಂಡರು. ಪ್ರಯೋಗಾಲಯದಿಂದ ಫಲಿತಾಂಶಗಳನ್ನು ಫೋನ್ ಮುಖಾಂತರ ತಿಳಿಸುತ್ತಿದ್ದರು. ಇದರಿಂದ ತೀವ್ರ ಗತಿಯಲ್ಲಿ ಮುಂದೆ ಸಾಗುತ್ತಿದ್ದೆವು.

ಡಿಸೆಂಬರಿನಲ್ಲಿ ಶೀತಲ ದಿನವೊಂದರಲ್ಲಿ ನನ್ನ ಸಂಗಾತಿ ನಿರ್ದೇಶಕನ ಮುಂದೆ ಎರಡನೆಯ ಸೀಸದ ಮುದ್ರೆ ತೆರೆದಳು. ಅದೇ ಇಳಿದ ಧ್ವನಿಯಲ್ಲಿ, "ಮತ್ತೊಂದು ಅಪ್ರಯೋಜಕ ವಸ್ತು. ಈ ಬಾರಿ ತುಂಬಾ ಮೋಸವಾಗಿದೆ. ಈ ಕಿಟ್ಟ ಪೂರ್ತಿಯಾಗಿ ಕಪ್ಪಾಗಿದೆ," ಎಂದಳು.

ಅವರ ಮಾತು ಕೇಳಿಸಿಕೊಂಡೆ.

"ಈ ಸೋಲಿಗೂ ನಾನು ಅವಕಾಶ ಮಾಡಿ ಕೊಟ್ಟಿದ್ದೇನೆ. ಕೆಲಸ ಪ್ರಾರಂಭಿಸಿ, ಬೇಗ," ಎಂದೆ, ತುಂಬಾ ಪ್ರಯಾಸಪೂರ್ವಕವಾಗಿ ತುಟಿಗಳನ್ನು ಅಡಿಸುವುದೂ ಸಾಧ್ಯವಾಗದೆ.

ನನ್ನ ಕಿವಿ ತುಂಬಾ ಚುರುಕಾಗಿತ್ತು. ನಿರ್ದೇಶಕ ಬಾಯಿಗೆ ಕೈ ಅಡ್ಡವಾಗಿಸಿಕೊಂಡು, "ಮೂರನೆಯ ಪ್ರಯೋಗವೂ ವಿಫಲವಾದರೆ ಅವನು ಸಾಯುವುದು ಖಂಡಿತ. ಇದೆಲ್ಲವನ್ನೂ ಪ್ರಯೋಗಾಲಯಕ್ಕೇ ತೆಗೆದುಕೊಂಡು ಹೋಗಿ ಅಲ್ಲಿ ಪ್ರಯೋಗ ನಡೆಸುವುದೇ ಸೂಕ್ತ. ಅಲ್ಲಿ ಸೌಲಭ್ಯಗಳೂ ಹೆಚ್ಚು..." ಎಂದು ಹೇಳಿದ್ದೂ ಕೇಳಿಸಿತು.

"ಹಾಗೇ ಮಾಡಿ," ಎಂದೆ ನಾನೇ.

ನಾನು, ನನ್ನ ಸಂಗಾತಿ—ಅವಳನ್ನು ನನ್ನ ಹೆಂಡತಿ ಎನ್ನಲೇ? —ಇಬ್ಬರೇ ಶಾಂತ ವಾತಾವರಣದ ಕೋಣೆಯಲ್ಲಿ, ಉಳಿದುಕೊಂಡೆವು. ಆ ಗೂಡೆ ಕೆಲವು ದಿನಗಳ ಹಿಂದೆ ಕಟ್ಟಿದ್ದು ಬಾಗಿಲು ತೆಗೆದಾಗ ಹೇಗೋ

ಒಳಕ್ಕೆ ಬರುತ್ತು. ಈಗ ಕಿಟಕಿಯ ಬಳಿ ಮಲಗುತ್ತಿತ್ತು. ಮಂಜಿನ ಕೆಳಗೆ ಅಪ್ಪಾದು-ತ್ತಿತ್ತು. ನನ್ನ ಹೆಂಡತಿ–ಹೆಂಡತಿ ಎಂದು ಕರೆಸಿಕೊಳ್ಳಲು ಬೇಕಾದ ಎಲ್ಲಾ ಅರ್ಹತೆಗಳು ಅವಳಲ್ಲಿದ್ದುವು—ನನ್ನ ಪಕ್ಕದಲ್ಲಿ ಕುಳಿತಿದ್ದಳು. ಆಕೆ ಸೋಟಕಾದ ತಾರುಣ್ಯದ ನೆನಪನ್ನು ಮೆಲುಕು ಹಾಕುತ್ತಿದ್ದೆವು.

ಮೂರು ನಾಲ್ಕು ದಿನಗಳ ನಂತರ ತುಂಬಾ ಮುಜುಗರವೆನಿಸಿತು. ಕಿಟಕಿಯ ಬಾಗಿಲು ತೆರೆಯಲು ಹೇಳಿದೆ.

"ತುಂಬಾ ಛಳಿ. ಬಾಗಿಲು ತೆರೆಯುವುದು ಅವಶ್ಯವೇ?"

"ಬೇಗ ತೆಗೆ, ಬೇಗ," ಎಂದು ಪಿಸುಗುಟ್ಟಿದೆ.

ಕಿಟಕಿಯ ಬಳಿಗೆ ಅವಳು ಹೋದಳು.

"ಇದೇನು? ಡಿಸೆಂಬರಿನಲ್ಲಿ ವಸಂತ ಋತುವೇ? ಹಿಮ ಕರಗುತ್ತಿದೆ. ಜೇನು ಗುಂಯ್‌ಗುಟ್ಟುತ್ತಿದೆ..."

"ತೆಗೆ."

ಕಿಟಕಿಯ ಬಾಗಿಲನ್ನು ತೆರೆದಳು. ವಸಂತ ಮಾರುತದೊಂದಿಗೆ ದೂರದ ಸಂಗೀತ ಧ್ವನಿ



"ಏನ... ರದ್ದಿಗೆಳೇ... ಮನೆಗೆ...ಬಲ್ಲಿ? ಕತೆ, ಕವನಗಳೇನಾದ್ರೂ ಇದ್ರೆ ಕೊಡಿ..."

ಕೋಣೆಯಲ್ಲೆಲ್ಲಾ ಆವರಿಸಿತು. ಅಲೆಗಳಂತೆ ಒಮ್ಮೆ ಏರುತ್ತಾ ಒಮ್ಮೆ ಇಳಿಯುತ್ತಾ ನಗರದಲ್ಲೆಲ್ಲಾ ಅದು ಹರಡಿತ್ತು. ಜಗತ್ತಿಗೆ ಸುದ್ದಿಯನ್ನು ಒಯ್ಯುತ್ತಿದ್ದ ತಂತಿಗಳ ಸ್ಪಂದನವೆಂಬುದೇ ತಿಳಿಯದೆ ಅದನ್ನು ನಾನು ಕೇಳುತ್ತಿದ್ದೆ. ಕತ್ತಲೆ ಮತ್ತು ಶೀತದ ವಿರುದ್ಧ ಮಾನವನ ಜಯದ ಸುದ್ದಿ. ಈ ಸಂಗೀತದೊಂದಿಗೆ ವಿಮಾನಗಳ ಸದ್ದೂ ಸೇರುತ್ತಿತ್ತು, ಅವು ವಸಂತವನ್ನೇ ಕಾಣದ ಕತ್ತಲೆಯ ಖಂಡಕ್ಕೆ ಅಮೂಲ್ಯವಾದುವನ್ನು ಕೊಂಡೊಯ್ಯುತ್ತಿದ್ದವು. ಇವಾವೂ ನನಗೆ ತಿಳಿದಿರಲಿಲ್ಲ. ನನ್ನ ಶಕ್ತಿಯೆಲ್ಲಾ ಉಡುಗಿ ಹೋಗಿತ್ತು. ಹೆಜ್ಜೆಯ ಸಪ್ಪಳಕ್ಕಾಗಿ ಕಾದು ಮಲಗಿದ್ದೆ. ಶುಭ ಸುದ್ದಿಯನ್ನು ಯಾರಾದರೂ ಮಿತ್ರರು ತರುತ್ತಾರೆ ಎಂದೇ ನಿರೀಕ್ಷಿಸುತ್ತಿದ್ದೆ. ಗೂಬೆಯ ವರ್ತನೆ ನನ್ನನ್ನು ಇನ್ನೂ ಕಂಗೆಡಿಸಿತು. ನನ್ನ ಹಾಸಿಗೆಯ ಸುತ್ತಲೂ ಸುತ್ತುತ್ತಿತ್ತು. ರೆಕ್ಕೆಗಳನ್ನು ರಪರಪನೆ ಬಡಿದು ಗರಿಗಳನ್ನು ನಿಮಿರಿಸಿ ಸುತ್ತಾಡುತ್ತಿತ್ತು. ಕಾರ್ಯದ ಫಲ ತನ್ನ ಇರುವಿನ ಮೇಲೆಯೇ ನಿರ್ಭರವಾಗಿದ್ದು ಅದರ ಫಲವನ್ನು ಕಾಣುವ ಮೊದಲೇ ಬಾಳಿಗೆ ಕೊನೆಯ ನಮಸ್ಕಾರ ಸಲ್ಲಿಸುವುದು ತುಂಬಾ ವಿಷಾದಕರ ಸಂಗತಿ.

ಮೆಲ್ಲ ಮೆಲ್ಲನೆ ನಿದ್ರೆ ಆವರಿಸಿತು. ಧ್ವನಿಗಳು ಮೆಟ್ಟಿಲ ಮೇಲೆ ಪ್ರತಿಧ್ವನಿಸುತ್ತಿದ್ದವು. ಬಾಗಿಲು ತೆರೆದುಕೊಂಡಿತು. ಹೆಜ್ಜೆ ಸಪ್ಪಳ, ಗದ್ದಲ. ಆದರೆ ನನಗೆ ಇದ್ಯಾವುದೂ ಕೇಳಿಸಲಿಲ್ಲ. ನಾನು ಮೊದಲು ಕೇಳಿದ ಧ್ವನಿ ನನ್ನ ಸಹಪಾಠಿ–ವೈದ್ಯನ ಮಾತು! "ಇನ್ನೂ ಜೀವವಿದೆ."

ನನ್ನ ಪಕ್ಕದಲ್ಲಿ ಹಾಸಿಗೆಯ ಮೇಲೆ ಕುಳಿತು ನಡುಗುತ್ತಿದ್ದ ಬೆರಳುಗಳಿಂದ ಲೆಡ್ ಕ್ಯಾಪ್-ಸೂಲನ್ನು ತೆರೆಯುತ್ತಿದ್ದ.

"ಬೇಗ ಹೇಳಿ," ಎಂದು ಕಿರುಚಲು ಪ್ರಯತ್ನಿಸಿದೆ. ಕಿರುಚಿದೆ ಕೂಡ! ನನ್ನ ರೋಗ ನನ್ನಿಂದ ದೂರವಾಗಿತ್ತು.

ವೈದ್ಯನ ಕೈಯಲ್ಲಿ ಕಣ್ಣೋರೈಸುವ ಬೆಳಕಿನ ಬಿಂದುವಿತ್ತು. ಅದು ಕೋಣೆಯನ್ನು ಬೆಳಕಿನಿಂದ ತುಂಬಿತ್ತು. ಇದು ನನಗೆ ತುಂಬಾ ಮೊದ-ಲಿಂದಲೂ ಪರಿಚಿತವಾದದ್ದು. ಆಗಾಗ ಕನಸಿ

ನಲ್ಲೂ ಇದನ್ನು ಕಂಡಿದ್ದೆ. ಕಣ್ಮುಚ್ಚಿದಾಗಲೆಲ್ಲಾ ಈ ದೃಶ್ಯವೇ ಕಣ್ಮುಂದೆ ನಿಲ್ಲುತ್ತಿತ್ತು. ಆದರೆ ಈ (ಮರಿ) ಸೂರ್ಯ ನನ್ನ ಕಣ್ಣಿಗೆ ತುಂಬಾ ಚುರುಕಾಗಿದ್ದ. ನಿರ್ಬಲನಾಗಿ ತೂರಾಡುತ್ತಾ ಎದ್ದೆ. ನನ್ನ ಹೆಂಡತಿ ನನ್ನ ನೆರವಿಗೆ ಓಡಿ ಬಂದಳು. ಅವಳ ನೆರವು ಬೇಡವೆಂದು ನಾನೇ ಕೋಣೆಯಲ್ಲಿ ನಡೆದೆ. ನನ್ನ ಕಾಲನ್ನು ಝಾಡಿಸಿದೆ ಕೂಡ. ಗೋಡೆಗೆ ಒರಗಿ ದೀಪ್ತಿಯುತಳಾಗಿ ದಿವ್ಯ ಮಂಗಳೆಯಂತೆ ನಿಂತಿದ್ದಳು, ಅವಳು.

ನನ್ನನ್ನು ನೋಡುತ್ತಾ, "ತುಂಬಾ ಕೃತಜ್ಞತೆಗಳು ಡಾಕ್ಟರ್," ಎಂದಳು.

"ಯಾವುದಕ್ಕಾಗಿ? ಅವನ ಸಾವನ್ನು ಜಯಿಸಿದವನು ಅವನೇ! ಅದಕ್ಕೆ ಮದ್ದು ಕಂಡು ಹಿಡಿದ ವ್ಯಕ್ತಿ ಅವನೇ! ಈ ಬೆಳಕು ಅವನದೇ!"

ಮತ್ತೊಮ್ಮೆ ಮೆಟ್ಟಲು ಸದ್ದು ಮಾಡಿತು. ಬಾಗಿಲು ತೆರೆದುಕೊಂಡಿತು. ಗುಂಪು ಗುಂಪೇ ನನ್ನ ಕೋಣೆಯೊಳಕ್ಕೆ ನುಗ್ಗಿತು—ಮಿತ್ರರು, ಸಹೋದ್ಯೋಗಿಗಳು ಪರಿಚಿತರು, ಅಪರಿಚಿತರು ನನ್ನನ್ನು ಸುತ್ತುವರಿದು ಹಸ್ತಲಾಘವ ಮಾಡಿದರು. ನಿರ್ದೇಶಕ ನುಗ್ಗಿ ಬರುತ್ತಾ, "ಅಂತೂ ಕಾಲದ ಮಾಪನದ ಬಗ್ಗೆ ಅದರ ಸಂಕೋಚ-ವಿಕಾಸ ಬಗ್ಗೆ ಭಾರಿ ಸಿದ್ಧಿಯನ್ನು ಸಾಧಿಸಿದೆ," ಎಂದು ಶುಭಾಶಯಗಳನ್ನು ಅರ್ಪಿಸುತ್ತಾ, "ಪೂರ್ವ ಕಾಲದಲ್ಲಿ ನಿನ್ನ ಲಾಂಛನ ಗೂಬೆಯಾಗಿರುತ್ತಿತ್ತು ಗೊತ್ತೇ? ನಿನಗೆ ನೆನಪಿದೆಯೇ, ನೀನೇ ಒಮ್ಮೆ ಅದು ಸಂಕೇತ ಎಂದಿದ್ದೆ," ಎಂದ.

"ನಾನು ಅದು ನಿಜವೆಂದು ನಂಬುತ್ತೇನೆ. ಅದಕ್ಕೆ ಈಗ ಪುರಾವೆ ಸಿಕ್ಕಿತು," ಎಂದೆ "ಒಂದು ವರ್ಷದಲ್ಲಿ ಒಂದು ಬಾಳನ್ನೆಲ್ಲಾ ಮುಗಿಸಿದೆ. ಇನ್ನೂ ಎಷ್ಟು ವರ್ಷಗಳು ನನ್ನ ಪಾಲಿಗೆ ಉಳಿದಿವೆ? ಕಾಲನ ಕೊನೆಯಿಲ್ಲದ ಕಡಲೇ ನನ್ನದು."

ನಾನು ಯಾರಿಗೆ ಕೃತಜ್ಞತೆ ಸಲ್ಲಿಸಲಿ? ಕಿಟಿಕಿಯತ್ತ ನೋಡಿದೆ. ಗೂಬೆ ಇರಲಿಲ್ಲ. ಗಾಜಿನ ತೊಟ್ಟಿಯಲ್ಲಿ ತಾವರೆ ಅರಳಿತ್ತು. ಹೊರಗಡೆ ಬಾನಿನಲ್ಲಿ ಕೆಲವು ಹಕ್ಕಿಗಳು ಹಾರುತ್ತಿದ್ದವು.

ಕಾಲದ ಕಡಲು ನನ್ನ ಪಾದಗಳನ್ನು ತೊಯ್ಯುತ್ತಿತ್ತು. ಕಡಲ ದಂಡೆಯಲ್ಲಿ ಮತ್ತೆ ಜೀವನ-ವನ್ನು ಹೊಸದಾಗಿ ಪ್ರಾರಂಭಿಸಲು ಸಿದ್ಧನಾಗಿದ್ದೆ. ತೆರೆಯ ಮೇಲೆ ತೆರೆ, ರಹಸ್ಯಮಯ ಭವಿಷ್ಯ ಓಡಿಬಂದು ಸೆಳೆದುಕೊಂಡಿತು. ನಾಳೆ ಕ್ಷಿತಿಜದ ದೂರದ ಅಂಚಿನಲ್ಲಿ ತೇಲುತ್ತಿರುತ್ತೇನೆ. ನನಗೆ ಹೆದರಿಕೆ. ಒಂದು ವರ್ಷ ಕಾಲ ನನ್ನೊಡನಿದ್ದ ಗೂಬೆ ಇರಲಿಲ್ಲ. ಅದರ ಜತೆ ಒಗ್ಗಿಹೋಗಿತ್ತು. ಅದರ ನೆನಪಿನ ನೆರವಿಲ್ಲದೆಯೇ ನಾನು ಬಾಳು ಸಾಗಿಸಬಲ್ಲನೇ?

ದರೋಡೆಖೋರರ ಪ್ರಧಾನಿಯ ನೆನಪಾಯಿತು– ಗಡಿಯಾರ. ಭಯದಿಂದ ಕಂಪಿಸಿದೆ. ಅದರ ಸದ್ದಿಲ್ಲ. ಅದನ್ನು ಹೊರಕ್ಕೆಳೆದು ನೋಡಿದೆ... ನಿಂತುಹೋಗಿತ್ತು. ಒಂದು ವರ್ಷ ಕಳೆದಿತ್ತು. ಮತ್ತೆ ಅದಕ್ಕೆ ಕೀಲಿ ಕೊಡಬೇಕಿತ್ತು.

ಇಪ್ಪತ್ತು ಬಾರಿ ಅದನ್ನು ತಿರುಗಿಸಿದೆ. ಮತ್ತೆ ಅದು ತನ್ನ ಕೆಲಸ ಪ್ರಾರಂಭಿಸಿತು. 'ಟಿಕ್ ಟಿಕ್' ಎನ್ನುತ್ತಾ ಹೊಸ ವರ್ಷವನ್ನು ಪ್ರವೇಶಿಸಿತು. ✡



This Magazine, owned by the Loka Shikshana Trust, Hubli, is printed & publish[ed] by B. G. Guttal at the Samyukta Karnatak Press, Koppikar Road, Hubli

Representatives Bombay: V. S. Mani, Phone: 472794; Calcutta: H. Muzamda[r] Phone: How. 67-3164; Madras: P. M. Srinivasan, Phone: 33748; New Delh[i] R. Chopra, Phone: 228130.



ಸಫಲತೆಯ
ಮೇಲೆ
ನೆಲೆಬೆಳಕು
ದಾವರಿನ್
'ಟೆರೀನ್' ಕಾಟನ್ ಶರ್ಟಿಂಗ್ಸ್
ರಾಮ್‌ಸನ್ ಅಂಡ್
ವೈಡ್‌ಸ್ಪ್ರೆಡ್
'ಟೆರೀನ್' ಕಾಟನ್ ಸೂಟಿಂಗ್ಸ್
ದಾವಣಗೆರೆ
ಬಟ್ಟೆಗಳು
Thomas/dcm/4/72 KN

**KASTURI** PRICE: RE 1-00 Regd No. BG 131
*Registered with the Registrar of Newspapers for India under No. 3633/57*